# ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ

ಸಂಶೋಧಕರು
ರೇವತಿ ಆರ್.ಪಿ

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ





ಸಮಾಜ ವಿಜ್ಞಾನಗಳ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ ೫೮೩೨೭೬
೨೦೧೩

# ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ

ಸಂಶೋಧಕರು

**ರೇವತಿ. ಆರ್.ಪಿ.**

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ




ಸಮಾಜ ವಿಜ್ಞಾನಗಳ ನಿಕಾಯ

## ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ ೫೮೩ ೨೭೬

೨೦೧೩

## ದೃಢೀಕರಣ ಪತ್ರ

ಶ್ರೀಮತಿ ರೇವತಿ ಆರ್.ಪಿ. ಅವರು **"ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ"** ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ಪಿ.ಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಪ್ರೌಢಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ ೫೮೩೨೭೬.

## ಪ್ರಮಾಣ ಪತ್ರ

"**ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ**" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿ.ಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನಾ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧಕಿ

ರೇವತಿ. ಆರ್. ಪಿ.

ರೇವತಿ. ಆರ.ಪಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ ೫೮೩೨೭೬.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೦.೧೦.೨೦೧೩

# ಕೃತಜ್ಞತೆಗಳು

**"ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ"** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿ.ಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲು ನನಗೆ ತುಂಬಾ ಹರ್ಷವೆನಿಸುತ್ತದೆ. ಈ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ನನ್ನ ಅಧ್ಯಯನಕ್ಕೆ ನೆರವಾದವರಿಗೆ ಕೃತಜ್ಞತೆಗಳನ್ನು ಸಲ್ಲಿಸುವುದು ನನ್ನ ಆದ್ಯ ಕರ್ತವ್ಯ ಹಾಗೂ ಸಂತೋಷದ ಸಂಗತಿ.

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿ.ಎಚ್.ಡಿ. ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ **ಡಾ. ಎ. ಮುರಿಗೆಪ್ಪ** ಮತ್ತು **ಡಾ. ಹಿ.ಚಿ. ಬೋರಲಿಂಗಯ್ಯ** ಅವರಿಗೆ, ಮಾನ್ಯ ಕುಲಸಚಿವರಾದ **ಶ್ರೀ ಡಾ. ಮಂಜುನಾಥ ಬೇವಿನಕಟ್ಟಿ** ಮತ್ತು **ಡಾ. ಟಿ.ಪಿ. ವಿಜಯ್** ಅವರಿಗೆ, ಅಧ್ಯಯನಾಂಗದ ಹಿಂದಿನ ನಿರ್ದೇಶಕರಾದ **ಡಾ. ವೀರೇಶ್ ಬಡಿಗೇರ್, ಡಾ.ಎಫ್.ಟಿ. ಹಳ್ಳಿಕೇರಿ** ಹಾಗೂ ಇಂದಿನ ನಿರ್ದೇಶಕರಾದ **ಡಾ. ಅಶೋಕ್ ಕುಮಾರ್ ರಂಜೇರೆ** ರವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟು, ನನ್ನನ್ನು ಪ್ರೋತ್ಸಾಹಿಸಿ ಅಧ್ಯಯನದ ಎಲ್ಲಾ ಸಂದರ್ಭಗಳಲ್ಲೂ ಚರ್ಚಿಸಿ, ಓದಿ, ತಿದ್ದಿ, ತೀಡಿ ಮಾರ್ಗದರ್ಶನ ಮಾಡಿದ ನೆಚ್ಚಿನ ಗುರುಗಳು ಹಾಗೂ ಜಾನಪದ ಅಧ್ಯಯನ ವಿಭಾಗದ ಹಿರಿಯ ಪ್ರಾಧ್ಯಾಪಕರಾದ **ಡಾ. ಮಂಜುನಾಥ ಬೇವಿನಕಟ್ಟಿ** ರವರಿಗೆ ನಾನು ಋಣಿಯಾಗಿರುತ್ತೇನೆ.

ಆರಂಭದಿಂದಲೂ ಅಧ್ಯಯನದ ಇತಿಮಿತಿಗಳನ್ನು ಚರ್ಚಿಸುತ್ತಾ ಅಧ್ಯಯನದ ವಿಷಯದ ಬಗೆಗೆ ಪ್ರತಿಯೊಂದು ಹಂತದಲ್ಲಿಯೂ ಸಲಹೆ ಸೂಚನೆಗಳನ್ನು ನೀಡಿ ಅಧ್ಯಯನಕ್ಕೆ ಮತ್ತಷ್ಟು ಗಟ್ಟಿತನವನ್ನು ತಂದುಕೊಡುವಲ್ಲಿ ಅನುಕೂಲ ಮಾಡಿದ ಜಾನಪದ ಅಧ್ಯಯನ ವಿಭಾಗದ ಮುಖ್ಯಸ್ಥರಾದ **ಡಾ. ಮೊಗಳ್ಳಿ ಗಣೇಶ,** ಹಾಗೂ ಗುರುಗಳಾದ **ಡಾ. ಸ.ಚಿ.ರಮೇಶ್, ಡಾ. ಹೆಬ್ಬಾಲೆ ನಾಗೇಶ್, ಶ್ರೀ ಸಿ.ಟಿ. ಗುರುಪ್ರಸಾದ್,** ಹಾಗೂ ವಿಭಾಗದ ಸಿಬ್ಬಂದಿಗಳಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ಆರಂಭಿಕ ದಿನಗಳಿಂದಲೂ ಸದಾ ನನ್ನ ಶ್ರೇಯೋಭಿವೃದ್ಧಿಯನ್ನೇ ಬಯಸುತ್ತಿದ್ದ ನನ್ನ ಪತಿ **ಪ್ರದೀಪ್ ಆರ್. ಸಾಕ್ರೆ,** ಹಾಗೂ ನಾನು ಬರೆಯುವುದನ್ನು ನೋಡುತ್ತಾ, ಅತ್ತು, ಆಡಿ, ನಗುತ್ತಿದ್ದ ನನ್ನ ಪುಟ್ಟ ಕಂದ **ವಿಘ್ನೇಶ್. ಪಿ. ಸಾಕ್ರೆ (ವಚನ್ ಸಾಕ್ರೆ)** ಇವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ನನ್ನನ್ನು ಸಾಕಿ ಸಲಹಿದ ನನ್ನ ಪ್ರೀತಿಯ ಅಜ್ಜ ದಿವಂಗತ **ಟಿ.ವಿ. ಶ್ರೀನಿವಾಸರಾವ್,** ಅಜ್ಜಿ **ಕಲ್ಯಾಣಮ್ಮ** ರವರಿಗೆ ನನ್ನ ನಮನಗಳು.

ಯಾವಾಗಲೂ ನನ್ನ ಯಶಸ್ಸನ್ನು ಬಯಸುತ್ತಾ ನನ್ನ ಶೈಕ್ಷಣಿಕ ಪ್ರಗತಿಗೆ ಸದಾ ಹರಸುತ್ತಾ ಬಂದಿರುವ **ಶ್ರೀಯುತ ಎಸ್.ವಿ. ತಿಮ್ಮಯ್ಯ** ರವರಿಗೆ ನನ್ನ ನಮನಗಳು. ಹಾಗೆಯೇ **ರಾಷ್ಟ್ರೀಯ ಶಿಕ್ಷಣ ಆಡಳಿತ ಮಂಡಳಿ** ಗೆ ನನ್ನ ಕೃತಜ್ಞತೆಗಳು. ಹಾಗೆಯೇ ಅಧ್ಯಯನಕ್ಕೆ ಪ್ರೋತ್ಸಾಹ ನೀಡುತ್ತಿದ್ದ **ಶ್ರೀಯುತ ಡಾ. ಎಸ್.ಟಿ.ಅರವಿಂದ್, ಶ್ರೀಮತಿ ಐಶ್ವರ್ಯ, ಅಶ್ವಿನಿ ಆನಂದ್, ಆಶಾ ಸತ್ಯನ್‌ದೇವ್** ರವರಿಗೆ ನನ್ನ ನೆನಪುಗಳು.

ನನ್ನ ಪಿ.ಎಚ್.ಡಿ. ಅಧ್ಯಯನದ ಪ್ರಗತಿಗೆ ಸಂಪೂರ್ಣ ಸಹಕಾರ ನೀಡಿದ **ಡಾ.ಎಂ.ಕೊಟ್ರೇಶ್** ರವರಿಗೆ ನಾನು ಋಣಿಯಾಗಿರುತ್ತೇನೆ. ನನ್ನ ಶೈಕ್ಷಣಿಕ ಪ್ರಗತಿಗೆ ಸಹಕರಿಸಿದ **ಡಾ. ಶ್ರೀಕಂಠಕೂಡಿಗೆ, ಎ.ಆರ್. ಪರಮೇಶ್ವರಪ್ಪ, ವೀರೇಶ್, ನಾಗರಾಜ್, ತೇಲ್ಕರ್ ವಿನಾಯಕ, ಸತೀಶ್. ಎಂ., ರವಿಕುಮಾರ್, ಆರ್.ಕೆ. ವಿನಯ್, ಕುಮಾರ್ ಜಿ ಸನ್ನದ್, ಯು.ಎನ್. ಜಗದೀಶ್, ಡಾ. ಡಿ.ಜಿ. ರಮೇಶ್** ರವರಿಗೆ ನನ್ನ ಕೃತಜ್ಞತೆಗಳು.

ಯಾವಾಗಲೂ ನನ್ನ ಯಶಸ್ಸನ್ನು ನೋಡಿ ಸಂತೋಷಪಡುತ್ತಾ ಶೈಕ್ಷಣಿಕ ಪ್ರಗತಿಗೆ ಸದಾ ಹರಸುತ್ತಾ ಬಂದಿರುವ ನನ್ನ ತಂದೆ **ಪಾಂಡುರಂಗರಾವ್. ಆರ್.** ತಾಯಿ **ಚಂದ್ರಮ್ಮ,** ತಮ್ಮ **ರಾಘವೇಂದ್ರ,** ತಂಗಿ **ವಿದ್ಯಾ** ಅವರಿಗೆ ಪ್ರೀತಿಯಿಂದ ನೆನೆಯುತ್ತೇನೆ.

ನನ್ನ ಸೋದರ ಮಾವನ ಮಗನಾದ **ಟಿ.ಎಸ್. ವಿನಾಯಕ, ಟಿ.ಎಸ್. ಗಂಗಾಧರ, ಟಿ.ರಮೇಶ,** ಹಾಗೂ ಚಿಕ್ಕಮ್ಮರಾದ **ಶ್ರೀಮತಿ ಭಾರತಿ ಗುರುನಾಥ್ ಇಜಂತಕರ್, ಶ್ರೀಮತಿ ವಿಮಲ ಜಗದೀಶ್, ಶ್ರೀಮತಿ ರಾಜೇಶ್ವರಿ ಕಿರಣ್ ಸಾಕ್ರೆ** ರವರಿಗೆ ನನ್ನ ನೆನಪುಗಳು.

ನನ್ನ ಸಂಶೋಧನಾ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಕ್ಷೇತ್ರಕಾರ್ಯದಲ್ಲಿ ನನಗೆ ಸಹಾಯ, ಸಹಕಾರ ನೀಡಿದ ಬಾಹುಸಾರ ಕ್ಷತ್ರಿಯ ಸಮುದಾಯದ ಎಲ್ಲಾ ಮಾಹಿತಿದಾರರಿಗೆ ತುಂಬಾ ಅಭಾರಿಯಾಗಿರುವೆ.

ಸದಾ ನನ್ನ ಯಶಸ್ಸನ್ನೇ ಬಯಸುವ **ಡಾ. ಟಿ.ಆರ್. ಪುರುಷೋತ್ತಮ ರಂಗಧೋಳ್,** ಬಾಹುಸಾರ ಕ್ಷತ್ರಿಯ ಸಮಾಜದ ಅಧ್ಯಕ್ಷರು. ಹಾಗೂ **ಶ್ರೀಮತಿ ಮತ್ತು ಶ್ರೀ ಶಾಂತಕುಮಾರ್ ಸಾಕ್ರೆ, ಸಂದೀಪ್ ಸಾಕ್ರೆ** ರವರಿಗೆ ನನ್ನ ನೆನಪುಗಳು.

ಅಧ್ಯಯನಕ್ಕೆ ಪ್ರೋತ್ಸಾಹಿಸಿಎ ನನ್ನ ಮಾವಂದಿರಾದ **ಶ್ರೀಮತಿ ಜ್ಯೋತಿ ಸದಾನಂದ್, ಶ್ರೀಮತಿ ಮತ್ತು ಶ್ರೀ ಎಸ್.ವಿ.ಮುರಳೀಧರ, ಶ್ರೀಮತಿ ಮತ್ತು ಶ್ರೀ ಎಸ್.ವಿ.ಪ್ರೇಮನಾಥ್, ಶ್ರೀಮತಿ ಮತ್ತು ಶ್ರೀ ಎಸ್.ವಿ. ರಾಮನಾಥ್, ಶ್ರೀಮತಿ ಮತ್ತು ಶ್ರೀ ಎಸ್.ವಿ. ರಾಘವೇಂದ್ರ, ಶ್ರೀಮತಿ ಮತ್ತು ಶ್ರೀ ಎಸ್.ವಿ. ಗೋಪಿನಾಥ** ಹಾಗೂ **ಶ್ರೀಮತಿ ಸುಮನ್ ಗಣಪತ್ ಕಾಕಡೆ, ಶ್ರೀಮತಿ ಜಯಶೀಲ ಮನೋಹರ್ ಕಾಕಡೆ, ಶ್ರೀಮತಿ ಸುಶೀಲ ಅಕ್ಕೋಜಿರಾವ್ ಪುಟಾಣೆ, ಶ್ರೀಮತಿ ರೂಪಾ ಸತ್ಯೇಂದ್ರರಾವ್ ಬೊಂಗಾಳೆ, ಶ್ರೀಮತಿ ಪಲ್ಲವಿ ನಾಗರಾಜ್ ಕಾಕಡೆ** ರವರಿಗೆ ನನ್ನ ನೆನಪುಗಳು.

ಎಸ್.ಆರ್.ಎನ್.ಎಂ.ಎನ್. ಕಾಲೇಜಿನ ಪ್ರಾಂಶುಪಾಲರಾದ **ಪ್ರೊ. ಆರ್.ಕೆ. ಬಾಳಿಗಾ** ರವರಿಗೆ, ಅಧೀಕ್ಷಕರಾದ **ಮಾಧವಚಾರ್** ರವರಿಗೆ, ಹಾಗೂ ಅಣ್ಣನ ಸ್ಥಾನದಲ್ಲಿದ್ದು ಸಲಹೆ

ಸೂಚನೆಗಳನ್ನು ನೀಡುತ್ತಿದ್ದ ಗಣಿತಶಾಸ್ತ್ರದ ವಿಭಾಗದ ಮುಖ್ಯಸ್ಥರಾದ **ಕೆ.ಜಿ.ರವೀಂದ್ರ** ರವರಿಗೆ, **ದತ್ತಾತ್ರಿ** ರವರಿಗೆ, **ಡಾ. ಕೆ.ಎಲ್. ಅರವಿಂದ್, ಹೆಚ್.ಟಿ. ವಿಜಯ್ ಕುಮಾರ್** ರವರಿಗೆ, **ವೈ.ಎಂ. ಸುಜಾತ** ರವರಿಗೆ, **ಜ್ಯೋತಿ, ವಾಸುದೇವ ಕುಲಕರ್ಣಿ, ಚಂದ್ರಕಾಂತ ಭಟ್, ಭಾಗ್ಯ** ರವರಿಗೆ ಹಾಗೂ ನನ್ನ ಎಲ್ಲಾ ಸಹೋದ್ಯೋಗಿ ಮಿತ್ರರಿಗೂ ನನ್ನ ನೆನಹುಗಳು.

ನನ್ನ ಪಿ.ಎಚ್.ಡಿ. ಮಹಾಪ್ರಬಂಧವನ್ನು ಸುಂದರವಾಗಿ ಅಂದವಾದ ಅಕ್ಷರ ರೂಪದಲ್ಲಿ ಸಂಯೋಜಿಸಿದ "**ಸ್ನೇಹಮಿಲನ ಅಸೋಸಿಯೇಟ್ಸ್, ಶಿವಮೊಗ್ಗ** " ರವರಿಗೆ ನನ್ನ ನಮನಗಳು.

## ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ಮತ್ತು ವ್ಯಾಪ್ತಿ

೧.೧ ಪೀಠಿಕೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ ಮತ್ತು ವಿಧಾನ

೧.೪ ಇದುವರೆಗಿನ ಬಾಹುಸಾರ ಕ್ಷತ್ರಿಯ ಸಮುದಾಯದ ಅಧ್ಯಯನ ಸಮೀಕ್ಷೆ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ಮತ್ತು ವ್ಯಾಪ್ತಿ

### ೧.೧ ಪೀಠಿಕೆ

ಪ್ರಪಂಚದಲ್ಲೇ ಭಾರತ ದೇಶವು ವಿಶಿಷ್ಟವಾದ ಸಂಸ್ಕೃತಿ, ಸಂಪ್ರದಾಯ. ಆಚಾರ, ವಿಚಾರ, ವರ್ಣ, ಸಮುದಾಯಗಳನ್ನು ಹೊಂದಿದೆ. ಅನಾದಿ ಕಾಲದಿಂದಲೂ ಒಂದಲ್ಲ ಒಂದು ಕಾರಣದಿಂದ ಭಾರತೀಯ ಜನಪದ ಸಮುದಾಯದಲ್ಲಿ ಬದುಕುತ್ತಾ ಬಂದಿರುವ ಬಾಹುಸಾರ ಕ್ಷತ್ರಿಯ ಸಮುದಾಯದವರು ಕರ್ನಾಟದಲ್ಲಿ ದೊರಕುತ್ತಾರೆ. ಬಾಹುಸಾರ ಕ್ಷತ್ರಿಯರು ಭಾರತ ದೇಶದ ವಿವಿಧ ಮೂಲೆಗಳಲ್ಲಿ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಇವರು ಕಾಡು ಮೇಡು ದಾಟಿ ಜೀವನ ನಡೆಸುತ್ತಾ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಸಮುದಾಯದಿಂದ ಕೂಡಿದ ಇವರು ಒಂದು ಕುಟುಂಬದಂತೆ ನೋಡುವವರ ಕಣ್ಣಿಗೆ ಕಂಡುಬಂದರೂ ಸಹ, ಅದರ ಒಳಗೆ ಗಮನಿಸಿದಾಗ ಹಲವಾರು ರೀತಿಯ ಅಂತಸ್ತು, ಅಧಿಕಾರ, ವರ್ಗ, ಏಣಿ ಶ್ರೇಣಿಯಿಂದ ಕೂಡಿದ ಸಮಾಜ ವ್ಯವಸ್ಥೆ ಇರುವುದು ಕಂಡುಬರುತ್ತದೆ. ಭಾರತೀಯ ಸಮಾಜದಲ್ಲಿ ಪ್ರಮುಖವಾಗಿ ಪುರುಷಪ್ರಧಾನ ಪದ್ಧತಿ ಆಚರಣೆಯಲ್ಲಿದೆ.

ಭಾರತವು ಹಲವಾರು ಆದಿವಾಸಿ, ಬುಡಕಟ್ಟು ಸಮುದಾಯಗಳನ್ನು ಹೊಂದಿರುವ ದೇಶವಾಗಿದೆ. ಇದರಲ್ಲಿ ಒಂದೊಂದು ಬುಡಕಟ್ಟು ಸಮುದಾಯದ ಸಂಪ್ರದಾಯ, ಆಚರಣೆಗಳ, ನಂಬಿಕೆ, ಊಟೋಪಚಾರ, ರೂಢಿನಿಯಮ, ಉಡುಗೆ, ತೊಡುಗೆ ಮೊದಲಾದ ಅಂಶಗಳೊಂದಿಗೆ ಸಮುದಾಯದ ಜೀವನಾವರ್ತನ ವಿಧಾನಗಳು ಮತ್ತು ವಾರ್ಷಿಕಾವರ್ತನ ವಿಧಾನಗಳು ಇನ್ನೊಂದು ಸಮುದಾಯಕ್ಕೆ ವಿಭಿನ್ನವಾಗಿರುತ್ತದೆ. ಉದಾಹರಣೆಗೆ, ಕಾಟಿಕ್ ಸಮುದಾಯದೊಂದಿಗೆ ಅನನ್ಯತೆಯನ್ನು ಗುರುತಿಸಿಕೊಂಡಾಗ, ಕಾಟಿಕ್ ಸಮುದಾಯದವರ ಮೂಲವನ್ನು ಮಹಾರಾಷ್ಟ್ರದಿಂದ ಕಂಡುಕೊಳ್ಳಲಾಗಿದೆ. ಮಹಾರಾಷ್ಟ್ರದಿಂದಲೇ ಕಾಟಿಕ್ ಸಮುದಾಯದವರು ವಲಸೆ ಬಂದಿರುತ್ತಾರೆ. ಈ ಸಮುದಾಯದವರಲ್ಲಿ ಮೊಘಲರ ದಬ್ಬಾಳಿಕೆ ನಡೆಸಿದಂತ ಸನ್ನಿವೇಶದಲ್ಲಿ ಕೆಲವರು ಮತಾಂತರಗೊಂಡರು, ಇನ್ನು ಕೆಲವರು ದಬ್ಬಾಳಿಕೆ ಸಹಿಸಲಾಗದೇ ದಕ್ಷಿಣದ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಬಂದು, ಕೇರಳ ಹಾಗೂ ಕರ್ನಾಟಕದ ಪ್ರದೇಶಗಳಲ್ಲಿ ನೆಲೆಗೊಂಡರು. ಮೊಘಲರ ಆಡಳಿತವಿದ್ದ ಕಾಲದಲ್ಲಿ ಅವರ ದೌರ್ಜನ್ಯ ಹಾಗೂ ದಬ್ಬಾಳಿಕೆ ಈ ಸಮುದಾಯದವರ ಮೇಲೆ ಹೆಚ್ಚಾಗಿದ್ದಿತು. ಆ ಸಮುದಾಯ ಹಂದಿಯನ್ನು ದ್ವೇಷಿಸುತ್ತಿದ್ದಿತ್ತು. ಇವರು ತಮ್ಮ ಸಮುದಾಯದಲ್ಲೇ ಉಳಿಯಲು ತಮ್ಮ ಧರ್ಮವನ್ನು ಬಿಡದೇ ಉಳಿಸಿಕೊಳ್ಳುವ ಸಲುವಾಗಿ ಹಂದಿಗಳನ್ನು ಮೇಲಿನಿಂದ ಎತ್ತಿಹಾಕಿ ಅಲ್ಲಿ ಮದುವೆ ಸಮಾರಂಭ ನಡೆಸಿ ಅವರು ಆ ಹಂದಿಯ ರಕ್ತವನ್ನು ಹೆಣ್ಣು ಗಂಡುಗಳಿಗೆ ತುಳಿಸಿ ಮನೆಯನ್ನು ತುಂಬಿಸಿಕೊಳ್ಳುವ ಪ್ರತೀತಿ ಇದ್ದಿತ್ತು. ಆ ರಕ್ತವನ್ನು ತುಳಿದಿದ್ದರಿಂದ ಆ ಸಮುದಾಯವು ಹತ್ತಿರ ಬರುತ್ತಿರಲಿಲ್ಲ. ಇದೇ ಕ್ರಮೇಣ

ಮಾರ್ಪಾಡಾಗಿ ಕುರಿಗಳನ್ನು ಕಡಿಯುವ ವೃತ್ತಿ ಮುಂದುವರೆದುಕೊಂಡು ವೃತ್ತಿಯಲ್ಲಿ ಕಟುಕರು ಎನಿಸಿಕೊಂಡರು. ವೃತ್ತಿಯಲ್ಲಿ ಇವರು ಮಾಂಸ ವ್ಯಾಪಾರವನ್ನು ಮುಂದುವರೆಸಿಕೊಂಡು ಬಂದು ಬೆಳಿಗ್ಗೆ ೬ ರಿಂದ ೧೦ ಗಂಟೆಯವರೆಗೂ ಇದೇ ವೃತ್ತಿಯನ್ನು ನಡೆಸಿಕೊಂಡು ಬಂದಿರುವುದರಿಂದ ವಿದ್ಯಾಭ್ಯಾಸದ ಕಡೆ ಗಮನ ಹರಿಸಲಾಗದೇ ಶೈಕ್ಷಣಿಕವಾಗಿ ಈ ಸಮುದಾಯದವರು ಅತ್ಯಂತ ತೀರಾ ಹಿಂದುಳಿದರು. ಶ್ರಮಜೀವಿಗಳಿಂದ ಹಿಡಿದು ಎಲ್ಲರೂ ಇದನ್ನು ಬಳಸುವುದರಿಂದ ಕುಟುಂಬದ ಸಣ್ಣ ಹುಡುಗರೂ ಸಹ ವೃತ್ತಿಯಲ್ಲಿ ನಿರತರಾಗಿ ಶಿಕ್ಷಣದ ಕಡೆಗೆ ಗನುನಹರಿಸಲಾಗಲಿಲ್ಲ. ಇವರಿಗೆ ಒಂದು ತುಂಡು ಮಾಂಸ ಹೋದರೂ ನಷ್ಟ ಎಂಬ ಕಾರಣಕ್ಕಾಗಿ ತಮ್ಮ ಜೊತೆಯಲ್ಲಿಯೇ ಮಕ್ಕಳನ್ನೂ ವೃತ್ತಿ ನಿರ್ವಹಿಸಲು ಕರೆದುಕೊಂಡು ಹೋಗುತ್ತಿದ್ದರು.

ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ತುಂಬಾ ಹಿಂದುಳಿದ ಸಮುದಾಯ ನಮ್ಮದು ಎನ್ನುತ್ತಾರೆ ಈ ಸಮುದಾಯದ ಹಿರಿಯರು. ರಾಜಕಾರಣದಲ್ಲಿ ಈ ಸಮುದಾಯಕ್ಕೆ ಪ್ರವೇಶವಿಲ್ಲ. ಇವರ ಜನಸಂಖ್ಯೆ ನಗರಪ್ರದೇಶಗಳ ಎಷ್ಟೋ ತಾಲ್ಲೂಕುಗಳಲ್ಲಿ ಇಲ್ಲ. ೧೯೯೯ ರ ಕಾಟಿಕ್ ದರ್ಪಣ ವಿಶ್ಲೇಷಿಸಿದಾಗ ಇವರ ಜನಸಂಖ್ಯೆ ಪ್ರಮಾಣ ೧೪೦೦ ಇದ್ದಿತ್ತು. ಇಂದು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ಸಮುದಾಯದ ಜನಸಂಖ್ಯೆ ಪ್ರಮಾಣ ಸುಮಾರು ೧೭೦೦ ಇರುತ್ತದೆ.

ಸುಮಾರು ೬೪ ವರ್ಷಗಳ ನಂತರ ಕರ್ನಾಟಕದಲ್ಲಿ ಮೊಟ್ಟಮೊದಲ ಬಾರಿಗೆ ಆರ್.ಕೆ.ಸಿದ್ಧರಾಮಣ್ಣ ಎಂಬುವವರು ವಿಧಾನಪರಿಷತ್ ಸದಸ್ಯರಾಗಿದ್ದರು ಎನ್ನುವರು ಈ ಸಮುದಾಯದ ಹಿರಿಯರು. ಇನ್ನುಳಿದಂತೆ ಯಾವುದೇ ಕ್ಷೇತ್ರದಲ್ಲಿ ಈ ಸಮುದಾಯದವರು ಉನ್ನತ ಸ್ಥಾನವನ್ನು ಅಲಂಕರಿಸಿರುವ ದಾಖಲೆಗಳಿಲ್ಲ. ಕಾರಣ ಇವರು ಮಾಡುವ ವೃತ್ತಿಯಿಂದಾಗಿ ಬೇರೆ ಕೆಲಸ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಈ ಕಾರಣಕ್ಕಾಗಿಯೇ ಇವರು ರಾಜಕೀಯ ಹಾಗೂ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದವರಾಗಿದ್ದಾರೆ. ಸಮಾಜದಲ್ಲಿ ಇವರಿಗೆ ಯಾವುದೇ ಸ್ಥಾನ ಮಾನಗಳಿಲ್ಲ. ಎಲ್ಲವೂ ಅರೆಬರೆಯಾಗಿದ್ದು, ದ್ವಂದ್ವಾತ್ಮಕ ಸ್ಥಿತಿ ಈ ಸಮುದಾಯದವರಲ್ಲಿದೆ. ಹಿರಿಯ ಮುಖಂಡರುಗಳು ಶ್ರಮವಿದ್ದರೂ ಫಲ ಸಿಗುತ್ತಿಲ್ಲ. ವೈಜ್ಞಾನಿಕವಾಗಿ ನಿಜಾಂಶವಿರುವ ಸತ್ಯಾಂಶವನ್ನು ಇವರು ಕ್ಷೇತ್ರ ಕಾರ್ಯಕೈಗೊಂಡ ಸಂದರ್ಭದಲ್ಲಿ ವಿವರಿಸಿದ್ದಾರೆ.

ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವಾಗ ಹಿಂದಿನ ದಿನಗಳಲ್ಲಿ ಮಗು ಹುಟ್ಟಿದ ಮೊದಲನೆಯ ದಿನ 'ಕಾರ್ಫಲ್ ಪೂಜಾ' ಎಂದು ಆಚರಿಸುತ್ತಿದ್ದರು. ಈಗಿನ ದಿನಗಳಲ್ಲಿ ಮಗು ಹುಟ್ಟಿದ ೧೦ – ೧೧ ದಿನಗಳ ನಂತರ ಆಚರಿಸುತ್ತಾರೆ. ಈ ಪೂಜೆಯ ವಿಶೇಷತೆ ಎಂದರೆ ಮಗು ದೀರ್ಘಾಯುಷಿಯಾಗಿರಲಿ ಮತ್ತು ಮಗುವಿಗೆ ಶ್ರೇಯಸ್ಸಾಗಲಿ ಎನ್ನುವುದಾಗಿದೆ. ಇವರು ಸೆಟವಿ ಪೂಜೆಗೆ ಚೆಟ್ಟಿ ಪೂಜೆ ಎನ್ನುತ್ತಾರೆ. ಹಣೆಬರಹ ಬರೆಯುವಿಕೆಯಲ್ಲಿ ಇವರಿಗೆ ನಂಬಿಕೆಯಿಲ್ಲ. ಹಾಗಾಗಿ ಇವರು

ಕೆಲವೊಂದು ಆಚರಣೆಗಳನ್ನು ಹುಟ್ಟಿನ ಸಂದರ್ಭದಲ್ಲಿ ಆಚರಿಸುವುದಿಲ್ಲ. ಉದಾಹರಣೆಗೆ: ಸೆಟವಿ ಪೂಜೆ, ಮದುವೆ ಸಂದರ್ಭಗಳಲ್ಲಿ ಮದುಮಗನನ್ನು ಕುದುರೆಯ ಮೇಲೆ ಕುಳ್ಳಿರಿಸಿ, ಕೈಯಲ್ಲಿ ಕತ್ತಿಯನ್ನು ಹಿಡಿಸಿ, ಬಿಳಿ ಬಣ್ಣದ ವಸ್ತ್ರಗಳಿಂದ ಅಲಂಕರಿಸಿ ಮೆರವಣಿಗೆಯ ಮೂಲಕ ಮದುವೆಯ ಮಂಟಪಕ್ಕೆ ಕರೆದೊಯ್ದು ಮದುವೆಯ ಶಾಸ್ತ್ರಗಳನ್ನು ಪೂರೈಸುತ್ತಾರೆ. ಇದನ್ನು ಈ ಸಮುದಾಯದವರು ನೀಮಾಜಾಮ ಎಂದು ಕರೆಯುತ್ತಾರೆ. ಹಿಂದೆ ಮದುವೆ ಕಾರ್ಯಗಳು ೧೪ – ೧೫ ದಿನಗಳು ಮನೆಯಲ್ಲಿಯೇ ನಡೆಸಲಾಗುತ್ತಿತ್ತು, ಇಷ್ಟೂ ದಿನಗಳಲ್ಲಿ ಮಾಂಸದೂಟವೇ ಸಮಾರಂಭಗಳ ಆಹಾರ ಪದ್ಧತಿಯಾಗಿತ್ತು. ಆದರೆ ಈಗ ಈ ಆಚರಣೆಯಲ್ಲಿ ಪರಿವರ್ತನೆಯಾಗಿ ಮದುವೆಯನ್ನು ಕಲ್ಯಾಣಮಂದಿರಗಳಲ್ಲಿ ಒಂದೆರಡು ದಿನಗಳಲ್ಲಿ ಮುಗಿಸುತ್ತಾರೆ. ಮದುವೆ ಮುಗಿದು ಮನೆಗೆ ಬಂದ ಮೇಲೆ ಮಾಂಸದೂಟ ಮಾಡುವುದು ಈಗಿನ ಪದ್ಧತಿಯಾಗಿದೆ.

ಅರಾಧನೆಯಲ್ಲಿ ಇವರು ಬಹುದೇವತಾರಾಧಕರು, ಶಕ್ತಿದೇವತಾರಾಧಕರು, ಬಲಿಪೂಜಾ ಪದ್ಧತಿಯನ್ನು ಆಚರಿಸುತ್ತಾರೆ. ಹಿಂದೂ ಸಂಸ್ಕೃತಿಗೆ ಸೇರಿದ ಪಂಥೀಯರಾಗಿದ್ದು, ವಾರ್ಷಿಕ ಅಚರಣೆಗಳ ಎಲ್ಲಾ ಹಬ್ಬಗಳನ್ನೂ ಆಚರಿಸುತ್ತಾರೆ. ಇವರದೇ ಆದ ಕಲೆ ಯಾವುದೂ ಇಲ್ಲ.

ಸಾವಿನ ಸಂದರ್ಭದಲ್ಲಿ ೩ ಮತ್ತು ೧೧ ನೆ ದಿನದ ಕಾರ್ಯವನ್ನು ಮಾಡಿ ವಾರ್ಷಿಕಕ್ಕೆ ಸೇರಿಸುತ್ತಾರೆ. ಮುಸ್ಲಿಂ ಸಮುದಾಯದವರ ಕೆಲವು ಹಬ್ಬಗಳನ್ನೂ ಇವರು ಆಚರಿಸುತ್ತಾರೆ. ಇವರ ಮತಗಳು ನಿರ್ಣಾಯಕವಲ್ಲ. ಇವರು ಆರ್ಥಿಕವಾಗಿ ಹಿಂದುಳಿದಿರುವುದರಿಂದ ಇವರದೇ ಆದ ಶೈಕ್ಷಣಿಕ ಸಂಸ್ಥೆಗಳಿರುವುದಿಲ್ಲ, ಆರ್ಥಿಕ ಚಟುವಟಿಕೆಗಳನ್ನು ನಿರ್ವಹಿಸಲು ಇವರದ್ದೇ ಆದಂತಹ ಕೋ ಆಪರೇಟೀವ್ ಸೊಸೈಟಿಗಳಿಲ್ಲ, ಯಾವುದೇ ತಾಲ್ಲೂಕಿನಲ್ಲೂ ಒಂದು ಹೌಸಿಂಗ್ ಸೊಸೈಟಿಗಳಿಲ್ಲ. ಬಹಳ ವಂಚಿತ ಸಮುದಾಯ ಇದಾಗಿದೆ.

ಶಿಕಾರಿಪುರ, ಹೊಸನಗರ, ತೀರ್ಥಹಳ್ಳಿ, ಹೊಳೆಹೊನ್ನೂರು ತಾಲ್ಲೂಕುಗಳಲ್ಲಿ ಈ ಸಮುದಾಯದವರ ಒಂದೂ ಮನೆಗಳಿರುವುದಿಲ್ಲ. ಶಿವಮೊಗ್ಗ ನಗರದಲ್ಲಿ ೪೦ ಮನೆಗಳಿವೆ. ಭದ್ರಾವತಿಯಲ್ಲಿ ೪ ಮನೆಗಳಿವೆ. ಶಿರಾಳಕೊಪ್ಪದಲ್ಲಿ ೪೦ ಮನೆಗಳಿವೆ. ಇತ್ತೀಚಿನ ದಿನಗಳಲ್ಲಿ ಇವರಿಗೆ ಸರಕಾರ ಮೀಸಲಾತಿಯನ್ನು ೧ಎ. ಎಂದು ನೀಡಿರುತ್ತಾರೆ. (ಕಾಟಿಕಾ, ಕಾಟಿಕಾ, ಕಲಾಲ್, ಸೂರ್ಯವಂಶ ಕ್ಷತ್ರಿಯ, ಆರ್ಯ ವಂಶ ಕ್ಷತ್ರಿಯ, ಕಟುಕ, ಖಾಟಿಕ್, ಖಟುಕಾ, ಹಿಂದೂ ಕ್ಷತ್ರಿಯ).

ಇವರಿಗೆ ಸೀಮಿತ ದೇವಾಲಯಗಳಿಲ್ಲ. ಹಿಂದಿನ ದಿನಗಳಲ್ಲಿ ಈ ಸಮುದಾಯದವರಿಗೆ ದೇವಾಲಯ ಪ್ರವೇಶ ನಿಷಿದ್ಧವಾಗಿತ್ತು. ಈಗಲೂ ಕೆಲವೊಂದು ದೇವಾಲಯಗಳಲ್ಲಿ ಇವರಿಗೆ ಪ್ರವೇಶವು ನಿಷಿದ್ಧವಾಗಿರುತ್ತದೆ. ಈಗಲೂ ಮೇಲ್ವರ್ಗದವರ ಮನೆಗಳಲ್ಲಿ ಇವರನ್ನು ಸೇರಿಸಿಕೊಳ್ಳಲಾಗುವುದಿಲ್ಲ.

### ೧.೨ ಅಧ್ಯಯನದ ಉದ್ದೇಶ

"ಸಮಾಜದ ಒಬ್ಬ ಜೀವಿಯಾಗಿ, ಮಾನವ ಪರಂಪರಾನುಗತವಾಗಿ ರೂಢಿಸಿಕೊಂಡು ಬಂದಿರುವ ವರ್ಗಾಯಿಸಲ್ಪಡುವ ಹಂಚಿಕೊಳ್ಳುವ, ಗೌರವಿಸುವ, ಆಲೋಚನೆಗಳ, ಮೌಲ್ಯಗಳ ನಿರ್ಮಾಣ ಮಾಡುವ ವಸ್ತುಗಳ ಮೊತ್ತವನ್ನು ಸಂಸ್ಕೃತಿ ಎಂದು ಕರೆಯಬಹುದು".

"ಜಾನಪದ ಸಾಹಿತ್ಯವು ಜನಸಮುದಾಯದ ಸಮಷ್ಟಿ ಸೃಷ್ಟಿ. ಸಾಮಾಜಿಕ ಜೀವನದ ಸಂಕೇತ. ರಾಷ್ಟ್ರೀಯ ಸಂಸ್ಕೃತಿಯ ತಾಯಿಬೇರು. ಜನಪದರ ಆಲೋಚನೆ, ಭಾಷೆ ಸರಳವಾದದ್ದು. ಮಾತಿನ ಶಕ್ತಿ, ಅಭಿವ್ಯಕ್ತಿ, ಸಹಜತೆ ಸ್ಪಷ್ಟವಾದದ್ದು.

ಬಾಹುಸಾರ ಕ್ಷತ್ರಿಯ ಸಮುದಾಯದವರು ತಮ್ಮ ಮೂಲ ಸಂಸ್ಕೃತಿಯ ಅಂಗವಾಗಿಯೇ ಉಳಿದಿರುವುದನ್ನು ಕಂಡಾಗ ಇವರ ಬದುಕಿನಲ್ಲಿ ಏನೋ ವಿಶೇಷತೆ ಇರುವುದು ಕಂಡುಬರುತ್ತದೆ. ಒಳಹೊಕ್ಕಾಗ ಅಲ್ಲಿ ಮತ್ತಷ್ಟು ಗಾಢವಾದ ಸಂಕೀರ್ಣ ವ್ಯವಸ್ಥೆಯಿರುವುದು ಗೋಚರವಾಗುತ್ತದೆ. ಇಲ್ಲಿ ಸಂಸ್ಕೃತಿಯು ಮೂರು ಹಂತಗಳಲ್ಲಿ (ಆದಿವಾಸಿ – Primitive, ಗ್ರಾಮೀಣ – Rural, ನಗರ – Urban) ಬಹುಮುಖ್ಯವಾದ ಪಾತ್ರ ವಹಿಸುತ್ತದೆ.

ಅನೇಕ ಶತಮಾನಗಳಿಂದಲೂ ಬೆಟ್ಟಗುಡ್ಡ ಪ್ರದೇಶಗಳಲ್ಲಿ, ಮರಳುಗಾಡಿನಲ್ಲಿ ವಾಸವಾಗಿರುವ ಸಾಮಾಜಿಕ ವರ್ಗಗಳು ತಮ್ಮ ಸಂಸ್ಕೃತಿಯನ್ನು ಪ್ರತ್ಯೇಕವಾಗಿಯೇ ಉಳಿಸಿಕೊಂಡು ಬಂದಿರುವ ವರ್ಗಗಳಲ್ಲಿ ರಕ್ತ ಸಂಬಂಧ ಬಹುಮುಖ್ಯವಾದ ಅಂಶ. ಇವರ ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆ ರಕ್ತ ಸಂಬಂಧದ ಮೇಲೆ ಅವಲಂಬಿತವಾಗಿರುತ್ತದೆ. ಇಂತಹ ಜನವರ್ಗಗಳು ಬಿಗಿಯಾದ ನಿಯಮಗಳನ್ನು ಹೊಂದಿದ್ದು, ಹೊರಗಿನ ಯಾರನ್ನೂ ಅನುಮಾನದಿಂದಲೇ ನೋಡುವ ಪರಿಪಾಠವಿರುತ್ತದೆ. ಭಿನ್ನವಾದ ಸಂಸ್ಕೃತಿಯಿಂದ ಕೂಡಿದ್ದು ನಾಗರೀಕತೆ ಎಂಬಂತೆ ಗೋಚರವಾಗುತ್ತದೆ. ಈ ಜನ ತಮ್ಮದೇ ಆದ ಪ್ರತ್ಯೇಕ ಭಾಷೆ, ಆಚಾರ, ವಿಚಾರ, ವ್ಯವಹಾರ, ಸಾಹಿತ್ಯ ಮೊದಲಾದವುಗಳನ್ನು ಹೊಂದಿರುತ್ತವೆ.

ಸಮುದಾಯದ ಅಧ್ಯಯನ ಮಾಡುವಾಗ ಅವರ ವಾಸಸ್ಥಳ, ಅವರಲ್ಲಿರುವ ಮೌಖಿಕ ಪರಂಪರೆ, ಸಂಪ್ರದಾಯ, ಆಚಾರ ವಿಚಾರ, ರೀತಿ ರಿವಾಜುಗಳು, ನಂಬಿಕೆ, ಧರ್ಮ, ಕಲೆ, ಹುಟ್ಟಿನಿಂದ ಸಾವಿನವರೆಗೆ ಬರುವ ಎಲ್ಲ ಬಗೆಯ ಜೀವನಾವರ್ತನದ ಆಚರಣೆಗಳು ಅವುಗಳಲ್ಲಿ ಅವರು ಇಟ್ಟಿರುವ ನಂಬಿಕೆ, ಕೌಟುಂಬಿಕ ವ್ಯವಸ್ಥೆ, ಸಾಮಾಜಿಕ ಜೀವನ, ನಾಗರಿಕತೆಯ ಪ್ರಭಾವದಿಂದ ಆಗಿರುವ ಬದಲಾವಣೆ, ವ್ಯಕ್ತಿ ಆಹಾರ ಪದ್ಧತಿ, ಮೊದಲಾದವುಗಳನ್ನು ಗಮನಿಸಬೇಕಾಗುತ್ತದೆ. ಯಾವುದೇ ಒಂದು ಸಮುದಾಯದ ಸಂಸ್ಕೃತಿಯು ನಿಂತ ನೀರಲ್ಲ. ಅದು ಸದಾಹರಿಯುತ್ತಿರುವ ಜೀವಜಲ. ನಿತ್ಯ ಪರಿವರ್ತನಾಶೀಲವಾದುದು. ಅನ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗದೆ ಪ್ರತ್ಯೇಕತೆಯನ್ನು

ಕಾಯ್ದುಕೊಂಡಿರುವ ಸರಸ್ಕೃತಿಗಳಲ್ಲಿಯೂ ಕೂಡ ಕಾಲಾಂತರದಲ್ಲಿ ಎಷ್ಟೋ ಬದಲಾವಣೆಗಳಾಗುತ್ತಿರುವುದನ್ನು ಕಾಣುತ್ತೇವೆ. ಇದು ಅನಿವಾರ್ಯವೂ ಹೌದು.

ಸಮುದಾಯ ಅಧ್ಯಯನ ಮೊದಲು ಭಾಷೆಯ ಅಧ್ಯಯನದೊಂದಿಗೆ ಬೆಳೆದು ಬಂದವು. ಜನಪದ ಹಾಡುಗಳು, ರೂಢಿ ಸಂಪ್ರದಾಯಗಳು ಸಮುದಾಯ ಅಧ್ಯಯನದ ಜೀವಾಳ. ಲಿಖಿತ ದಾಖಲೆಗಳನ್ನು ಸೇರದ ಎಷ್ಟೋ ಸಮುದಾಯದ ಇತಿಹಾಸ ಮೌಖಿಕ ಪರಂಪರೆಯಲ್ಲಿ ಉಳಿದಿರುತ್ತದೆ. ಜನಾಂಗವೊಂದು ಉಳಿಸಿಕೊಂಡ ಪರಂಪರೆಯನ್ನು ದಾಖಲಿಸುವುದು. ಅನಂತರ ಅದರ ವಿಶೇಷಣೆ, ಚರ್ಚೆ ಸಿದ್ಧಾಂತಗಳ ಬೆಳವಣಿಗೆಗೆ ಅವಕಾಶವನ್ನು ಮಾಡಿಕೊಡಬಹುದು. ಹಾಗೆಯೇ ಸಾಮಾಜಿಕ ಕಟ್ಟುಪಾಡುಗಳು ನೋಡಲೇಬೇಕಾದ ಕುತೂಹಲಕಾರಿ ವಿಚಾರಗಳು ಆಗಿರುತ್ತದೆ. ಜಗತ್ತಿನ ಬಹುತೇಕ ಸಮಾಜಗಳು, ವೈವಾಹಿಕ ಸಂಬಂಧಗಳ ಸುತ್ತಾ ಹೆಚ್ಚು ಕಟ್ಟು ಪಾಡುಗಳನ್ನು ಹಾಕಿಕೊಳ್ಳುತ್ತದೆ. ಅದು ಆ ಸಮಾಜದ ಪ್ರಬಲ ಅಂಶವೂ ಆಗಿರಬಹುದು ಅಥವಾ ದೌರ್ಬಲ್ಯವು ಆಗಿರಬಹುದು. ಬೇರೊಂದು ಸಾಮಾಜಿಕ ನೆಲೆಯಲ್ಲಿ ನಿಂತು ತೀರ್ಪು ನೀಡುವುದರಲ್ಲಿ ಅರ್ಥವಿಲ್ಲವೆಂದೇ ಹೇಳಬೇಕಾಗುತ್ತದೆ.

ಬಹಳ ಹಿಂದಿನಿಂದಲೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯೇ ಮುಂದುವರಿದುಕೊಂಡು ಬಂದಿದೆ. ಸಾಮಾನ್ಯವಾಗಿ ಮನೆಯ ಹಿರಿಯನೇ ಯಜಮಾನನಾಗಿರುತ್ತಾನೆ. ಆತನ ಆದೇಶದಂತೆ ಎಲ್ಲರೂ ನಡೆದುಕೊಳ್ಳಬೇಕಾಗುತ್ತದೆ. ಹೆಣ್ಣು ಮಕ್ಕಳಂತೂ ಗಂಡು ಮತ್ತು ಹಿರಿಯರಿಗೆ ವಿಧೇಯರಾಗಿ ನಡೆದುಕೊಳ್ಳಬೇಕಾಗಿದೆ. ಮದುವೆ, ಆಸ್ತಿ ವಿಷಯದಲ್ಲಿ ಪುರುಷನದೇ ಅಧಿಕಾರ. 'ಕೈಲಿಲ್ಲದವನು ಕಳ್ಳ, ಹೊಟ್ಟೆಗಿಲ್ಲದವ ಬಡವ' ಎಂಬ ಗಾದೆಯಂತೆ ಬಡತನ ಮತ್ತು ಮೌಢ್ಯವೂ ಇವರ ಹೀನ ಸ್ಥಿತಿಗೆ ಕಾರಣವಾಯಿತು. ಕಾಲ ಕಳೆದಂತೆ ಇವರು ಊರ ಹೊರಗಿನ ತಮ್ಮ ತಾತ್ಕಾಲಿಕ ಬಿಡಾರಗಳನ್ನು ಊರಿನಲ್ಲಿಯೇ ಕಂಡುಕೊಳ್ಳುವಂತಾಯಿತು. ಕೆಲವರು ನೆಲೆನಿಂತು ಊರಿಗೆ ಹೊಂದಿಕೊಂಡಂತೆ ಹಟ್ಟಿಗಳನ್ನು ಕಟ್ಟಿಕೊಂಡರು. ಕೆಲವರು ಸ್ವತಂತ್ರವಾದ ಹಟ್ಟಿಗಳನ್ನು ನಿರ್ಮಿಸಿಕೊಂಡು ಗುಂಪುಗುಂಪಾಗಿ ವಾಸಿಸತೊಡಗಿದರು.

ಮಾನವನು ಸಂಘಜೀವಿ. ಸಮಾನ ಆಸಕ್ತಿಗಳನ್ನು ಹಾಗೂ ರೀತಿ – ನೀತಿಗಳನ್ನು ಹೊಂದಿದ ವ್ಯಕ್ತಿಗಳ ಗುಂಪಿನಲ್ಲಿ ಬದುಕಲು ಅಪೇಕ್ಷಿಸುತ್ತಾನೆ. ಇಂತಹ ಗುಂಪನ್ನು ಸಮಾಜ ಎಂದು ಕರೆಯಬಹುದು. ಈ ಸಮಾಜ ಎನ್ನುವುದು ಒಂದು ಘಟಕ ಎಂದು ಪರಿಭಾವಿಸಿದರೆ, ಈ ಘಟಕವು ಅಥವಾ ಸಮಾಜವು ತನ್ನದೇ ಆದ ರೀತಿ – ನೀತಿ, ವಿಧಿ – ನಿಷೇಧಗಳನ್ನು ರೂಢಿಸಿಕೊಂಡಿರುತ್ತದೆ. ಇಂತಹ ರೀತಿ – ನೀತಿ, ವಿಧಿ – ನಿಷೇಧಗಳು ಆಯಾ ಸಮಾಜದ ಸಮುದಾಯದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಅಂದರೆ ಪ್ರತಿಯೊಂದು ಸಮುದಾಯಕ್ಕೂ ಅದರದ್ದೇ ಆದ ಸಂಸ್ಕೃತಿ ಇರುತ್ತದೆ. ಇಂತಹ ಸಮಾಜದಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯವು ಕರ್ನಾಟಕದ ತುಂಬಾ ಕಂಡುಬರುತ್ತಿದ್ದು, ಪ್ರಾದೇಶಿಕವಾಗಿ ಅಲ್ಪ – ಸ್ವಲ್ಪ ಬದಲಾವಣೆಯನ್ನು ಹೊಂದಿರುತ್ತದೆ. ಆಚರಣೆ, ಸಂಪ್ರದಾಯ, ನಡೆ – ನುಡಿಗಳಲ್ಲಿ ಹಲ ಕೆಲವು

ವ್ಯತ್ಯಾಸಗಳನ್ನು ಹೊಂದಿದ್ದು, ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವು ಇದಕ್ಕೆ ಹೊರತಲ್ಲ. ಹಾಗಾಗಿ ಈ ಪರಿಸರದ ಬಾಹುಸಾರ ಕ್ಷತ್ರಿಯ ಸಮುದಾಯದ ಆಚರಣೆಗಳು, ಸಂಪ್ರದಾಯಗಳು, ವಿಧಿ – ನಿಷೇಧಗಳು, ಇವರ ಸಾಮಾಜಿಕ, ಅರ್ಥಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಸ್ಥಿತಿಗತಿಗಳನ್ನು ಹಾಗೂ ಈ ಪರಿಸರದ ಚಾರಿತ್ರಿಕ ಹಿನ್ನೆಲೆ ಅಲ್ಲದೆ ಸ್ವಾತಂತ್ರ್ಯ ಹೋರಾಟದಲ್ಲಿ ಇವರು ಧುಮುಕಿದ್ದು ಏಕೆ? ಇವರಿಗೆ ಪ್ರೋತ್ಸಾಹ ಸಿಕ್ಕಿದ್ದು ಹೇಗೆ? ಅಥವಾ ಇವರು ಸ್ವತಃ ಕಲಿಗಳೇ? ಅಲ್ಲದೆ ಭಾರತ ಸ್ವಾತಂತ್ರ್ಯಕ್ಕೆ ಇವರ ಕೊಡುಗೆ ಏನು? ಎಂಬುದಾಗಿ ಇಲ್ಲಿಯ ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಜೀವನದ ಪರಿಯನ್ನು ಕುರಿತು ಅಧ್ಯಯನ ನಡೆಸಲು ಮುಂದಾಗಬೇಕಾಗಿದೆ. ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಈ ರೀತಿ ಹತ್ತು ಹಲವು ಮಗ್ಗಲುಗಳಿಂದ ಅಧ್ಯಯನ ಮಾಡುವುದು ಅನಿವಾರ್ಯ ಹಾಗೂ ಇಲ್ಲಿನ ಉದ್ದೇಶವೂ ಆಗಿದೆ.

ಇಡೀ ಭಾರತ ದೇಶವನ್ನು ಪರಿಗಣಿಸಿ ಭಾರತೀಯ ಸಂಸ್ಕೃತಿ ಎಂದು ಕರೆಯಲಾಗಿದ್ದು, ಈ ಸಂಸ್ಕೃತಿಯ ಒಂದು ಘಟಕ ಬಾಹುಸಾರ ಕ್ಷತ್ರಿಯ ಸಮುದಾಯ. ಇದು ತನ್ನದೇ ಆದ ವೈಶಿಷ್ಟ್ಯ ಪೂರ್ಣ ಸುಸಂಸ್ಕೃತಿಯನ್ನು ಒಳಗೊಂಡಿದೆ. ಈ ಸಮುದಾಯದ ಬಗೆಗೆ ಶಿವಮೊಗ್ಗ ಜಿಲ್ಲೆಯ ಪರಿಸರವನ್ನು ಅನುಲಕ್ಷಿಸಿ ಸಂಪೂರ್ಣವಾಗಿ ಅಧ್ಯಯನ ಮಾಡುವುದರ ಜೊತೆಗೆ ಉಳಿದ ಸಮುದಾಯಗಳೊಂದಿಗೆ ಇರುವ ಸಂಬಂಧವನ್ನು ಅಭ್ಯಾಸಿಸುವುದನ್ನು ಉದ್ದೇಶವಾಗಿಟ್ಟುಕೊಂಡು, ಇಲ್ಲಿನ ಭೌಗೋಳಿಕ ವಿವರಣೆ, ಜನಸಂಖ್ಯೆ, ಪ್ರಮುಖ ಉದ್ದೇಶ, ಆಯಾ ಜಾತಿಗೆ ಅನ್ವಯಿಸಿದಂತೆ ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ಹಾಗೆಯೇ ಇಲ್ಲಿನ ಪ್ರಮುಖ ಬೆಳೆಗಳು, ಇಲ್ಲಿಯವರ ಜನಜೀವನ ಕುರಿತು ಅಧ್ಯಯನ ಮಾಡುವುದೂ ಕೂಡ ಪ್ರಮುಖ ಉದ್ದೇಶವಾಗಿದೆ.

ಭಾರತವು ಹಳ್ಳಿಗಳ ನಾಡು. ಇಲ್ಲಿಯ ಗ್ರಾಮಗಳು ವೈಶಿಷ್ಟ್ಯಗಳಿಂದ ಕೂಡಿವೆ. ಇಲ್ಲಿ ಕೃಷಿಯು ಪ್ರಧಾನವಾದ ವೃತ್ತಿ. ಅಂತೆಯೇ ಕೃಷಿ ಪ್ರಧಾನವಾದ ಚಟುವಟಿಕೆಗಳನ್ನು ಹಬ್ಬಗಳನ್ನಾಗಿ ಆಚರಿಸಿಕೊಂಡು ಬಂದಿದೆ. ಬಾಹುಸಾರ ಕ್ಷತ್ರಿಯ ಸಮುದಾಯವು ಕೂಡ ಆಯಾ ಗ್ರಾಮಕ್ಕೆ ಸರಿಹೊಂದುವಂತಹ ಆಚರಣೆಗಳನ್ನು ಕ್ರೀಡೆಗಳನ್ನು ಹಬ್ಬಗಳನ್ನು ಆಚರಿಸಿಕೊಂಡು ಬಂದಿದ್ದಾರೆ.

ಈ ಸಮುದಾಯದ ಜೀವನ ಶೈಲಿ ಹೇಗೆ ಬದಲಾವಣೆಯನ್ನು ಹೊಂದುತ್ತಾ ಬಂದಿದೆ. ಈಗ ಯಾವ ರೀತಿ ಇದೆ, ಎಂದು ಶಿವಮೊಗ್ಗ ಜಿಲ್ಲೆಯ ಪರಿಸರಕ್ಕನುಗುಣವಾಗಿ ಇಲ್ಲಿ ನೋಡಲಾಗಿದೆ.

### ೧.೩ ಅಧ್ಯಯನದ ವ್ಯಾಪ್ತಿ ಮತ್ತು ವಿಧಾನ

ಒಂದು ಸಮುದಾಯದ ಅಧ್ಯಯನವೆಂದಕೂಡಲೇ, ಆ ಸಮುದಾಯದ ಸಾಂಸ್ಕೃತಿಕ ವಿವರಗಳನ್ನು ಕಲೆಹಾಕುವುದು ಅಷ್ಟೇ ಅಲ್ಲದೆ, ಅದರ ಆಚೆಗೂ ಒಂದು ಸಮುದಾಯದ ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡಿದಾಗ ಪ್ರತಿಯೊಂದು ಸಮುದಾಯವು ಒಂದೊಂದು ಹೊಸ ದಾರಿಯನ್ನು

ತೋರಿಸುವಲ್ಲಿ ಮುಂದಾಗುತ್ತವೆ. ಅಂದರೆ ಆಯಾ ಸಮುದಾಯಗಳು ನಡೆದುಬಂದ ದಾರಿ, ಅನುಭವಿಸಿದ ನೋವು – ನಲಿವು, ಹಾಡು, ಕಥೆ, ಕುಣಿತ, ಹೋರಾಟ ಹತ್ತು ಹಲವು ಬಗೆಯ ಅಂತರಿಕ ಭಾವನೆಯನ್ನು ಹೊರಹಾಕುತ್ತವೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಒಟ್ಟು ಸಾಂಸ್ಕೃತಿಕ ವಿವರಗಳನ್ನು ಕೂಡಿ ಹಾಕುತ್ತಲೇ ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಈ ಅಧ್ಯಯನವನ್ನು ಒಂದು ಶಿಸ್ತಿಗೆ ಒಳಪಡಿಸುವಲ್ಲಿ ಉಪಯುಕ್ತವಾದ ಪುಸ್ತಕಗಳು, ಬಿಡಿಲೇಖನಗಳು, ಮಾಹಿತಿಯನ್ನು ಒದಗಿಸುವ ಸಮುದಾಯದ ಹಿರಿಯರ ಅನುಭವಗಳನ್ನು ಈ ಅಧ್ಯಯನಕ್ಕೆ ಮೂಲ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಯಾವುದೇ ಒಂದು ಪರಿಸರದ ಜನ ಸಮುದಾಯವು ಅಲ್ಲಿಯ ಸಂಸ್ಕೃತಿಯನ್ನು, ಚರಿತ್ರೆಯನ್ನು, ಪರಂಪರೆಯನ್ನು ಭಾಷೆಯನ್ನು, ಇನ್ನು ಸಾಕಷ್ಟು ಅಂಶಗಳನ್ನು ಮೌಖಿಕ ರೂಪದಲ್ಲಿ ಬಳಸಿಕೊಂಡು ಬಂದಿರುತ್ತಾರೆ. ಲಿಖಿತ ಪರಂಪರೆಯು ಒದಗಿಸುವಷ್ಟು ಮಾಹಿತಿಯನ್ನು ಮೌಖಿಕ ಪರಂಪರೆಯು ಒದಗಿಸುತ್ತಾ ಬರುತ್ತದೆ. ವಿಚಿತ್ರವೆಂದರೆ ಕೆಲಸಂದರ್ಭಗಳಲ್ಲಿ ಮೌಖಿಕ ಮತ್ತು ಲಿಖಿತ ಸಾಮಾಗ್ರಿಗಳಲ್ಲಿ ಸಾಮ್ಯತೆ ಕಂಡು ಬರುವುದಿಲ್ಲ. ಇದು ಈ ಅಧ್ಯಯನದ ಉದ್ದೇಶವೂ ಅಲ್ಲ. ನನ್ನ ಅಧ್ಯಯನವು ಸಂಪೂರ್ಣ ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿರುವುದರಿಂದ ಅಲ್ಲಿ ಸಿಕ್ಕುವ ಮೌಖಿಕ ಪರಂಪರೆಯನ್ನು ಹೆಚ್ಚಿನದಾದ ರೀತಿಯಲ್ಲಿ ಬಳಸಿಕೊಂಡಿದ್ದೇನೆ. ಒಮ್ಮೊಮ್ಮೆ ಜನಪದರು ಹೇಳುವ ಐತಿಹ್ಯಗಳನ್ನು, ನಂಬಿಕೆಗಳನ್ನು, ಆಚರಣೆಗಳನ್ನು , ಕಥೆಗಳನ್ನು ವಿಶ್ಲೇಷಣೆಗೆ ಒಳಪಡಿಸಿ ಅಧ್ಯಯನಕ್ಕೆ ಅಳವಡಿಸಲಾಗಿದೆ.

ಒಂದು ಕಾಲಕ್ಕೆ ಜನಪದ ಗೀತೆಗಳ ಸಂಗ್ರಹ ಕಾರ್ಯಕ್ಕೆ ಮಾತ್ರ ಸೀಮಿತಗೊಂಡ ಕರ್ನಾಟಕ ಜಾನಪದ ಕ್ಷೇತ್ರವು ಬರಬರುತ್ತ ಅದರ ಅಧ್ಯಯನವು ಇತರೆ ಅಂಶಗಳೆಡೆಗೆ ತಿರುಗಿತು. ಹಾಗಾಗಿ ಜಾನಪದದ ಬಗೆಗಿನ ಪರಿಕಲ್ಪನೆ ಬದಲಾಗುತ್ತ ಬಂದು. ಇಂದು ಜನಪದ ಕತೆ, ಗೀತೆ, ಐತಿಹ್ಯಕಷ್ಟೇ ಸೀಮಿತವಾಗಿರದೆ ಅದರ ಇತರೆ ಉಪಅಂಗಗಳನ್ನು ಸಂಕೀರ್ಣತೆಯೊಂದಿಗೆ ಅಧ್ಯಯನ ಮಾಡಲು ಪ್ರಯತ್ನಿಸುತ್ತದೆ. ಜಾನಪದವು ಕೇವಲ ಹಳ್ಳಿಗಳಲ್ಲಿ ಮಾತ್ರವಲ್ಲ, ಅದಕ್ಕಂಟಿಕೊಂಡಂತೆ ಇರುವ ಪಟ್ಟಣ ಪ್ರದೇಶಗಳಲ್ಲಿ ಹುದುಗಿರುತ್ತದೆ ಎಂದು ಅರಿತ ಹಲವರಂತೆ ನಾನು ಶಿವಮೊಗ್ಗ ಜಿಲ್ಲೆಯ ನಗರ ಪ್ರದೇಶವನ್ನೊಳಗೊಂಡಂತೆ ಈ ಪರಿಸರದ ಹಲವಾರು ಹಳ್ಳಿಗಳ ಅದರಲ್ಲೂ ಬಾಹುಸಾರ ಕ್ಷತ್ರಿಯ ಸಮುದಾಯದವರ ಸಂಸ್ಕೃತಿಯ ಅಧ್ಯಯನದಲ್ಲಿ ತೊಡಗಿ, ಒಂದು ಸಮುದಾಯದ ಅಧ್ಯಯನದಷ್ಟೇ ಅಲ್ಲದೆ ನಗರ ಜಿವನದ ಅಧ್ಯಯನ ಹಾಗೂ ಮುಂದುವರಿದ ಸಮುದಾಯಗಳ ಅಧ್ಯಯನ ಹಾಗೂ ಮುಂದುವರಿದ ಸಮುದಾಯಗಳ ಆಚಾರ – ವಿಚಾರ, ನಡೆ – ನುಡಿ, ಸಂಸ್ಕೃತಿಗಳ ಕಡೆಗೆ ಗಮನಹರಿಸಿ ಸಂಪೂರ್ಣವಲ್ಲದಿದ್ದರೂ ಇತರೆ ಸಮುದಾಯದವರ ಜೊತೆಗೆ ಹೇಗೆ ಸಾಮರಸ್ಯದಿಂದ ಹೊಂದಿಕೊಂಡು

ಒಂದು ಬುಡಕಟ್ಟು ತನ್ನ ಇರುವಿಕೆಯನ್ನು ಹೇಗೆ ಸಾಬೀತುಪಡಿಸುತ್ತಿದೆ ಎನ್ನುವುದನ್ನು ಈ ಅಧ್ಯಯನದಿಂದ ತಿಳಿಯುವ ಪ್ರಯತ್ನ ಮಾಡಲಾಗಿದೆ.

ಈ ಅಧ್ಯಯನದಲ್ಲಿ ಭೌಗೋಳಿಕ, ಚಾರಿತ್ರಿಕ, ಸಮುದಾಯದ ಹಿನ್ನೆಲೆ, ಪರಿಸರ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಜಾನಪದೀಯ, ರಾಜಕೀಯ ವೈವಿಧ್ಯತೆಯನ್ನು ಗುರುತಿಸಲಾಗಿದೆ.

ಈ ಪರಿಸರದಲ್ಲಿ ಹಲವಾರು ಧರ್ಮದ, ಸಮುದಾಯದ ಜನರು ವಾಸವಾಗಿರುವುದರಿಂದ ಸಹಜವಾಗಿಯೇ ಅವರ ಬದುಕು ಭಿನ್ನವಾಗಿದ್ದು, ಅವರಿಗೆ ಹೊಂದಿಕೊಳ್ಳುವಂತೆ ಬಾಹುಸಾರ ಕ್ಷತ್ರಿಯ ಸಮುದಾಯದವರು ಜೀವನ ನಡೆಸಿಕೊಂಡು ಬಂದಾಗಲೂ ಅವರದೇ ಆದಂತಹ ಆಚರಣೆಗಳನ್ನು ನಂಬಿಕೆ ವಿಧಿ–ನಿಷೇಧಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಆದಾಗ್ಯೂ ಇತರೆ ಸಮುದಾಯದವರ ಜೊತೆಗೆ ಸಾಮರಸ್ಯ ಹೊಂದಿ, ಕೊಡು–ಕೊಳಿಯು ಇವರಲ್ಲಿ ನಡೆಯುತ್ತದೆ.

ಪ್ರಸ್ತುತ ಅಧ್ಯಯನವು ಜಾನಪದೀಯ ಅಧ್ಯಯನವಾಗಿದ್ದರೂ, ಹಲವಾರು ವಿದ್ವಾಂಸರುಗಳು ಈಗಾಗಲೇ ದಾಖಲಿಸಿದಂತಹ ದಾಖಲೆಗಳನ್ನು, ಮಾಹಿತಿಯನ್ನು, ಲೇಖನಗಳನ್ನು, ಸಂಶೋಧನಾತ್ಮಕ ಪ್ರಬಂಧಗಳನ್ನು ಸಾಧ್ಯವಿದ್ದಲ್ಲಿ ಬಳಸಿಕೊಳ್ಳಲಾಗಿದೆ. ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರ ಆಚಾರ–ವಿಚಾರಗಳು, ನಂಬಿಕೆ ವಿಧಿ–ನಿಷೇಧಗಳು, ಗಾದೆ, ಒಡಪು, ಒಗಟುಗಳನ್ನು ನೋಡಿದಾಗ ಕರ್ನಾಟಕದ ಇನ್ನಾವುದೇ ಪರಿಸರದವರಂತೆ ಮೇಲ್ನೋಟಕ್ಕೆ ಕಂಡುಬಂದರೂ ಇವುಗಳಲ್ಲಿ ನಮಗೂ ಇಲ್ಲಿಯವರಿಗೇನು ಬಹಳಷ್ಟು ವಿಶೇಷತೆಯು ಕಂಡುಬರುವುದಿಲ್ಲ ಎಂದು ಮತ್ತೊಂದು ಭಾಗದ ಸಮುದಾಯದ ಅಧ್ಯಯನ ಕೈಗೊಂಡವರಿಗೆ ಅನ್ನಿಸಿದರೂ ಈ ಅಧ್ಯಯನ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಅಧ್ಯಯನವೇ ಆಗಿರುತ್ತದೆ. ಶಿವಮೊಗ್ಗ ಜಿಲ್ಲೆಯ ಈ ಸಮುದಾಯದವರ ಆಚರಣೆಗಳನ್ನು ಕುರಿತಾದ ಛಾಯಾಚಿತ್ರಗಳನ್ನು ಒದಗಿಸಲಾಗಿದೆ. ನಾನು ಈ ಪರಿಸರ ಅಧ್ಯಯನಕ್ಕೆ ತೊಡಗಿ ಕಂಡುಕೊಂಡ ಅಂಶಗಳನ್ನು ಕೊನೆಯಲ್ಲಿ ವಿವರಿಸಿದ್ದೇನೆ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ ಎಂಬ ಶೀರ್ಷಿಕೆಯ ಅಡಿಯಲ್ಲಿ ಅಧ್ಯಯನ ಮಾಡಲು ತೊಡಗಿರುವ ನನಗೆ ಈ ಅಧ್ಯಯನದ ರೂಪುರೇಷಗಳನ್ನು ಹೇಳುವುದು ಸರಿ ಎನಿಸುತ್ತದೆ. ಭಾರತದಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯವು ತನ್ನ ಅನನ್ಯತೆಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಒಂದೆಡೆ ಧರ್ಮಗಳ ಪ್ರಭಾವ ಇನ್ನೊಂದೆಡೆ ಜಾತಿ–ಮತಗಳಿಂದ ತತ್ತರಿಸಿ ಹೋಗಿದ್ದರೂ, ಮೂಲ ಸತ್ವವನ್ನು ದೇಶದ ಯಾವುದೇ ಭಾಗದಲ್ಲಿ ವಾಸಿಸುವ ಈ ಸಮುದಾಯ ಕಳೆದುಕೊಂಡಿಲ್ಲ. ಈ ಸಮುದಾಯವು ಜಾತ್ಯಾತೀತ ಲಕ್ಷಣಗಳಿಂದ ಕೂಡಿದೆ. ಪ್ರಸ್ತುತ ಸಂದರ್ಭದಲ್ಲಿ ಎಲ್ಲ ಸಮುದಾಯದವರ ಜೊತೆಗೂ ಆತ್ಮೀಯ ಸಂಬಂಧವನ್ನು ಹೊಂದಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ

ಸ್ಥಾನಮಾನ, ಇತರ ಸಮುದಾಯದೊಂದಿಗಿನ ಸಂಬಂಧವನ್ನು ಕುರಿತ ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ.

ಅಧ್ಯಯದ ಸಂದರ್ಭದಲ್ಲಿ ಮುಖ್ಯವಾಗಿ ಕ್ಷೇತ್ರ ಕಾರ್ಯದ ಮುಖಾಂತರ ಇಡೀ ಶಿವಮೊಗ್ಗ ಜಿಲ್ಲೆಯ ಪ್ರಮುಖ ದೇವಾಲಯಗಳನ್ನು ನೋಡುವಾಗ, ಆ ದೇವಾಲಯದ ವಿವರಗಳನ್ನು ತಿಳಿದುಕೊಳ್ಳಲು ಆಯಾ ಸಮುದಾಯದವರನ್ನು ಸಂದರ್ಶಿಸಿ ಸಾಂಸ್ಕೃತಿಕ, ಧಾರ್ಮಿಕ, ಗ್ರಹಿಕೆಗಳನ್ನು ಪಡೆಯಲು ಪ್ರಯತ್ನಿಸಲಾಗಿದೆ. ಹಾಗೆಯೇ ಭೌಗೋಳಿಕ ವಿವರ ತಿಳಿಯಲು ಕ್ಷೇತ್ರ ಕಾರ್ಯ ಮಾಡುವುದರ ಜೊತೆಗೆ ಹಲವಾರು ಕಛೇರಿಗಳಿಗೆ ಭೇಟಿನೀಡಿ ಮಾಹಿತಿ ಸಂಗ್ರಹಿಸಲಾಗಿದೆ.

ಈ ಸಮುದಾಯದ ಮೌಖಿಕ ವಿವರಗಳನ್ನು ಪಡೆದು ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸುತ್ತ, ಯಾವುದು ಸರಿ, ಯಾವುದು ತಪ್ಪು, ಎಂದು ತಿಳಿಯುವ ಪ್ರಯತ್ನ ಮಾಡಲಾಗಿದೆ. ತಪ್ಪು ಎಂದು ತಿಳಿದುಬಂದಲ್ಲಿ ಈ ಸಮುದಾಯದವರಲ್ಲಿ ಜಾಗೃತಿಯನ್ನು ಮೂಡಿಸುವ ಪ್ರಯತ್ನ ಮಾಡಲಾಗಿದೆ. ಇವರು ಒದಗಿಸುವ ಮಾಹಿತಿಯಲ್ಲಿ ಸಂಶಯ ಕಲ್ಪನೆಗಳನ್ನು ವಾಸ್ತವಿಕತೆಯ ದೃಷ್ಟಿಕೋನದಲ್ಲಿಟ್ಟು ಹುಡುಕುವ ಪ್ರಯತ್ನ ನಿಜಕ್ಕೂ ಸಂತೋಷವನ್ನುಂಟುಮಾಡುವುದು. ಒಮ್ಮೊಮ್ಮೆ ನಿರಾಶೆಯನ್ನು ಹೊಂದಿದೆಯಾದರೂ ಅವರ ಜೀವನದ ಅನುಭವಗಳನ್ನು ಹಿಡಿದಿಡುವ ಪ್ರಯತ್ನ ಮಾಡಲಾಗಿದೆ.

ಮಾಹಿತಿ ನೀಡಿದ ಸಮುದಾಯದ ಹಿರಿಯ ಮಹಿಳೆ ಮತ್ತು ಯುವಕ, ಯುವತಿಯರ ನಡುವಿನ ಚರ್ಚೆ, ಸಂವಾದಗಳೊಂದಿಗೆ ಮುಂದುವರಿದುಕೊಂಡು ಬಂದ ಕ್ಷೇತ್ರ ಕಾರ್ಯವು ನಿಜಕ್ಕೂ ಸಮುದಾಯದ ಅಧ್ಯಯನದಲ್ಲಿ ತುಂಬಾ ಸಹಕಾರಿಯಾದುದು. ಒಂದು ಸಮುದಾಯವನ್ನು ಅಧ್ಯಯನ ಮಾಡಲು ಹೋದಾಗ ಅಲ್ಲಿಯ ಹಿರಿಯರ ಅನುಭವದ ಮಾಹಿತಿಯು, ವಯಸ್ಕ ವರ್ಗಗಳ ವಿವರಣೆ, ಯುವಜನತೆಯ ಚರ್ಚೆ ಎಲ್ಲವೂ ಮುಖ್ಯ. ಮನುಷ್ಯನ ವಿವಿಧ ಘಟ್ಟಗಳೊಂದಿಗೆ ನಡೆಸುವ ಈ ಕ್ಷೇತ್ರಕಾರ್ಯ ನಿಜಕ್ಕೂ ಅರ್ಥಪೂರ್ಣವಾದದು ಎನಿಸುತ್ತದೆ.

ಈ ಸಮುದಾಯದವರ ಮನೆ-ಮನೆಗೂ ಹೋಗಿ, ಇಲ್ಲವೆ ಗುಡಿ ಗುಡಾರಗಳಲ್ಲಿ ಕುಳಿತು ಸಮುದಾಯದ ಹಿರಿಯರನ್ನು ಕರೆಯಿಸಿಕೊಂಡು ಅವರ ಜೊತೆಯಲ್ಲಿ ಅವರ ಮೂಲಕ್ಕೆ ಸಂಬಂಧಿಸಿದ ಪ್ರಶ್ನಾವಳಿ, ಕಸುಬು, ಅಚರಣೆ, ಸಾಮಾಜಿಕ, ಆರ್ಥಿಕ ಜೀವನ ನಡೆಸಿಕೊಂಡು ಬಂದಾಗಲೂ ಅವರದೇ ಆದಂತಹ ಆಚರಣೆಗಳನ್ನು ನಂಬಿಕೆ ವಿಧಿ-ನಿಷೇಧಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಆದಾಗ್ಯೂ ಇತರೆ ಸಮುದಾಯದವರ ಜೊತೆಗೆ ಸಾಮರಸ್ಯ ಹೊಂದಿ, ಕೊಡು-ಕೊಳಿಯು ಇವರಲ್ಲಿ ನಡೆಯುತ್ತದೆ.

ಬಾಲ್ಯದಿಂದ ಯೌವನಕ್ಕೆ, ಮದುವೆ ಪೂರ್ವದಿಂದ ಮದುವೆಯ ಅನಂತರಕ್ಕೆ, ಜೀವದಿಂದ ಸಾವಿಗೆ ಹೀಗೆ ಇದು ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ ಸಮುದಾಯಕ್ಕೆ

ವ್ಯತ್ಯಾಸವಾಗುತ್ತಿರುತ್ತದೆ. ಹೆಂಗಸರಲ್ಲಿ ಈ ಸ್ಥಿತ್ಯಂತರಗಳು ಹೆಚ್ಚು ಬಾಲ್ಯ, ಮೈನರೆಯುವಿಕೆ, ಮದುವೆ, ಸೀಮಂತ, ಸಾವು ಹೀಗೆ ಅದು ಅಗತ್ಯವಾದ ಹಾದಿಗಳನ್ನು ನಿರ್ಮಿಸಿಕೊಂಡಿದೆ. ಈ ಜೀವನಾವರ್ತನಗಳಲ್ಲಿ ಮಾನವನು ಬದಲಾಗುವ ಸ್ಥಿತಿಯನ್ನು ಕಾನೂನು ಬದ್ಧಗೊಳಿಸಿಕೊಳ್ಳಲು ತನ್ನ ಸಹ ಮಾನವರ ಜೊತೆ ಸೇರಿಕೊಂಡು ಬಗೆ ಬಗೆಯ ಆಚರಣೆಗಳನ್ನು ರೂಢಿಸಿಕೊಂಡಿದ್ದಾನೆ. ಒಂದು ಸಮುದಾಯದ ಮಾನಸಿಕ ಸ್ಥಿರತೆಯನ್ನು ಇವು ಕಾಪಾಡಿಕೊಂಡು ಬರುತ್ತವೆ. ಹಸಿವಿನ ಪೂರೈಕೆ ಮತ್ತು ವಂಶದ ಬೆಳವಣಿಗೆ ಎರಡು ಆವರ್ತನೆಗಳು ಪರಸ್ಪರ ಪ್ರಭಾವಕ್ಕೆ ಒಳಗಾಗಿ ಒಂದು ಕುಟುಂಬದ ಜೀವನಕ್ರಮವನ್ನು ರೂಪಿಸುತ್ತವೆ. ಆ ಜೀವನಕ್ರಮ ಆಯಾ ಕುಟುಂಬದ ಶಿಷ್ಟವನ್ನು ನಿರ್ಧರಿಸುತ್ತದೆ. ಅದು ಅಡುಗೆ, ವಸತಿ, ಉಡುಪು, ಸಂಬಂಧ, ನಿರ್ಧಾರ, ಭಾಷೆ, ನಿಷೇಧಗಳು, ನಂಬಿಕೆ, ಗಾದೆ, ಒಗಟು, ಹಾಡು, ಯಾರು ಯಾರಲ್ಲಿ ಹೇಗೆ ವ್ಯವಹರಿಸಿದರೆ ಚೆನ್ನ ಎಂಬಿತ್ಯಾದಿಗಳನ್ನು ವಿವೇಚಿಸುತ್ತದೆ.

ನಿರ್ದಿಷ್ಟ ದೈವವೊಂದರ ದೇಗುಲವನ್ನು ಕೇಂದ್ರ ಮಾಡಿಕೊಂಡು ಜಾತ್ರೆ ನಡೆಯುತ್ತದೆ. ಕೆಲವು ಕಡೆ ದೇಗುಲವೂ ಇರುವುದಿಲ್ಲ. ಕಟ್ಟೆ, ಹುತ್ತ, ಮರ, ಗೋರಿ, ಕಾಡುಕಲ್ಲುಗಳು ದೈವ ಕೇಂದ್ರವಾಗಿರುತ್ತವೆ. ಒಂದರಿಂದ ಹಲವಾರು ದಿನಗಳವರೆಗೆ ಜಾತ್ರೆಯ ವ್ಯಾಪ್ತಿಯಾಗಿರುತ್ತದೆ. ದೊಡ್ಡ ಸಂಖ್ಯೆಯಲ್ಲಿ ಜನಸಮೂಹ ಒಂದೆಡೆ ಸೇರುವುದರಿಂದ ನಾನಾ ರೀತಿಯ ಸಾಂಸ್ಕೃತಿಕ ವಿದ್ಯಮಾನಗಳು ನಡೆಯುವುದಕ್ಕೆ ಅವಕಾಶವಾಗುತ್ತದೆ. ದೈವಕ್ಕೆ ಸಂಬಂಧಪಟ್ಟ ನಿರ್ದಿಷ್ಟ ವಿಧಿಯಾಚರಣೆಗಳು ಸಂಪ್ರದಾಯಕ್ಕೆ ಅನುಗುಣವಾಗಿ ಪ್ರತಿ ಜಾತ್ರೆಯಲ್ಲಿ ಪುನರಾವೃತ್ತಿಯಾಗುತ್ತವೆಂಬುದು ನಿಜ. ಈ ವಿಧಿ ಕ್ರಿಯೆಗಳಲ್ಲಿ ಬದಲಾವಣೆ ಕಡಿಮೆ. ಆದರೆ ಇತರ ಸಾಂಸ್ಕೃತಿಕ ಮತ್ತು ವ್ಯಾವಹಾರಿಕ ಚಟುವಟಿಕೆಗಳಲ್ಲಿ ಪರಿವರ್ತನಗಳು ತೀವ್ರವಾಗಿರುತ್ತವೆ. ಇಷ್ಟಾಗಿಯೂ ಹಳೆಯ ಲಕ್ಷಣಗಳು ಹೊಸದರ ಜತೆ ಬೆರೆತುಕೊಂಡೇ ಇರುತ್ತವೆ. ಹಾಗಾಗಿ ಜಾತ್ರೆಗಳು ಜನಸಮುದಾಯಗಳ ಹಿಂದಿನ ಜೀವನ ಲಕ್ಷಣಗಳನ್ನು ಅರಿಯಲು ದಾರಿ ಮಾಡಿಕೊಡುತ್ತವೆಂದು ಭಾವಿಸಲಾಗಿದೆ. ಸಾಮಾನ್ಯವಾಗಿ ಸಂಪ್ರದಾಯಶೀಲತೆಯ ಲಕ್ಷಣವೇ ಆ ಪರಿವರ್ತನೆಯಾದ್ದರಿಂದ. ಸೂಕ್ಷ್ಮವಾಗಿಯಾದರೂ ಸಂಪ್ರದಾಯಗಳಲ್ಲಿ ಬದಲಾವಣೆಗಳು ಕಾಲು ಹಾಕುತ್ತಿವೆ.

ಇತ್ತೀಚಿನ ಕೆಲದಿನಗಳಂತೆ ಆಧುನಿಕ ಜೀವನದ ಸಂಪರ್ಕಹೊಂದಿ ತಮ್ಮ ಜೀವನ ವ್ಯವಸ್ಥೆ ದುಡಿಮೆಯ ವಿಧಾನಗಳು. ನಂಬಿಕೆ, ನ್ಯಾಯ ನಿರ್ಣಯ. ಶುಚಿಯಾದ ಹಾಗೂ ಸಂಘಟಿತ ಜೀವನದ ಕಡೆ ಒಲಿಯುತ್ತಿರುವುದು ಶುಭ ತರುವ ಯೋಜನೆಗಳಾಗಿವೆ.

ಮಾನವ ಸಮಾಜದಲ್ಲಿ ನಿತ್ಯ ಪರಿವರ್ತನಶೀಲವಾಗುತ್ತಿದ್ದಾನೆ. ಚೇತನಶೀಲವಾದುದು ಯಾವತ್ತೂ ಇಂತಹ ಬದಲಾವಣೆಗಳಿಗೆ ಒಳಗಾಗುತ್ತಿರುತ್ತದೆ. ಇದು ಈ ಸಮುದಾಯಗಳ ಜೀವಂತಿಕೆ ಲಕ್ಷಣವು ಕೂಡ ಆಗಿದೆ. ಹೀಗಾಗಿ ಮಾನವ ಸಮುದಾಯದಲ್ಲಿ ಆದಿ ಸ್ಥಿತಿಯಿಂದ ಇವತ್ತಿನ ಕಂಪ್ಯೂಟರ್ ಯುಗದವರೆಗೆ ಹಲವಾರು ಬದಲಾವಣೆಗಳಿಗೆ ಒಳಗಾಗುತ್ತಿವೆ. ಅದರಲ್ಲಿ ಇವರನ್ನೂ ಸಹ ಕಾಣಬಹುದು.

ಈ ಸಮುದಾಯದ ವಾರ್ಷಿಕಾವರ್ತನ ಮತ್ತು ಜೀವನಾವರ್ತನದ ಆಚರಣೆಯ ಸಂದರ್ಭಗಳಲ್ಲಿ ಭಾಗವಹಿಸಿ ಹಬ್ಬ ಹರಿದಿನ, ಜಾತ್ರೆ, ಮದುವೆ, ನಾಮಕರಣದಂತಹ ಕಾರ್ಯಕ್ರಮದಲ್ಲಿ ಸಮುದಾಯದ ಹಿರಿಯರೊಂದಿಗೆ ಭಾಗವಹಿಸಿ ಕ್ಷೇತ್ರಕಾರ್ಯ ಮಾಡಿ ಅವಶ್ಯವಿದ್ದಲ್ಲಿ ಛಾಯಾಚಿತ್ರಗಳನ್ನು ತೆಗೆದುಕೊಂಡು ಟಿಪ್ಪಣಿ ಬರೆದುಕೊಳ್ಳುವ ಮೂಲಕ ಈ ಸಮುದಾಯದಲ್ಲಿ ನಾನು ಒಬ್ಬಳಾಗಿ ಸಮುದಾಯದ ಅಧ್ಯಯನ ಮಾಡಿದ್ದೇನೆ.

**೧.೪ ಇದುವರೆಗಿನ ಬಾಹುಸಾರ ಕ್ಷತ್ರಿಯ ಸಮುದಾಯದ ಅಧ್ಯಯನ ಸಮೀಕ್ಷೆ**

ಈ ಸಮುದಾಯವನ್ನು ಕುರಿತು ಶಿವಮೊಗ್ಗ ಜಿಲ್ಲೆಯಲ್ಲಿ ಯಾವುದೇ ಅಧ್ಯಯನಗಳು ನಡೆದಿಲ್ಲವೆಂದು ಹೇಳಬಹುದು. ಕೆಲವು ಲೇಖನಗಳು, ಪ್ರಬಂಧಗಳು ಮತ್ತು ಕೃತಿಗಳಲ್ಲಿ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದುಕು ಮೂಡಿಬಂದಿದ್ದರೂ, ಈ ಸಮುದಾಯದ ಬಗೆಗೆ ಸಾಹಿತ್ಯಿಕವಾಗಿ ಐತಿಹಾಸಿಕವಾಗಿ ಮತ್ತು ಇತರೆ ಮೂಲಗಳಿಂದ ಲಭ್ಯವಾಗಿರುವ ಆಧಾರಗಳನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಕರ್ನಾಟಕದಲ್ಲಿ ಹೆಚ್ಚಾಗಿ ಈ ಸಮುದಾಯದವರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ, ಸೊರಬ, ಭದ್ರಾವತಿ, ಹೊಸನಗರ, ಸಾಗರ, ತೀರ್ಥಹಳ್ಳಿ ತಾಲ್ಲೂಕುಗಳಲ್ಲಿ ವಾಸಿಸುತ್ತಿದ್ದಾರೆ. ಇವರು ತಮ್ಮದೇ ಆದ ಪ್ರತ್ಯೇಕತೆಯನ್ನು ಕಾಪಾಡಿಕೊಂಡು ತಮ್ಮದೇ ಆದ ವ್ಯವಸ್ಥೆಯಲ್ಲಿ ಜೀವಿಸುತ್ತಿದ್ದಾರೆ. ಈ ಸಮುದಾಯವನ್ನು ಕುರಿತು ಒಟ್ಟಾಗಿ ಯಾವುದೇ ಅಧ್ಯಯನಗಳು ನಡೆದಿಲ್ಲ ಎನ್ನಬಹುದಾಗಿದೆ.

# ಅಧ್ಯಾಯ ೨

## ಜಿಲ್ಲೆಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

### ೨.೧ ಪ್ರವೇಶ

ಒಂದು ಜಿಲ್ಲೆಯ ಭೌಗೋಳಿಕ ವಿವರಗಳೂ, ಅಲ್ಲಿನ ಸಂಸ್ಕೃತಿಗೂ ಅವಿನಾಭಾವ ಸಂಬಂಧವಿರುತ್ತದೆ. ಹಾಗಾಗಿ ಒಂದು ಜಿಲ್ಲೆಯ ಸಾಂಸ್ಕೃತಿಕ ಆಕೃತಿಯನ್ನು ಅರ್ಥಮಾಡಿಕೊಳ್ಳಲು ಅಲ್ಲಿನ ಭೌಗೋಳಿಕ ವಿವರಗಳಲ್ಲಿ ಮೂಲ ಸೆಲೆಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಎಷ್ಟೋಬಾರಿ ಒಂದು ದೇಶದ, ರಾಜ್ಯದ, ಜಿಲ್ಲೆಯ ಭೌಗೋಳಿಕ ವಿವರಗಳು ಅಲ್ಲಿನ ಸಾಂಸ್ಕೃತಿಕ ಲೋಕವನ್ನು ನಿರ್ಧರಿಸುತ್ತವೆ, ನಿಯಂತ್ರಿಸುತ್ತಿರುತ್ತವೆ. ಹಾಗಾಗಿ ಭೌಗೋಳಿಕ ವಿವರಗಳನ್ನು ಸೂಕ್ಷ್ಮವಾಗಿ ಗ್ರಹಿಸಿದೆ, ವಿವರಿಸಿಕೊಳ್ಳದೆ ಅಲ್ಲಿನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದು ತುಸು ಕಷ್ಟವೆ. ಹಾಗಾಗಿ ಜಿಲ್ಲೆಯಲ್ಲಿರುವ ಸ್ಥಳಗಳ ಬಗೆಗೆ ತಿಳಿದುಕೊಳ್ಳುವುದು ಮುಖ್ಯವಾದುದು.

ಈ ಹಿನ್ನೆಲೆಯಲ್ಲಿ ಸ್ಥಳನಾಮಗಳನ್ನು ಕುರಿತು ವಿವೇಚಿಸುವುದಕ್ಕಿಂತ ಮೊದಲು ಸ್ಥಳನಾಮವೆಂದರೇನು? ಎಂಬುದನ್ನು ಕುರಿತ ಕ್ರಮಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಅಗತ್ಯವೆನಿಸುತ್ತದೆ.

ಸ್ಥಳನಾಮವೆಂದರೆ ಊರಿನ ಹೆಸರು ಎಂದು ಅರ್ಥೈಸುವುದಾದರೆ ಅಂತಹ ಊರುಗಳು, ಪುರ ಹಟ್ಟಿ, ಊರು, ಹಳ್ಳಿ, ಗ್ರಾಮ, ವಾಡಿ, ಹಾಳ, ಕೆರೆ, ಬಾದ, ಕೊಪ್ಪ ಮೊದಲಾದ ಉತ್ತರಾರ್ಥ ಘಟಕಗಳನ್ನು ಒಳಗೊಂಡಿರುತ್ತದೆ. ಈ ಘಟಕಗಳಿಗೆ ಯಾವುದೇ ವಿಷಯ ಪ್ರಸ್ತಾಪವಿರದು. ಭಾಷಿಕ ದೃಷ್ಟಿಯಿಂದ ಶಿವಮೊಗ್ಗ ಜಿಲ್ಲೆಯಲ್ಲಿ ಬರುವ ಕೆಲವು ಊರುಗಳನ್ನು ಈ ಘಟಕಗಳ ಅಡಿಯಲ್ಲಿ ವಿಂಗಡಿಸಿ ಅವುಗಳ ರೂಪ ಮತ್ತು ಧ್ವನಿ ವ್ಯತ್ಯಾಸ ಪಡೆದಿರುವುದನ್ನು ಕಾಣಬಹುದು. ಯಾವುದೇ ಒಂದು ಸ್ಥಳನಾಮದಿಂದ, ಆ ಸಮುದಾಯದ ಅಭಿರುಚಿ, ಅನುಭವ, ಸೃಜನಶೀಲ ಶಕ್ತಿಗಳನ್ನು ಅರಿಯಬಹುದು. ಸ್ಥಳನಾಮಗಳಿಗೆ ಅವುಗಳದೇ ಆದ ಅರ್ಥವಿರುತ್ತದೆ. ಅರ್ಥರಹಿತವಾದ ಸ್ಥಳನಾಮಗಳು ಇರುವುದಿಲ್ಲ. ಊರುಗಳಿಗೆ ಆಯಾ ಹೆಸರುಗಳು ಪ್ರಾಪ್ತವಾಗಲು ಇಂಥದೇ ಕಾರಣಗಳು ಇವೆಯೆಂದು ಖಚಿತವಾಗಿ ಬೊಟ್ಟು ಮಾಡಿ ಹೇಳಲಿಕ್ಕೆಬಾರದು. ಆದರೂ ಕೆಲ ಊರುಗಳಿಗೆ ಹೆಸರು ಬರಲು ಇರುವ ಕಾರಣಗಳನ್ನು ಗುರುತು ಮಾಡಬಹುದು. ಶಿವಮೊಗ್ಗ ಜಿಲ್ಲಯಲ್ಲಿ ಕಂಡುಬರುವಂತಹ ಊರುಗಳಿಗೆ ಆ ಹೆಸರುಗಳು ಹೇಗೆ ಬಂದವು? ಎಂಬುವುದನ್ನು ಅಧ್ಯಯನ ಮಾಡಿದರೆ ಆಯಾ ಊರಿನ ಹಿನ್ನೆಲೆಯನ್ನು, ಸಂಸ್ಕೃತಿಯನ್ನು ಅಧ್ಯಯನ ಮಾಡಿದಂತಾಗುತ್ತದೆ. ಭಾಷಿಕ ದೃಷ್ಟಿಯಿಂದ ಅಧ್ಯಯನ ಮಾಡಿದಾಗಲಂತೂ ಆ ಊರಿನ ಹೆಸರಿನ ಮೇಲೆ ಹೊಸಬೆಳಕು ಚೆಲ್ಲಿದಂತಾಗುತ್ತದೆ. ಶಿವಮೊಗ್ಗ ಜಿಲ್ಲೆಯಲ್ಲಿ ೮೦ ಹಳ್ಳಿಗಿಂತ ಹೆಚ್ಚು ಹಳ್ಳಿಗಳು ಜನವಸತಿ ಇರುವ ಗ್ರಾಮಗಳಾಗಿದ್ದು ಅವುಗಳಲ್ಲಿ ಕೆಲವು ಪ್ರಮುಖ ಊರುಗಳ ಸ್ಥಳನಾಮಗಳು, ನಿಷ್ಪತ್ತಿ ಅವುಗಳ ಮಹತ್ವ ಕುರಿತು ವಿವೇಚಿಸಲಾಗಿದೆ.

**ಊರು :**

ಇದು ಅಚ್ಚ ದ್ರಾವಿಡ ಪದವಾಗಿದೆ. ಊರುಗಳಿಂದ ಕೊನೆಗೊಳ್ಳುವ ಸ್ಥಳಗಳು ಗಾತ್ರದಲ್ಲಿ ಸಾಮಾನ್ಯವಾಗಿ ಚಿಕ್ಕವಾಗಿರುತ್ತವೆ. ಅಂತಹ ವಿಶೇಷತೆಯನ್ನೇನು ಅವುಗಳೂ ಒಳಗೊಂಡಿರುವುದಿಲ್ಲ. ಇಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕ ಘಟಕಗಳು ಸೇರುವಾಗ ಸ್ವರೈಕ್ಯ ಹೊಂದುವುದನ್ನು ಕಾಣಬಹುದು.

**ಪುರ :**

ಪುರ ಪದದಿಂದ ಕೊನೆಗೊಳ್ಳುವ ಸ್ಥಳಗಳು ಊರಿಗಿಂತ ಗಾತ್ರದಲ್ಲಿ ದೊಡ್ಡವಿರುತ್ತವೆ. ಆನಂದ+ಪುರ = ಆನಂದಪುರ, ಶಿಕಾರಿ+ಪುರ = ಶಿಕಾರಿಪುರ ಮುಂತಾದವು.

**ಹಳ್ಳಿ :**

ಹಳ್ಳಿಯಿಂದ ಕೊನೆಗೊಳ್ಳುವ ಸ್ಥಳಗಳು ಊರುಗಳಿಗಿಂತ ಗಾತ್ರದಲ್ಲಿ ಚಿಕ್ಕವಾಗಿರುತ್ತವೆ. ಹತ್ತಾರು ಮನೆಗಳು ಒಂದೆಡೆ ಇದ್ದರೆ ಅದು ಒಂದು ಹಳ್ಳಿಯಾಗುತ್ತದೆ.

**ಗ್ರಾಮ :**

ಗ್ರಾಮ ಎನ್ನುವ ಪದವು ಸಂಸ್ಕೃತ ಪದವಾಗಿದೆ. ಇದು ಸಾಮಾನ್ಯವಾಗಿ ಊರುಗಳ ಹೆಸರಿನ ಕೊನೆಗೆ ಬರುವಂತದ್ದು. ಈ ಗ್ರಾಮ-ಗಾಂವ್ ಆಗುತ್ತದೆ. ಈ ಗಾಂವ್ ಪದವು ಹಿಂದಿ ಅಥವಾ ಮರಾಠಿಯಲ್ಲಿ ಊರು ಎನ್ನುವ ಅರ್ಥವನ್ನು ಕೊಡುತ್ತದೆ. ಮರಾಠಿಯ ಪ್ರಭಾವ ಶಿವಮೊಗ್ಗ ಜಿಲ್ಲೆಯಲ್ಲಿ ಇರುವುದರಿಂದ ಕೆಲ ಹಳ್ಳಿಗಳು ಗಾಂವ್ ನಿಂದ ಅಂತ್ಯಗೊಳ್ಳುತ್ತವೆ. ಒಂದೊಂದು ಸಲ ಇಲ್ಲಿಯ ಅರ್ಥ ಸ್ವರೂಪವಾದ 'ವ್' ಬಿಟ್ಟು ಹೋಗಿ ಕೇವಲ 'ಗಾ' ಉಳಿಯುತ್ತದೆ.

ಭಾರತದಲ್ಲಿ ಕರ್ನಾಟಕಕ್ಕೆ ವಿಶಿಷ್ಟವಾದ ಸ್ಥಾನವಿದೆ. ಕರ್ನಾಟಕದಲ್ಲಿ ಶಿವಮೊಗ್ಗ ಜಿಲ್ಲೆಗೆ ಇನ್ನೂ ವಿಶಿಷ್ಟ ಸ್ಥಾನ. ಮಲೆನಾಡು ಬಯಲು ಸೀಮೆಯ ಸೇತುವಾಗಿ ನಿಂತಿರುವ ಈ ಜಿಲ್ಲೆ ವಿಶಿಷ್ಟ ಸಂಸ್ಕೃತಿಯನ್ನು ರೂಪಿಸಿಕೊಂಡಿದೆ. ಇತಿಹಾಸವನ್ನು ನಾವು ಕೂಲಂಕುಷವಾಗಿ ಗಮನಿಸಿದಾಗ ಪುರಾಣ ಕಾಲದಿಂದಲೂ ಶಿವಮೊಗ್ಗ ಜಿಲ್ಲೆಯಲ್ಲಿ ಜನ ಸಮುದಾಯ ಇದ್ದರೆಂಬುದಕ್ಕೆ ಆಧಾರ ಸಿಗುತ್ತದೆ. ಅಂತೆ ಭಾರತದಲ್ಲಿ ಸ್ಥಳಗಳಿಗೇನೂ ಕಡಿಮೆ ಇಲ್ಲ. ಐತಿಹಾಸಿಕ ಮಹತ್ವದ ತಾಣಗಳಾಗಿವೆ. ನಿಸರ್ಗ ರಮಣೀಯ ಪುಣ್ಯ ಸ್ಥಳಗಳಿವೆ.

ಶಿವಮೊಗ್ಗ ಮಲೆಘಟ್ಟಗಳ ನಾಡು. ಇದು ಪ್ರವಾಸಿಗರ ನಿತ್ಯ ಸ್ವರ್ಗ. ಸುತ್ತಲೂ ಹಬ್ಬಿ ಹರಡಿರುವ ಸಹ್ಯಾದ್ರಿ ಗಿರಿಶಿಖರಗಳ ನಡುವೆ ದುರ್ಗಮ ಕಾಡು, ಬೆಟ್ಟ, ಕಣಿವೆಗಳನ್ನು ಹೊಂದಿರುವ ಅಪೂರ್ವ ಸಂಗಮದ ಜಿಲ್ಲೆ. ಹಸಿರು ಕಣಿವೆಯಲ್ಲಿನ ಹಕ್ಕಿಗಳ ನಿನಾದ,

ಅರಣ್ಯಗಳ ಮಾರ್ದನಿ, ಸುತ್ತಲೂ ಹರಿಯುವ ಝುಳು ಝುಳು ನಿನಾದ ಅದರ ಜೊತೆಗೆ ಕಲ್ಲು, ಮರಗಳಲ್ಲಿ ಅರಳಿದ ಚಿತ್ತಾರದ ಕಾವ್ಯಹರಡಿಸಿಕೊಂಡಿರುವ, ಅನನ್ಯ ಜಲಪಾತಗಳನ್ನು ಒಳಗೊಂಡಿರುವ ತವರೂರು. ನಿಸರ್ಗ ನೀಡಿರುವ ಜರಿ, ತೊರೆ, ಜಲಪಾತಗಳ ಅಪರೂಪದ ಪ್ರಕೃತಿ ದತ್ತ ಕೊಡುಗೆಯನ್ನು ಒಳಗೊಂಡಿರುವ ನಾಡು. ಶಿವಮೊಗ್ಗ ಸಾಹಿತ್ಯ ಮತ್ತು ಸಂಸ್ಕೃತಿಯ ಭವ್ಯ ಐತಿಹಾಸಿಕ ಪರಂಪರೆಯನ್ನು ಒಳಗೊಂಡ ಜಿಲ್ಲೆಗಳಲ್ಲಿ ಪ್ರಮುಖವಾಗಿದೆ. ತುಂಗಾ ನದಿಯ ದಡದಲ್ಲಿರುವ ಶಿವಮೊಗ್ಗ ಐತಿಹಾಸಿಕವಾಗಿಯೂ ಗಮನ ಸೆಳೆಯುತ್ತದೆ. ಶಿವಮೊಗ್ಗವನ್ನು ದೂರ್ವಾಸ ನಗರ ಎಂದೂ ಕರೆಯುವುದಿದೆ. ಶಿವಮೊಗ್ಗ ಪ್ರಾಚೀನ ನಗರಗಳಲ್ಲಿ ಒಂದು. ಈ ನಗರದ ಆಸುಪಾಸಿನಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಪ್ರಾರಂಭವಾಗಿ ನವಶಿಲಾಯುಗದ ಕಾಲದವರೆಗೆ ಅವ್ಯಾಹತವಾಗಿ ಸಂಸ್ಕೃತಿ ಬೆಳೆದುಬಂದಿದೆ. ಕಲ್ಲಿನಲ್ಲಿ ಕಾವ್ಯ ಅರಳಿರುವುದನ್ನು ಜಿಲ್ಲೆಯಾದ್ಯಂತ ನೋಡಬಹುದು. ಚಾಲುಕ್ಯ, ಹೊಯ್ಸಳ ಶೈಲಿಯ ವಾಸ್ತು ಶಿಲ್ಪದ ಅಪೂರ್ವ ಸಂಗಮವನ್ನು ಈ ಜಿಲ್ಲೆಯಲ್ಲಿ ಕಾಣಬಹುದು.

ಈ ಜಿಲ್ಲೆಗೆ ಪೌರಾಣಿಕ ಮತ್ತು ಐತಿಹಾಸಿಕ ಹಿನ್ನೆಲೆಗಳು ಗಮನಾರ್ಹ. ಶ್ರೀ ರಾಮಚಂದ್ರನು ತಂದೆಯ ಮಾತನ್ನನುಸರಿಸಿ ವನವಾಸಕ್ಕೆ ಬಂದ ಸ್ಥಳ. ಪಾಂಡವರು ವನವಾಸ ಕೈಗೊಂಡ ಸ್ಥಳ ಚಂದ್ರಹಾಸನ ರಾಜ್ಯಧಾನಿಯಾಗಿ ಮೆರೆದ ಸ್ಥಳ ಅಗಸ್ತ್ಯ ಮೊದಲಾದ ಋಷಿಗಳಿಂದ ಆಶ್ರಮ ಸ್ಥಾಪಿಸಿದ ಸ್ಥಳ. ಇಂತಹ ಪೌರಾಣಿಕ ಹಿನ್ನೆಲೆಯ ಕಥೆಗಳು ಮಾನವನ ಆಸ್ತಿಕತೆಯನ್ನು ಎತ್ತಿ ತೋರಿದರೆ ಐತಿಹಾಸಿಕವಾಗಿ ಈ ಜಿಲ್ಲೆ ಗಂಗರು, ಹೊಯ್ಸಳರು, ಚಾಲುಕ್ಯರು, ಪಾಂಡ್ಯರು, ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟು ವಿಜೃಂಭಿಸಿದ ಜಿಲ್ಲೆ ೧೪೯೯ ರಿಂದ ೧೭೬೩ ರವರೆಗೆ ಕೆಳದಿ ಅರಸರ ಆಳ್ವಿಕೆಗೆ ಒಳಪಟ್ಟು ಐತಿಹಾಸಿಕವಾಗಿ ವೈಭವದಿಂದ ಮೆರೆದ ಜಿಲ್ಲೆ. ಇಲ್ಲಿನ ಪ್ರತಿ ದೇವಾಲಯ, ಶಿಲಾ ಲೇಖಗಳು ಅಂದಿನ ವಿಜೃಂಭಣೆಯನ್ನು ಪ್ರತಿಧ್ವನಿಸುತ್ತಿವೆ. ಅಂದಿನ ವೈಭವವನ್ನು ಎತ್ತಿ ಸಾರುತ್ತಿವೆ. ಸರ್ವ ಧರ್ಮವನ್ನು ಪ್ರತಿನಿಧಿಸಿ ಅವರ ಧಾರ್ಮಿಕತೆಗೆ ಅವಕಾಶವಿತ್ತ ಜಿಲ್ಲೆಯಿದು. ನೈಸರ್ಗಿಕ ಸಂಪತ್ತುಳ್ಳ ಬೀಡು. ಸ್ಥಳಾಭಾವದಿಂದ ಸಮಗ್ರವಾಗಿ ಪರಿಚಯಿಸಲಾಗದಿದ್ದರೂ ಜಿಲ್ಲೆಯ ಪ್ರಮುಖ ಸ್ಥಳಗಳ ಕಿರುಪರಿಚಯ ಮಾಡಿ ಕೊಡುವುದರ ಪ್ರಯತ್ನ ಮಾಡಲಾಗಿದೆ.

**ಶಿವಮೊಗ್ಗ ಜಿಲ್ಲೆಯ ಪ್ರಾಚೀನ ಅವಶೇಷಗಳು**

ಪುರಾಣಯುಗದಿಂದ ಕೆಳದಿ ಇತಿಹಾಸೋತ್ತರದ ಸ್ವಾತಂತ್ರ್ಯ ಪೂರ್ವದ ಅಂತ್ಯದವರೆಗಿನ ಇತಿಹಾಸಕ್ಕೆ ಸಂಬಂಧಪಟ್ಟ ಅವಶೇಷಗಳು ಶಿವಮೊಗ್ಗ ಜಿಲ್ಲೆಯಲ್ಲಿ ಸಾಕಷ್ಟಿದೆ. ಬೌದ್ಧರಿಂದ ಆರಂಭಿಸಿ ಕದಂಬರು, ಗಂಗರು, ಬಾದಾಮಿಯ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು, ಹೊಯ್ಸಳ ಮತ್ತು ಸೇವುಣರು, ಸೇಂದ್ರಕರು, ಸಾಂತರರು, ಸಿಂದರು, ನೊಳಂಬ, ಪಾಂಡ್ಯ, ಸೇತುನಾಡು, ವಿಜಯನಗರ, ಕೆಳದಿ, ಸಾಳ್ವ, ಬೆಳಗುತ್ತಿ, ಬಸವಾಪಟ್ಟಣ, ಬಿಜಾಪುರದ ಆದಿಲ್ ಶಾಹಿ, ಹೊನ್ನಾಳಿ ನವಾಬರು, ಹೈದರಾಲಿ, ಟಿಪ್ಪು, ಬ್ರಿಟಿಷರು, ಮೈಸೂರು ಮುಂತಾದ ರಾಜಮನೆತನಗಳು ರಾಜ್ಯವಾಳಿ

ಬಿಟ್ಟು ಹೋದ ಅವಶೇಷಗಳು, ಅಧ್ಯಯನಾಕಾಂಕ್ಷಿಗಳು ಮತ್ತು ಪ್ರವಾಸಿಗರಿಗೆ ಶಿವಮೊಗ್ಗ ಜಿಲ್ಲೆಯ ಇತಿಹಾಸವನ್ನು ಅರಿಯಲು ಮೂಲ ಸಾಮಗ್ರಿಗಳನ್ನು ಒದಗಿಸುತ್ತವೆ. ಇನ್ನೊಂದೆಡೆ ಕೆಳದಿ ಇತಿಹಾಸೋತ್ತರ ಚರಿತ್ರೆಯಲ್ಲಿ ಬ್ರಿಟಿಷರ ವಿರುದ್ಧವಾಗಿ ಹೋರಾಡಿದ ಧೋಂಡೇವಾಘ್, ನಗರ ಖಾವಿಂದ ಬೂದಿ ಬಸಪ್ಪನಾಯಕ, ಈಸೂರು ಕ್ವಿಟ್ ಇಂಡಿಯಾ ಚಳುವಳಿ, ಕಾಗೋಡು ಸತ್ಯಾಗ್ರಹ, ಮಹಾತ್ಮ ಗಾಂಧಿಯವರು ಸಾಗರ ಸಂದರ್ಶನದವರೆಗೆ ಈ ಜಿಲ್ಲೆಯು ಐತಿಹಾಸಿಕ ಪ್ರಾಮುಖ್ಯತೆ ಪಡೆದಿದೆ.

**ಪೌರಾಣಿಕ ಯುಗದ ಪ್ರದೇಶಗಳು**

ಜನಜನಿತ ಪುರಾಣಯುಗದ ಪ್ರಕಾರ ಜಮದಗ್ನಿ, ಪರಶುರಾಮ, ದೂರ್ವಾಸ, ಹರದತ್ತ, ಅಗಸ್ತ್ಯ, ವೇದವ್ಯಾಸ ಮುಂತಾದ ರಾಮಾಯಣ, ಮಹಾಭಾರತದ ತಾಣಗಳು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ. ದಂಡಾವತಿಯ ಉಗಮ ಸ್ಥಾನ ಕುಪ್ಪೆ, ಮಾರೀಚನ ಮೃಗವಧೆ, ಏಕಚಕ್ರನಗರವೆಂದು ಹೇಳಲಾದ ಶಿಕಾರಿಪುರದ ಬಿಸ್ಲಹಳ್ಳಿ, ಕಾಮ್ಯಕವನದ ಕೌಲೆದುರ್ಗ, ಭೀಮನಕಟ್ಟೆ ರಾಮಾಯಣ, ಮಹಾಭಾರತ ಕಾಲದ ತಾಣವನ್ನು ಸೂಚಿಸುತ್ತವೆ. ಕುಂತಳನಗರವೆಂಬ ಕುಬಟೂರು, ಚಂದ್ರಹಾಸನ ಕಥೆಯನ್ನು ಉದ್ಗರಿಸುತ್ತದೆ. ಜನಮೇಜಯನ ಶಾಸನವೊಂದು ಕುಪ್ಪಗುಡ್ಡೆಯಲ್ಲಿ ಲಭಿಸಿದ್ದೆಂದು ಹೇಳಲಾಗಿದೆ. ಶಿಕಾರಿಪುರದ ಬಳ್ಳಿಗಾವೆ ಮಹಾದಾನಿ ಬಲಿಚಕ್ರವರ್ತಿಗೆ ಸಂಬಂಧಿಸಿದೆ. ಇದನ್ನು ದಕ್ಷಿಣ ಕೇದಾರವೆಂದೂ ಕರೆಯುತ್ತಾರೆ. ತೀರ್ಥಹಳ್ಳಿಯ ಬಸವಾನಿಯು ಭಾರದ್ವಾಜ ಋಷಿಗಳ ಆಶ್ರಮ, ಭದ್ರಾವತಿ ಮಂಕಿ ಋಷಿಗಳ ತಪೋಭೂಮಿ, ಚಂದ್ರಗುತ್ತಿ, ಗೌಜ, ಕುಂದ, ಮಂಡಗದ್ದೆ ಕ್ರಮವಾಗಿ ಮಂಕಿ, ಜಮದಗ್ನಿ, ಗೌತಮ, ಮುಚುಕುಂದ ಮತ್ತು ಪಾಂಡವ್ಯ ಮಹರ್ಷಿಗಳೂ ತಪಸ್ಸನ್ನಾಚರಿಸಿದ ಸ್ಥಳಗಳು. ಶಿವಮೊಗ್ಗದ ತುಂಗಾ ನದಿಯ ದಂಡೆಯ ಮೇಲೆ ದೂರ್ವಾಸ ಋಷಿಗಳ ಆಶ್ರಮವಿತ್ತಂತೆ.

**ಪ್ರಾಗೈತಿಹಾಸಿಕ ಸಂಸ್ಕೃತಿಗಳು**

ಹೊನ್ನಾಳಿ ತಾಲ್ಲೂಕಿನ ನ್ಯಾಮತಿಯ ಸಮೀಪ ತುಂಗಭದ್ರಾ ತೀರದಲ್ಲಿ ೧೮೮೧ ರಲ್ಲಿ ರಾಬರ್ಟ ಬ್ರೂಸ್ ಫುಟ್ ರವರಿಂದ ಪ್ರಾಚೀನ (ಆದಿ) ಶಿಲಾಯುಗದ ಅವಶೇಷಗಳು ಪರಿಶೋಧಿಸಲ್ಪಟ್ಟಿದೆ. ಎಂ.ಎಸ್. ಕೃಷ್ಣ ಕುಂಸಿಯಲ್ಲಿ ಇತಿಹಾಸ ಪ್ರಾರಂಭ ಕಾಲದ ನೆಲೆಯನ್ನು ಕಂಡುಹಿಡಿದನು. ೧೯೬೬ ರಲ್ಲಿ ಸುಂದರರವರ ಸಂಶೋಧನೆಯಿಂದ ತುಂಗಾ ನದಿಯ ಗುಡ್ಡೆ ಮರಡಿಯಲ್ಲಿ ೩೦೦೦ ವರ್ಷದ ಬೃಹತ್ ಶಿಲಾಯುಗದ ಸಂಸ್ಕೃತಿಯ ಅವಶೇಷಗಳು ಕಂಡುಬಂದವು. ಹಳೇನಗರ, ಯಡಗುಡ್ಡೆ (ತೀರ್ಥಹಳ್ಳಿ ಹತ್ತಿರ), ಅರೆಹಳ್ಳಿ, ಬಂಡೀಗಣಿ, ಅಶೋಕನಗರ, ಆನವೇರಿ ಮತ್ತು ನಾಗಸಮುದ್ರ (ಭದ್ರಾವತಿ ತಾಲ್ಲೂಕು) ಪರೀಶಿ, ತಾಳಗುಂದ. ಮಳವಳ್ಳಿ, ಬಳ್ಳೀಗಾವೆ, ತೊಗರ್ಸಿ ಹಳ್ಳಿಗಳಲ್ಲಿ ಇತಿಹಾಸ ಪ್ರಾರಂಭದಲ್ಲಿ ನೆಲೆಗಳು ಶೋಧಗೊಂಡು ೧೯೬೫ ರಲ್ಲಿ ಜರುಗಿದ ಹಳ್ಳೂರು ಉತ್ಖನನದಲ್ಲಿ ಕ್ರಿ.ಪೂ. ೧೮೦೦-೧೫೦೦ ಮತ್ತು ೧೫೦೦-೧೧೦೦ ಹಾಗೂ ಕಬ್ಬಿಣ ಯುಗ ಸಂಸ್ಕೃತಿಯ ಪಳೆಯುಳಿಕೆಗಳು ಇಂಗಾಲ ೧೪ ಎಂಬ

ವೈಜ್ಞಾನಿಕ ವಿಧಾನದಲ್ಲಿ ಗೋಚರಿಸಿವೆ. ಪ್ರಾಕೃತ ಭಾಷೆ ಹಾಗೂ ಬ್ರಾಹ್ಮಿ ಲಿಪಿಯನ್ನೊಳಗೊಂಡ ಮಳವಳ್ಳಿ ಸ್ತಂಭ ಈ ಜಿಲ್ಲೆಯ ಪ್ರಾಚೀನತಮಗಳಲ್ಲೊಂದು. ಬಿ.ಎಲ್. ರೈಸ್ ಅವರು ಈ ಜಿಲ್ಲೆಯಲ್ಲೇ ಸಂಚರಿಸಿ ಸುಮಾರು ೨೦೦೦ ಶಿಲಾ ಮತ್ತು ಪುರಾತನ ಶಾಸನಗಳನ್ನು ಶೋಧಿಸಿ ಪ್ರಕಟಿಸಿದರು. ಶ್ರೀಲಂಕಾ ದ್ವೀಪದ ಪ್ರಾಚೀನ ಸಾಹಿತ್ಯದಲ್ಲಿ (ಸು. ೫ನೇ ಶತಮಾನ) ಮಹಾವಂಶನೆಂಬ ಪಾಳಿ ಗ್ರಂಥದಲ್ಲಿ ಅಶೋಕನು ಬೌದ್ಧ ಧರ್ಮದ ಪ್ರಚಾರಕ್ಕೆ ರಕ್ಷಿತನೆಂಬ ಬೌದ್ಧ ಭಿಕ್ಷುವನ್ನು ಬನವಾಸಿಗೆ ಕಳುಹಿಸಿದ್ದನೆಂದು ಹೇಳಿದೆ. ಬಳ್ಳಿಗಾವೆಯಲ್ಲಿ ಜಯಂತಿ ವಿಹಾರವಿತ್ತು. ಅದೃಷ್ಟವಶಾತ್ ತಾರಾ ಭಗವತಿ ಬೌದ್ಧ ಶಿಲ್ಪವೊಂದು ಇಲ್ಲಿಯ ವಸ್ತು ಸಂಗ್ರಹಾಲಯದಲ್ಲಿದೆ. ಇದು ರಾಜ್ಯದಲ್ಲಿಯೇ ಮೊಟ್ಟಮೊದಲನೆಯದು.

ಎಂ. ಎಂ. ಕಲಬುರ್ಗಿಯವರ ಸಂಶೋಧನೆಯಲ್ಲಿ ಹಾಗೂ ಭೋಜರಾಜ ಪಾಟೀಲರು ೧೯೭೨ ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ನಾಗರಖಂಡ ೭೦ ಒಂದು ಅಧ್ಯಯನ ಪಿ.ಎಚ್.ಡಿ. ಮಹಾಪ್ರಬಂಧದಲ್ಲಿ ಏಳನೆ ಶತಮಾನದ ನಾಗರ ಖಂಡದ ಗೋಶಾಸನಗಳು ಶಿಕಾರಿಪುರ ತಾಲ್ಲೂಕಿನ ಮಲ್ಲೇನಹಳ್ಳಿಯಲ್ಲಿ ಲಭಿಸಿದೆ. ಇಲ್ಲಿಯ ಶಿವಾಲಿ ಹಕ್ಕಲಿನಲ್ಲಿ ಮೂವತ್ತು ಗೋಶಾಸನಗಳ ಸಮುದಾಯವಿದೆ. ಶಾಸನ ಲಿಪಿಯನ್ನೊಳಗೊಂಡ ಇವುಗಳು ಬಾದಾಮಿ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಕೀರ್ತಿವರ್ಮನ ಕಾಲದ್ದು. ವೈದಿಕ ಜೈನ ಸಂಸ್ಕೃತಿಗೆ ಸಮ್ಮಿಳಿತವಾಗಿರುವ ಈ ಗೋಶಾಸನ ಅವಶೇಷಗಳು ಈ ಜಿಲ್ಲೆಯ ಗಮನಾರ್ಹ ಕುರುಹುಗಳು. ಇದೇ ದಿಸೆಯಲ್ಲಿ ತುಮಕೂರಿನ ೮ ನೆಯ ಶಾಸನದಲ್ಲಿ ಶಿವಮೊಗ್ಗ ಮುಂತಾದೆಡೆಗಳಲ್ಲಿ ನಾಡಿನ, ಊರು ವಿಭಾಗಗಳ ಅಧಿಕಾರಿಗಳಾಗಿ ಕೆಲ್ಲ, ಮಹಾಕೆಲ್ಲ ಎಂಬ ಹೆಸರಿನ ವಂಶನಾಮಗಳನ್ನೊಳಗೊಂಡ ಸೇನಾವರ, ರಾಜ ಹಾಗೂ ಆಡಳಿತ ವಂಶಗಳ ಇತಿಹಾಸಗಳು ಗೋಚರಿಸಿವೆ. ಕದಂಬರ ಮೂಲ ಸ್ಥಾನ ೫ ನೆಯ ಶತಮಾನದ ಶಾಸನ ಶಿರಾಳಕೊಪ್ಪದ ಸಮೀಪ ತಾಳಗುಂದದಲ್ಲಿದೆ. ಪ್ರಣವೇಶ್ವರ ದೇವರ ಆರಾಧಕರಾದ ಸಾತಕರ್ಣೀ ಅರಸರು ನಿರ್ಮಿಸಿದ ಕೆರೆ ಈಗಲೂ ಇದೆ. ೭ ನೆಯ ಶತಮಾನದಲ್ಲಿ ಪುಟ್ಟ ಪೊಂಬುಪ್ಪುರ (ಹುಂಚ) ಪ್ರದೇಶದಲ್ಲಿ ಶಾಂತರಸರೆಂಬ ರಾಜವಂಶದವರು ಕಾಣಿಸಿಕೊಳ್ಳುತ್ತಾರೆ. ಇವರ ವಂಶಾವಳಿ ನಗರ, ತೀರ್ಥಹಳ್ಳಿ ಮತ್ತು ಸಾಗರ ೧೦೭೭, ೧೧೦೩ ಮತ್ತು ೧೧೫೯ ರ ಶಾಸನಗಳಲ್ಲಿ ವರ್ಣಿಸಲಾಗಿದೆ. ಈ ವಂಶದ ವರಾಹನು ಆಗ್ರದ ಹತ್ತಿರ ಮಥುರೆಯನ್ನು ಆಳುತ್ತಿದ್ದು ಕುರುಕ್ಷೇತ್ರದಲ್ಲಿ ನಡೆದ ಮಹಾಭಾರತ ಯುದ್ಧದಲ್ಲಿ ಭಾಗವಹಿಸಿದ್ದನಂತೆ. ೭ ನೆಯ ಶತಮಾನದ ಜಿನದತ್ತನು ದಕ್ಷಿಣಕ್ಕೆ ಬಂದು ಪೊಂಬುಚ್ಚದಲ್ಲಿ ನೆಲೆಸಿ ಅದನ್ನು ತನ್ನ ರಾಜಧಾನಿಯನ್ನಾಗಿರಿಸಿಕೊಂಡನು. ಬರುವಾಗ ತನ್ನ ಆರಾಧ್ಯ ದೇವಿ ಶ್ರೀ ಪದ್ಮಾವತಿಯನ್ನು ತಂದು ಇಲ್ಲಿಯೇ ಸ್ಥಾಪಿಸಿದನು . ಇವನು ತನ್ನ ಮನೆತನಕ್ಕೆ ಸಾಂತರೆಂದು ಹೆಸರಿಟ್ಟು ಸಿಂಹ ಮತ್ತು ಹನುಮಂತನನ್ನು ರಾಜಲಾಂಛನವನ್ನಾಗಿಸಿಕೊಂಡನು. ಚಾಲುಕ್ಯ ಶೈಲಿಯ ಅವಶೇಷಗಳು ಬಳ್ಳೀಗಾವಿ, ಬಂದಳಿಕೆ ಮತ್ತು ದೇವಸ್ಥಾನದ ಹಕ್ಕಲು (ಕುಬಟೂರು) ಗಳಲ್ಲಿವೆ. ಹೊಯ್ಸಳೇಶ್ವರ ಶಿಖರವೊಂದು ಕೇದಾರೇಶ್ವರ ದೇವಾಲಯದಲ್ಲಿದ್ದು ರೈಸರ ಅಭಿಪ್ರಾಯದಂತೆ ಶಿಕಾರಿಪುರ ೪೬ ನೆಯ ಶಾಸನದ ಮೇರೆಗೆ ಹಳೇಬೀಡಿನ ದೇವಾಲಯ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಿದೆ.

**ಸ್ಮಾರಕಗಳು**

ಬಂದಳಿಕೆ ಸೋಮೇಶ್ವರ ದೇವಾಲಯ, ತ್ರಿಮೂರ್ತಿ ಸಿಂಹ ಲಲಾಟ. ಆನವಟ್ಟಿಯ ಕೈಟಭೇಶ್ವರ ದೇವಾಲಯ ಕಲಾ ರಚನೆಗಳು ಚಾಲುಕ್ಯರಿಂದ ಹೊಯ್ಸಳ ಶೈಲಿಯ ಸಂಕ್ರಮಣವನ್ನು ಸೂಚಿಸುತ್ತವೆ. ಹುಂಚದ ಜೈನಮಂದಿರಗಳು ವಿಶೇಷವಾಗಿ ಉರ್ವಿತಿಲಕಂನ ಪಂಚ

ಬಸದಿ ಮನೋಹರ ಶಿಲ್ಪಗಳು ಚಾಲುಕ್ಯರಿಂದ ಹೊಯ್ಸಳದೆಡೆಗೆ ಪಯಣಿಸುವ ವಿಷ್ಣುವರ್ಧನನ ಕಲಾ ಚತುರತೆಯನ್ನು ತೋರಿಸುತ್ತವೆ. ಬಳ್ಳೀಗಾವೆಯಲ್ಲಿ ಗೋಚರಿಸುವ, ಹೊಸಗುಂದ, ನಾಡಕಲಸಿ ಸ್ಮಾರಕಗಳು ಈಚೆಗೆ ಅಧ್ಯಯನ ಶೀಲರ ಗಮನ ಸೆಳೆಯುತ್ತಿವೆ.

ತಾಳಗುಂದದಲ್ಲಿರುವ ಇತಿಹಾಸ ಆರಂಭ ಕಾಲದ ಪ್ರಣವೇಶ್ವರ ದೇವಾಲಯ, ನಂದ ಹಾಗೂ ಮೌರ್ಯರ ಕಾಲಕ್ಕೆ ಆಡಳಿತಕ್ಕೊಳಪಟ್ಟ ಅಂಶವನ್ನೊಳಗೊಂಡ ೧೩ ನೆಯ ಶತಮಾನದ ಹೊಯ್ಸಳರ ಶಾಸನಗಳು (ಎಸ್.ಕೆ.೨೭೫) ಪ್ರಮುಖ ಅವಶೇಷಗಳು. ಪ್ರಕೃತ ಸಂಕ್ಷಿಪ್ತವಾಗಿ ಶಿವಮೊಗ್ಗ ಜಿಲ್ಲೆಯ ಪ್ರಾಚೀನ ಅವಶೇಷಗಳನ್ನು ಮಾತ್ರ ಪರಿಚಯ ಮಾಡಿಕೊಡಲಾಗಿದೆ.

ಸುಮಾರು ೧೨ ರಾಜಧಾನಿ ಕೇಂದ್ರಗಳು, ೨೧ ಕೋಟೆಗಳು, ದೇವಾಲಯ ಹಾಗೂ ಸ್ಮಾರಕಗಳು, ಕೌಲೇದುರ್ಗದಲ್ಲಿರುವ ಕೆಳದಿ ಅರಸರು ನಿರ್ಮಿಸಿದ ಮಸೀದಿ ಶಾಜೀ ಸಮಾಧಿ, ಶಿವಾಜಿ ಮಗ ರಾಜಾರಾಮನು ನಗರದಲ್ಲಿ ನಿರ್ಮಿಸಿದ ಶ್ರೀ ಪಾರ್ವತಿ ದೇವಾಲಯ, ದೇವಗಂಗೆ, ಆನಂದಪುರದ ಚಂಪಕಸರಸ್ಸು ಹಾಗೂ ಮಠಗಳು, ಶಿವಪ್ಪನಾಯಕನ ಅರಮನೆ, ಕಾಸರವಳ್ಳಿಯ ಭವ್ಯ ಸೌಧ, ಖಾಸಗಿ ಪುರಾತತ್ವ ಸಂಗ್ರಹಗಳು ಮುಂತಾದ ಅವಶೇಷಗಳು ವೈಜ್ಞಾನಿಕ ರೀತಿಯಲ್ಲಿ ಮುಂದಿನ ಪೀಳಿಗೆಗೆ ರಕ್ಷಿಸಿ ಕಾಪಾಡುವ ಅಗತ್ಯವಿದೆ.

**ಶಿವಮೊಗ್ಗ ಜಿಲ್ಲೆಯ ಪುರಾತನ ರಾಜಧಾನಿಗಳು**

೧. ಆರಗ (ಮಲೆರಾಜ್ಯ – ತೀರ್ಥಹಳ್ಳಿ ತಾಲ್ಲೂಕು)
೨. ಬಳ್ಳಿಗಾವೆ (ಶಿಕಾರಿಪುರ)
೩. ಉದ್ರಿ (ಸೊರಬ ತಾಲ್ಲೂಕು)
೪. ಹೊಸಗುಂದ (ಸಾಗರ ತಾಲ್ಲೂಕು)
೫. ಹುಂಚ (ಹೊಸನಗರ ತಾಲ್ಲೂಕು)
೬. ಕೆಳದಿ (ಸಾಗರ ತಾಲ್ಲೂಕು)
೭. ಇಕ್ಕೇರಿ (ಸಾಗರ ತಾಲ್ಲೂಕು)
೮. ನಗರ (ಬಿದನೂರು – ಹೊಸನಗರ ತಾಲ್ಲೂಕು)
೯. ಕೌಲೇ ದುರ್ಗ (ತೀರ್ಥಹಳ್ಳಿ ತಾಲ್ಲೂಕು)
೧೦. ಓಟೂರು (ಚಿಕ್ಕಪಾಳೆಯ ಪಟ್ಟು – ಸೊರಬ ತಾಲ್ಲೂಕು)

**ಕೋಟೆಗಳು**

೧. ಅನಂದಪುರ
೨. ಆನವಟ್ಟಿ
೩. ಆವಿನಹಳ್ಳಿ
೪. ಇಕ್ಕೇರಿ
೫. ಉಡುಗಣಿ
೬. ನಗರ
೭. ಕೌಲೇದುರ್ಗ
೮. ಶಿವಮೊಗ್ಗ
೯. ಚಂದ್ರಗುತ್ತಿ
೧೦. ಕೆಳದಿ
೧೧. ಉದ್ರಿ
೧೨. ಆಯನೂರು
೧೩. ಗುಡ್ಡದ ಬೇಕನಹಳ್ಳಿ
೧೪. ಕುಂಸಿ (ಶಿವಮೊಗ್ಗ ಜಿಲ್ಲೆ)
೧೫. ಗಾಜನೂರು (ಶಿವಮೊಗ್ಗ ತಾಲ್ಲೂಕು)

**೨.೨ ಭೌಗೋಳಿಕ ಹಿನ್ನೆಲೆ**

ಸಮುದಾಯಗಳ ಅಧ್ಯಯನವೆಂಬುದು ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನವಾಗಿದೆ. ಒಂದು ಪ್ರದೇಶದಲ್ಲಿನ ಸಮುದಾಯಗಳ ಉದ್ಯೋಗ, ವ್ಯವಹಾರ, ಊಟ, ಉಡುಗೆ, ಮನರಂಜನೆ, ಹೀಗೆ ಒಟ್ಟಾರೆ ಪ್ರದೇಶದ ಬದುಕೆಲ್ಲ ಇದರ ತೆಕ್ಕೆಗೆ ಸಿಲುಕುತ್ತದೆ.*

ಒಂದು ನಿರ್ದಿಷ್ಟ ಪ್ರದೇಶದ ಜಾನಪದ ಅಧ್ಯಯನಕ್ಕೆ ತೊಡಗುವ ಮೊದಲು ಸ್ಥೂಲವಾಗಿಯಾದರೂ ಅಧ್ಯಯನದ ರೂಪರೇಷೆಗಳನ್ನು ಕಲ್ಪಿಸುವುದು ಸರಿ ಎನಿಸುತ್ತದೆ.

ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಲಿರುವ ಸ್ಥಳದ ಶಿವಮೊಗ್ಗ ಜಿಲ್ಲೆಯ ಭೌಗೋಳಿಕ ಹಿನ್ನೆಲೆ ಬಹು ಮುಖ್ಯವಾದುದು. ಬಹಳಷ್ಟು ಸಲ ಭೌಗೋಳಿಕ ಪರಿಸರವೇ ಆಯಾ ಪ್ರದೇಶದ ಜನರ ಜೀವನ, ಸ್ವರೂಪವನ್ನು ನಿರ್ಧರಿಸುತ್ತದೆ, ನಿಯಂತ್ರಿಸುತ್ತದೆ. ಒಂದು ಪರಿಸರದಲ್ಲಿ ವಾಸಿಸುವ ಜನರ ಊಟ, ಉಡುಗೆ, ಉದ್ಯೋಗ ಕ್ರಮಗಳು ಆ ಭಾಗದ ಭೂಮಿಯ ಗುಣ, ಮಳೆಯ ಪ್ರಮಾಣ, ಬೆಳೆಯ ರೀತಿಯನ್ನು ಅವಲಂಬಿಸಿರುತ್ತದೆ.

*ಅಡಿ ಟಿಪ್ಪಣಿ ೧: ಶಿವಮೊಗ್ಗ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು: ಡಾ. ಕೆಳದಿ ವೆಂಕಟೇಶ ಜೊಯ್ಸ: ಪುಟ ಸಂಖ್ಯೆ ೨–೧೩

ಊರಿನ ಮೇರೆಗಳು, ದಾರಿಗಳು, ಉದ್ಯೋಗ, ವ್ಯವಸಾಯವನ್ನು ಅವಲಂಬಿಸಿವೆ. ಊರುಗಳ ಸುತ್ತಲಿನ ಬಯಲು, ಭೂಮಿ, ನದಿ ಬೆಟ್ಟಗಳನ್ನು ಪಕ್ಕಕ್ಕೆ ಸರಿಸಿ ಇವರ ಜೀವನವನ್ನು ನೋಡಲು ಆಗುವುದಿಲ್ಲ. ಹೀಗೆ ಭೌಗೋಳಿಕ ವಿವರಣೆ, ಇಂತಹ ಅಧ್ಯಯನದಲ್ಲಿ ಮುಖ್ಯವಾದುದೆನಿಸುತ್ತದೆ. ಇದರಿಂದಾಗಿ ಶಿವಮೊಗ್ಗ ಜಿಲ್ಲೆಯ ಭೌಗೋಳಿಕ ಹಿನ್ನೆಲೆಯೂ ಕೂಡ ಇದಕ್ಕೆ ಹೊರತಾಗಿಲ್ಲ.

ಜಿಲ್ಲಾ ಕೇಂದ್ರವಾದ ಶಿವಮೊಗ್ಗ ಬೆಂಗಳೂರಿನಿಂದ ಸುಮಾರು ೨೮೫ ಕಿ.ಮೀ. ದೂರದಲ್ಲಿ ತುಂಗಾನದಿಯ ದಂಡೆಯ ಮೇಲಿದೆ. ಇಲ್ಲಿ ದೂರ್ವಾಸ ಋಷಿಗಳ ಆಶ್ರಮ ಇತ್ತಂತೆ. ಇವರು ಮಹಾ ಶೀಘ್ರ ಕೋಪಿ. ಇವರ ಈ ಗುಣ ಪುರಾಣ ಪ್ರಸಿದ್ಧ. ಅದಕ್ಕೋಸ್ಕರ ತಮ್ಮ ಕೋಪವನ್ನು ಆದಷ್ಟು ಹತೋಟಿಯಲ್ಲಿಟ್ಟುಕೊಳ್ಳಲು ಪ್ರತಿನಿತ್ಯ ಆ ಪ್ರದೇಶದಲ್ಲಿ ಸಿಗುತ್ತಿದ್ದ ಗರಿಕೆ ಹುಲ್ಲಿನಿಂದ ತೆಗೆದ ರಸವನ್ನು ತಮ್ಮ ಕಮಂಡಲದಲ್ಲಿ ಸಂಗ್ರಹಿಸಿಟ್ಟು ತಮ್ಮ ಅನುಷ್ಠಾನ ಮುಗಿದ ನಂತರ ಅದನ್ನು ಸೇವಿಸುತ್ತಿದ್ದರಂತೆ. ಒಂದು ದಿನ ಗರಿಕೆ ರಸವನ್ನು ಸಂಗ್ರಹಿಸಿಟ್ಟು ತಮ್ಮ ನಿತ್ಯಕರ್ಮಕ್ಕೆ ಹೋದ ಸಮಯದಲ್ಲಿ ಅಲ್ಲಿ ಗೋಪಾಲಕರಿಗೆ ಈ ಕಮಂಡಲವು ಗಮನಕ್ಕೆ ಬಂದು ಕುತೂಹಲದಿಂದ ಅದರಲ್ಲಿದ್ದ ರಸವನ್ನು ಕುಡಿದರಂತೆ. ಅದರಲ್ಲಿದ್ದ ರಸ ಸಿಹಿಯಾಗಿದ್ದರಿಂದ ಆ ಮೊಗೆಯಲ್ಲಿ ಏನೋ ಶಕ್ತಿ ಇದೆಯೆಂದು ಬಗೆದರಂತೆ. ಹೀಗೆ ಸಿಹಿಮೊಗೆ ಆಯಿತೆಂದು ಐತಿಹ್ಯವಿದೆ. ಶಿವನಿಗೆ ಸಂಬಂಧಿಸಿದ್ದರಿಂದ ಶಿವಮೊಗ್ಗ ಆಯಿತೆಂದು ಕಥೆ ಇದೆ. ಶಿವಪ್ಪನಾಯಕನ ಅರಮನೆಯಿತ್ತಾದ್ದರಿಂದ ಇದಕ್ಕೆ ಶಿವಮೊಗ್ಗ ಎಂಬ ಹೆಸರು ಬಂದಿತೆಂದೂ ಅಭಿಪ್ರಾಯವಿದೆ. ಸೇಂದ್ರಕರು (ಸಯಿಂದಕ) ಶಿವಮೊಗ್ಗ ಪ್ರದೇಶದಲ್ಲಿದ್ದರೆಂದು ಐತಿಹಾಸಿಕರು ತರ್ಕಿಸಿದ್ದಾರೆ. ಮೌರ್ಯರು, ಗುಪ್ತರು, ಶಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ಕಳಚೂರ್ಯರು, ಹೊಯ್ಸಳರು, ಕೆಳದಿ, ಹೊಂಬುಜ, ವಿಜಯನಗರದರಸರು, ಮರಾಠರು, ಮುಸಲ್ಮಾನರು, ಮೈಸೂರರಸರು, ಇಂಗ್ಲೀಷರು ಹೀಗೆ ಎಲ್ಲರೂ ಈ ಪ್ರದೇಶವನ್ನು ಆಳಿದ ಬಗ್ಗೆ ದಾಖಲೆಗಳಿವೆ.

ಶಿವಮೊಗ್ಗ ಜಿಲ್ಲೆ ಸುಮಾರು ೧೦.೫೦೦ ಜವರ ಕಿ.ಮೀ. ವಿಸ್ತಾರವಾಗಿದೆ. ೭ ತಾಲ್ಲೂಕುಗಳನ್ನು ಒಳಗೊಂಡಿದೆ. ಜಿಲ್ಲೆಯ ಪೂರ್ವಭಾಗವು ಸಮುದ್ರ ಮಟ್ಟದಿಂದ ಸುಮಾರು ೫೭೯ ಮೀ. ಎತ್ತರವಿದೆ. ಪಶ್ಚಿಮ ಭಾಗಕ್ಕೆ ಸುಮಾರು ೬೪೦ ಮೀ. ಎತ್ತರದಲ್ಲಿದೆ. ಇಲ್ಲಿ ಬಿಲ್ಲೇಶ್ವರ (ಅಗಸ್ತ್ಯ ಪರ್ವತ ೮೯೪೦೪೧), ಗೋವರ್ಧನಗಿರಿ (ಸಾಗರ), ಚಂದ್ರಗುತ್ತಿ (೮೪೮ ಮೀ.), ಕವಲೆದುರ್ಗ (೯೭೯ ಮೀ.), ಕೊಡಚಾದ್ರಿ ಬೆಟ್ಟ (ಸುಮಾರು ೧೩೪೩ ಮೀ.) ಮೊದಲಾದ ಪ್ರಸಿದ್ಧ ಬೆಟ್ಟಗಳಿವೆ. ಇತಿಹಾಸದುದ್ದಕ್ಕೂ ಸಾಂಸ್ಕೃತಿಕ ಚಟುವಟಿಕೆಗಳಿಂದ ಪ್ರತಿ ಕಾಲದಲ್ಲಿಯೂ ತನ್ನ ವಿಶಿಷ್ಟ ಕಾಣಿಕೆಗಳನ್ನು ಸಲ್ಲಿಸಿದ ಕೆಲವೇ ಪ್ರದೇಶದಲ್ಲಿ ಶಿವಮೊಗ್ಗ ಜಿಲ್ಲೆ ಒಂದು. ಭಾರತದಲ್ಲಿಯೇ ಹೆಚ್ಚಾಗಿ ಮಳೆ ಬೀಳುವ ಎರಡನೆಯ ಪ್ರದೇಶವೆಂದರೆ ಈ ಜಿಲ್ಲೆಯ ಆಗುಂಬೆ ಭಾಗ ತುಂಗ ಮತ್ತು ಭದ್ರ ನದಿ ಶಿವಮೊಗ್ಗೆಯ ಈಶಾನ್ಯ ದಿಕ್ಕಿಗೆ ಸುಮರು ೧೫ ಕಿ.ಮೀ. ದೂರದಲ್ಲಿರುವ ಕೂಡಲಿಯಲ್ಲಿ ಸೇರಿ ತುಂಗಭದ್ರೆಯಾಗಿದೆ. ಕುಮುದ್ವತಿಯು

ಅಗಸ್ತ್ಯ ಪರ್ವತದಲ್ಲಿ (ಹುಂಚ ಹತ್ತಿರ) ಹುಟ್ಟಿ ಉತ್ತರ ಮುಖಿಯಾಗಿ ಕುಂಸಿ ಮತ್ತು ಶಿಕಾರಿಪುರ ಪ್ರದೇಶದಲ್ಲಿ ಹರಿದು ಮುದನೂರು ಎಂಬಲ್ಲಿ ತುಂಗಭದ್ರೆಯನ್ನು ಸೇರುತ್ತದೆ. ಶರಾವತಿ ಕೌಲೆದುರ್ಗದ ಹತ್ತಿರ ಅಂಬುತೀರ್ಥದಲ್ಲಿ ಹುಟ್ಟಿ ಜೋಗ ಹತ್ತಿರ ದುಮ್ಮಿಕ್ಕಿ ಹೊನ್ನಾವರ ತಾಲ್ಲೂಕಿನಿಂದ ಅರಬ್ಬಿ ಸಮುದ್ರ ಸೇರುತ್ತದೆ. ವರದೆಯು ಇಕ್ಕೇರಿ ಹತ್ತಿರ ವರದಾ ಮೂಲದಲ್ಲಿ ಹುಟ್ಟುತ್ತದೆ. ಚಂದ್ರಗುತ್ತಿ ಬನವಾಸಿ ಹತ್ತಿರ ಹರಿದು ಧಾರವಾಡ ಜಿಲ್ಲೆಯ ಗಳಗನಾಥದಲ್ಲಿ ತುಂಗಭದ್ರೆಯನ್ನು ಸೇರುತ್ತದೆ. ಅಲ್ಲದೆ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ಗರ್ಗಿತಾ ನದಿ ಇದೆ. ಹೊಸನಗರದಲ್ಲಿ ವರಾಹಿ ಇದೆ.

ಕೆಳದಿ ಅರಸರ ಕಾಲದಲ್ಲಿ ಪ್ರಮುಖವಾಗಿದ್ದ ಇದು ಹೈದರ್ ಟಿಪ್ಪು ಮರಾಠರ ಕದನ ನಡೆದ ಸ್ಥಳವಾಗಿದೆ. ಅಂದಿನ ವೈಭವವನ್ನು ಕೋಟೆ ಆಂಜನೇಯ ದೇವಾಲಯ, ಶಿವಪ್ಪನಾಯಕನ ಬೇಸಿಗೆ ಅರಮನೆಗಳು, ಭೀಮೇಶ್ವರ ದೇವಸ್ಥಾನಗಳು ಸಾರುತ್ತವೆ. ಭೀಮೇಶ್ವರ ದೇವಾಲಯದಲ್ಲಿರುವ ಶಿವಲಿಂಗವನ್ನು ಪಂಚ ಪಾಂಡವರಲ್ಲಿ ಒಬ್ಬನಾದ ಭೀಮನು ಸ್ಥಾಪಿಸಿ ನಿತ್ಯವೂ ನದಿಯಲ್ಲಿ ಸ್ನಾನಮಾಡಿ ಅದನ್ನು ಪೂಜಿಸುತ್ತಿದ್ದನಂತೆ. ಅವನು ಸ್ನಾನ ಮಾಡುತ್ತಿದ್ದ ನದಿ ಭಾಗಕ್ಕೆ ಭೀಮನಮಡು ಎಂದು ಇಂದಿಗೂ ಹೆಸರಾಗಿದೆ. ಅರಮನೆ ಸುಂದರವಾಗಿದೆ. ದೇವಾಲಯ ಹೊಯ್ಸಳ ಶಿಲ್ಪವನ್ನು ಒಳಗೊಂಡಿದೆ. ಇದಲ್ಲದೆ ಇತ್ತೀಚೆಗಿನ ರಾಮಣ್ಣ ಶ್ರೇಷ್ಠಿ ಪಾರ್ಕಿನ ಸಿದ್ಧಿವಿನಾಯಕ ದೇವಾಲಯ, ದುರ್ಗಿಗುಡಿಯ ದುರ್ಗಾಂಬ ದೇವಾಲಯ, ಶನಿ ದೇವಾಲಯ, ಧರ್ಮರಾಯನ ದೇವಾಲಯ , ಅಂಬಾ ಭವಾನಿ ದೇವಾಲಯ, ರಾಘವೇಂದ್ರಮಠ, ಶಂಕರಮಠ, ಅಯ್ಯಪ್ಪಸ್ವಾಮಿಯ ದೇವಾಲಯಗಳಿವೆ. ಜೈನ, ಇಸ್ಲಾಂ, ಕ್ರಿಶ್ಚಿಯನ್, ಸಿಖ್ ಮೊಲಾದ ಪಂಗಡದವರ ದೇವಾಲಯಗಳೂ ನಗರದಲ್ಲಿವೆ. ಶಿವಮೊಗ್ಗ ಕೋಟೆ ಆಂಜನೇಯ ದೇವಾಲಯದ ದೇವರಮೂರ್ತಿಯು ೧೩ ರಿಂದ ೧೪ ನೆಯ ಶತಮಾನದ್ದು. ಪಿಳ್ಳಂಗೇರಿಯ ಗುಡ್ಡದ ಮೇಲಿರುವ ರಂಗನಾಥ ದೇವಾಲಯದ ಎಡಬದಿಯಲ್ಲಿ ಒಂದು ದೊಡ್ಡ ಬಂಡೆಗೆ ಸೇರಿಸಿ ಕಟ್ಟಿದ ಗುಡಿ ಇದೆ. ಈ ಬಂಡೆಯ ಮೇಲೆ ಸು. ೩ ಮೀ. ಎತ್ತರ, ೨ ಮೀ. ಅಗಲದ ಒಂದು ಆಂಜನೇಯ ಮೂರ್ತಿ ಇದೆ. ಇದು ವಿಜಯನಗರ ಕೆಳದಿ ಕಾಲದ್ದಾಗಿದೆ. ಹಲವು ಮಸೀದಿಗಳು ಇಲ್ಲಿವೆ. ನವಲೇಗುಡ್ಡದ ಬ್ರಹ್ಮ ವಿಷ್ಣು ದೇವಾಲಯ, ಮಹಾತ್ಮಾಗಾಂಧಿ ಉದ್ಯಾನವನ ಹಾಗೂ ಮಕ್ಕಳ ರೈಲು ಮಕ್ಕಳನ್ನು ಆಕರ್ಷಸುತ್ತದೆ.

**ಸೇಕ್ರೇಡ್ ಹಾರ್ಟ್ ಚರ್ಚ್ :**

ರೋಮನ್ ಗಾಥಿಕ ವಾಸ್ತು ಶೈಲಿಯಲ್ಲಿ ನಿರ್ಮಿಸಿರುವ ಸೇಕ್ರೇಡ್ ಹಾರ್ಟ್ ಚರ್ಚ್ ಭಾರತದ ಎರಡನೆಯ ಅತಿ ವಿಸ್ತಾರವಾದ ಕಟ್ಟಡ ಎಂಬ ಹಿರಿಮೆ ಹೊಂದಿದೆ. ಈ ಚರ್ಚ್‌ನ ಸಭಾಂಗಣದಲ್ಲಿ ಏಕಕಾಲಕ್ಕೆ ೫೦೦ ಮಂದಿ ಕುಳಿತು ಪ್ರಾರ್ಥನೆ ಮಾಡಬಹುದಾಗಿದೆ.

**ಎಸ್.ಪಿ. ಆಫೀಸ್ :**

ಶಿವಮೊಗ್ಗ ಎಸ್.ಪಿ.ಆಫೀಸ್ ಆವರಣದಲ್ಲಿ ಹೊಸನಗರ, ಸಾಗರ, ಸೊರಬ ಸುತ್ತಮುತ್ತಲ ಪ್ರದೇಶದಲ್ಲಿ ಈ ಮೊದಲು ದೊರೆತ ವಿಗ್ರಹಗಳು, ಫಿರಂಗಿಗಳನ್ನು ಸಂಗ್ರಹಿಸಿ ಇಡಲಾಗಿದೆ. ಇವು ಸುಮಾರು ೮ ನೆಯ ಶತಮಾನದಿಂದ ೧೭ ನೆಯ ಶತಮಾನದವರೆಗಿನವು. ಇಲ್ಲಿರುವ ಶಿಲ್ಪಗಳು, ಚಾಲುಕ್ಯ, ಹೊಯ್ಸಳ, ವಿಜಯನಗರ ಮತ್ತು ಕೆಳದಿ ಕಾಲಕ್ಕೆ ಸೇರಿದವಾಗಿವೆ. ಸ್ಮಾರಕ ಶಿಲಗಳಲ್ಲಿ ವೀರಗಲ್ಲು, ಮಹಾಸತಿಕಲ್ಲು, ನಿಷಧಿಕಲ್ಲುಗಳು ಮಾತ್ರವಲ್ಲದೆ ಶಿಥಿಲ ದೇವಾಲಯದ ಬಿಡಿಭಾಗಗಳೂ ಇವೆ.

**ಗುಡ್ಡೇಕಲ್ :**

ಶಿವಮೊಗ್ಗ ಹೊಳೆಹೊನ್ನೂರು ರಸ್ತೆಯಲ್ಲಿದೆ, ಇಲ್ಲಿ ಶ್ರೀ ಬಾಲ ಸುಬ್ರಮಣ್ಯಸ್ವಾಮಿಯ ಅಡಿಕೃತಿಕೆ (ಹರೋಹರ) ಜಾತ್ರೆ ಸಂಭ್ರಮ ಹಾಗೂ ವೈಭವದಿಂದ ನಡೆಯುತ್ತದೆ. ಬೆಟ್ಟದ ಮೇಲಿರುವ ಬಾಲಸುಬ್ರಮಣ್ಯ ಸ್ವಾಮಿಯ ದರ್ಶನ ಪಡೆದು ಅದಕ್ಕೆ ಹರಕೆ ಒಪ್ಪಿಸುವುದು ಇಲ್ಲಿಯ ವಿಶೇಷ.

**ಹರಕೆರೆ :**

ಶಿವಮೊಗ್ಗ–ಗಾಜನೂರು ಮಾರ್ಗದಲ್ಲಿ ಶಿವಮೊಗ್ಗದಿಂದ ಸುಮಾರು ೩ ಕಿ.ಮೀ. ದೂರದಲ್ಲಿದೆ. ಈಶ್ವರ ದೇವಾಲಯವಿದ್ದು ಶಿವರಾತ್ರಿ ಸಮುದಾಯದಲ್ಲಿ ವಿಶೇಷ ಪೂಜೆ ನಡೆಯುತ್ತದೆ.

**ಕುಂಬಾಸಿ :**

ಕುಂಸಿ ಎಂಬುದಾಗಿ ಕರೆಯಲ್ಪಡುವ ಕುಂಬಾಸಿ ಶಿವಮೊಗ್ಗದಿಂದ ಸುಮಾರು ೨೪ ಕಿ.ಮೀ. ದೂರದಲ್ಲಿದೆ. ಇದು ಜಿನ ಬಸದಿಗಾಗಿ ಸಂತರ ಜಿನದತ್ತನು ೭ನೆಯ ಶತಮಾನದಲ್ಲಿ ದಾನವಾಗಿ ಬಿಟ್ಟ ಹಳ್ಳಿ. ಇಲ್ಲಿ ಜಿನಬಸದಿ, ಹೊಸದೇಗುಲ, ಮಸೀದಿಗಳಿವೆ. ಹನುಮಂತನ ದೇವಾಲಯ ವಾಸ್ತು ಶಿಲ್ಪದ ದೃಷ್ಟಿಯಿಂದ ಗಮನ ಸೆಳೆಯುತ್ತದೆ.

**ಗಾಜನೂರು:**

ತುಂಗಾ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಿರುವ ಸ್ಥಳ. ಇದು ಶಿವಮೊಗ್ಗದಿಂದ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಜಲಾವೃತದಿಂದ ಕೂಡಿದ ಜಲಸಾಗರದ ರಮ್ಯ ನೋಟ.

**ಸಕ್ರೆಬೈಲು :**

ಶಿವಮೊಗ್ಗದಿಂದ ತೀರ್ಥಹಳ್ಳಿ ಮಾರ್ಗದಲ್ಲಿ ಸುಮಾರು ೧೨ ಕಿ.ಮೀ. ದೂರದಲ್ಲಿದೆ. ಇದು ಆನೆಗಳನ್ನು ಪಳಗಿಸುವ ಸ್ಥಳ. ಸಫಾರಿ ವ್ಯವಸ್ಥೆ ಇಲ್ಲಿದೆ.

**ತ್ಯಾವರೆಕೊಪ್ಪ :**

ಶಿವಮೊಗ್ಗ ಸಾಗರ ರಸ್ತೆಯಲ್ಲಿ ಶಿವಮೊಗ್ಗದಿಂದ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಶಿವಮೊಗ್ಗದ ಪ್ರವಾಸೋದ್ಯಮ ನಕ್ಷೆಯಲ್ಲಿ ತಾವರೆಕೊಪ್ಪ ಹುಲಿಧಾಮಕ್ಕೆ ಉತ್ತಮ ಸೇರ್ಪಡೆಯಾಗಿದೆ. ಹುಲಿ, ಸಿಂಹ ಅಭಯಾರಣ್ಯ, ವನ್ಯಧಾಮ. ಕಾಡಿನ ರಾಜನ ಗತ್ತು, ಗಾಂಭೀರ್ಯ, ಹುಲಿಯ ಗಂಭೀರ ನಡಿಗೆಯನ್ನು ಇಲ್ಲಿ ಅನುಭವಿಸಬಹುದು. ಪ್ರವಾಸಿಗರು ನೋಡಲೇಬೇಕಾದ ವನ್ಯ ಪ್ರಾಣಿ ಧಾಮ ಇದು. ಇಲ್ಲಿ ೧೫ ಹುಲಿಗಳಿವೆ, ೩ ಸಿಂಹ ಇದೆ, ೮ ಚಿರತೆ. ೧ ಕತ್ತೆ ಕಿರುಬ, ೬ ನರಿಗಳು, ೩೩ ಜಿಂಕೆಗಳು, ೩೦ ಕೃಷ್ಣಮೃಗ, ೩ ಮೊಸಳೆ, ೨ ಮುಳ್ಳುಹಂದಿ, ೨ ಹೆಬ್ಬಾವು, ೪ ನವಿಲುಗಳಿವೆ. ಇದು ಸುಮಾರು ೨೦೦ ಹೆಕ್ಟೇರ್ ವಿಸ್ತೀರ್ಣವನ್ನು ಹೊಂದಿದೆ. ಅಲ್ಲದೆ ಹಲವು ಕಾಡು ಪ್ರಾಣಿಗಳಿವೆ.

ನಾಗರೀಕತೆಯ ಅಮಲಿನಲ್ಲಿ ಯಾಂತ್ರೀಕರಣದ ದಾಪುಗಾಲಿಡುತ್ತಿರುವ ಈ ಶಿವಮೊಗ್ಗ ನಗರದಲ್ಲಿ ಅಂದಿನ ರಾಜವೈಭವವನ್ನು ನೆನಪಿಸುವ ಕೆಳದಿ ಅರಸರ ಕಾಲದ ಅರಮನೆ ಇದೆ. ಇದು ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳಲ್ಲಿ ಒಂದಾಗಿದ್ದರೂ ಅತ್ಯಂತ ಕಡೆಗಣಿಸಲ್ಪಟ್ಟಿರುವ ಸ್ಥಳವಾಗಿದೆ. ಶಿವಮೊಗ್ಗ ಈ ಅರಮನೆಯಲ್ಲಿ ದೇಶೀಯ ಕಲಾ ವೈಭವ ಎದ್ದು ಕಾಣುತ್ತದೆ.

ಶಿವಮೊಗ್ಗದ ಆಕರ್ಷಣೆಗಳಲ್ಲಿ ತುಂಗಾ ನದಿಯ ಎಡದಂಡೆಯ ಮೇಲಿರುವ ಸುಂದರವಾದ ಪ್ರಾಕೃತಿಕ ಹಿನ್ನೆಲೆಯಲ್ಲಿರುವ ಮಧ್ಯಕಾಲೀನ ಇತಿಹಾಸ ಕಾಲಕ್ಕೆ ಸೇರುವ ಕೋಟೆ. ದೇವಾಲಯ ಮತ್ತು ಅರಮನೆ ಪ್ರಮುಖವಾಗಿದೆ.

**ವಸ್ತು ಸಂಗ್ರಹಾಲಯ :**

೧೯೬೩ರಲ್ಲಿ ಅಂದಿನ ಶಿವಮೊಗ್ಗ ಜಿಲ್ಲಾ ಜಿಲ್ಲಾಧಿಕಾರಿಗಳಾಗಿದ್ದ ಹೆಚ್.ಎಲ್. ನಾಗೇಗೌಡ ರವರ ಕಾಳಜಿಯಿಂದ ಈ ಮೊದಲು ಕೇಂದ್ರ ಗ್ರಂಥಾಲಯದ ಕಟ್ಟಡದ ಆವರಣದಲ್ಲಿ ಸಂಗ್ರಹಿಸಿಡಲಾಗಿದ್ದ ವಸ್ತು ಸಂಗ್ರಹಾಲಯವನ್ನು ಪುರಾತತ್ವ ಇಲಾಖೆಯ ಅಡಿಯಲ್ಲಿ ಸೇರಿಸಿ ಶಿವಪ್ಪನಾಯಕ ಅರಮನೆಯ ಆವರಣದಲ್ಲಿ ಸಂರಕ್ಷಿಸಿಡಲಾಗಿದೆ. ಅಲ್ಲಿ ಜಿಲ್ಲೆಯ ಮೂಲೆ ಮೂಲೆಯಿಂದ ಸಂಗ್ರಹಿಸಿರುವ ಪ್ರಾಚ್ಯಾವಶೇಷಗಳನ್ನು ಪ್ರದರ್ಶನಕ್ಕಾಗಿ ಇಡಲಾಗಿದೆ. ಇವು ಶಿವಮೊಗ್ಗ ಜಿಲ್ಲೆಯ ಇತಿಹಾಸದ ಮೇಲೆ ಬೆಳಕು ಚೆಲ್ಲಲು ಸಹಕಾರಿಯಾಗಿವೆ. ಮಡಿಕೆ, ಕಲ್ಲಿನ ಅಯುಧಗಳು, ಸಿಂಧೂ ನಾಗರೀಕತೆಯ ಮುದ್ರಿಕೆ ಮೊದಲಾಗಿ ಪ್ರಾಗೈತಿಹಾಸಿಕ ಮಾನವನ ಶಿಲಾಯುಧಗಳಿಂದ ಪ್ರಾರಂಭವಾಗಿ ಇತ್ತೀಚಿನ ಗುಡಿಗಾರರ

ನಿರ್ಮಿತಿಯವರೆಗೆ ಸಾಕಷ್ಟು ಶಿಲ್ಪಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ. ಸುಮಾರು ೬ ನೆಯ ಶತಮಾನದಿಂದ ಪ್ರಾರಂಭವಾಗಿ ೧೮ ನೆಯ ಶತಮಾನದವರೆಗಿನ ಶಿಲಾ ವಿಗ್ರಹಗಳನ್ನು ಪಂಥ ಮತ್ತು ಕಾಲಾನುಕ್ರಮಕ್ಕನುಗುಣವಾಗಿ ಇಲ್ಲಿ ಜೋಡಿಸಲಾಗಿದೆ. ಇದಲ್ಲದೆ ವೀರಗಲ್ಲು, ನಿಷಧಿಕಲ್ಲು, ತಾಡಯೋಲೆ, ಹಸ್ತಪ್ರತಿಗಳು, ಉಡುಪು, ಕತ್ತಿ, ಗುರಾಣಿ ಮೊದಲಾದವು ಪ್ರದರ್ಶನಗೊಂಡಿವೆ.

ಈ ಅರಮನೆಯು ಇಂಡೋ ಸಾರಸೇನಿಕ್ ಶೈಲಿಯಲ್ಲಿದೆ. ಇಲ್ಲಿಯ ಕಂಬಗಳು, ಕಮಾನುಗಳು, ಇಂಡೋ ಇಸ್ಲಾಮಿಕ್ ಶಿಲ್ಪಶೈಲಿಯನ್ನು ಒಳಗೊಂಡಿದೆ.

ಅರಮನೆಗೆ ಪ್ರವೇಶಿಸುವ ಮಹಾದ್ವಾರ ಅಥವಾ ಅದರ ಅವಶೇಷವೂ ಈಗ ಉಳಿದಿಲ್ಲ. ಅರಮನೆಯ ಸುತ್ತಲೂ ಕೋಟೆ ಮತ್ತು ಕಂದಕಗಳ ಅವಶೇಷವಿದೆ. ನದಿದಂಡೆಯ ಬಯಲಿನಲ್ಲಿ ಕಟ್ಟಿರುವ ಈ ಅರಮನೆಯ ಸುತ್ತಲೂ ಈಗ ಹೊಸ ಕಟ್ಟಡಗಳು ನಿರ್ಮಾಣವಾಗಿವೆ. ಅರಮನೆಯ ಮುಂಭಾಗದಲ್ಲಿ ಸ್ವಲ್ಪ ಅಂಗಳ ಉಳಿದಿದೆ. ಈ ಅರಮನೆಯನ್ನು "ಶಿವಪ್ಪನಾಯಕರ ಅರಮನೆ" ಎಂದು ಕರೆಯಲಾಯಿತು. ಆದರೆ ಇದರ ನಿರ್ಮಾಣಕಾಲ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಕಿರಿಯ ಸೋಮಶೇಖರನಾಯಕ (೧೭೧೪-೧೭೪೦) ನ ಕಾಲದಲ್ಲಿ ದೋಣಿ ದಾಟಿಸುವವನಿಗೆ ಅನುಮತಿ ನೀಡಿ, ಇವನು ಶಿವಮೊಗ್ಗೆಯ ಕೋಟೆಯ ಆಶ್ರಯದಲ್ಲಿರಬೇಕು ಎಂದು ಹೇಳಿದ್ದು, ಇದರಲ್ಲಿ ಅರಮನೆಯ ಉಲ್ಲೇಖವಿದೆ. ಆನಂದಪುರದ ಶ್ರೀ ಮುರುಘಾಮಠದ ಪರಂಪರೆಯ ಇಮ್ಮಡಿ ಮುರಿಗೆ ಗುರುಸಿದ್ಧಸ್ವಾಮಿಗಳು ಬರೆದಿರುವ "ಲಿಂಗಾಚಾರ ದೀಪಿಕಾ" ಎಂಬ ಗ್ರಂಥದಲ್ಲಿನ ಕೊನೆಯ ಗದ್ಯಭಾಗದಲ್ಲಿ ಈ ಕೃತಿಯನ್ನು ೧೭೧೪ ಸಂದುದು ಸಂವತ್ಸರದ ಜೇಷ್ಠ ಶು. ೭ ಆದಿವಾರದಲ್ಲು ಶಮಗೆಕೋಟೆ ಠಾಣದಾರ ನಂಬ್ಯಂಣನ ವೀರಪ್ಪನಾಯಕರ ಮನೆಯಲ್ಲಿ ಮುಗಿದುದು ಎಂಬ ಉಲ್ಲೇಖ ದೊರೆಯುತ್ತದೆ.

**ಅಮೂಲ್ಯ ಶೋಧ ಮತ್ತು ನೆನಪು ವಸ್ತು ಸಂಗ್ರಹಾಲಯ :**

ಇದು ಶಿವಮೊಗ್ಗ ಬಿ.ಆರ್.ಪಿ. ಮಾರ್ಗದಲ್ಲಿ ಶಿವಮೊಗ್ಗದಿಂದ ಸುಮಾರು ೧೫ ಕಿ.ಮೀ. ದೂರದಲ್ಲಿ ಲಕ್ಕಿನಕೊಪ್ಪ ಎಂಬಲ್ಲಿದೆ. ಖ್ಯಾತ ನಾಣ್ಯ ಸಂಗ್ರಹಕಾರ ಖಂಡೋಬರಾವ್ ರವರು ತಮ್ಮ ಹೆಂಡತಿಯ ಸ್ಮರಣಾರ್ಥ ಸ್ಥಾಪಿಸಿದ್ದಾರೆ. ಏಕ ವ್ಯಕ್ತಿ ವಸ್ತುಸಂಗ್ರಹಾಲಯ ತೀರಾ ಅಪರೂಪ. ಈ ವಸ್ತುಸಂಗ್ರಹಾಲಯದಲ್ಲಿ ಪೌರಾಣಿಕ, ಐತಿಹಾಸಿಕ ಮತ್ತು ಕಲಾತ್ಮಕ ವಸ್ತುಗಳ ಜೊತೆಗೆ ನಾಣ್ಯಪ್ರದರ್ಶನ ಗಮನ ಸೆಳೆಯುತ್ತದೆ.

ಅಡಿ ಟಿಪ್ಪಣಿ ೧ :ಶಿವಮೊಗ್ಗ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು: ಡಾ. ಕೆಳದಿ ವೆಂಕಟೇಶ ಜೋಯ್ಸ: ಪುಟ ಸಂಖ್ಯೆ ೨೨-೩೦

# ಅಧ್ಯಾಯ ೩

## ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಲೋಕ

# ಅಧ್ಯಾಯ ೩
# ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಲೋಕ

## ಸಾಮಾಜಿಕ ಜೀವನ

ಶ್ರೀಮಂತ ಸಾಂಸ್ಕೃತಿಕ ಪರಂಪರೆಯನ್ನು ತನ್ನ ಮಡಿಲಿನಲ್ಲಿ ತುಂಬಿಕೊಂಡು ವೈವಿಧ್ಯಮಯ ಧರ್ಮಗಳ, ಪುರಾಣಗಳ, ಶಾಸ್ತ್ರ ದರ್ಶನಗಳ ಜಲ ಸಮೃದ್ಧಿ ನದಿಗಳಿಂದ ಪುನೀತಗೊಂಡ ಪಾವನ ಪವಿತ್ರ ಭೂಮಿ ಶಿವಮೊಗ್ಗ ಜಿಲ್ಲೆ ಆರ್ಥಿಕ, ಸಾಮಾಜಿಕ, ರಾಜಕೀಯ ಮೌಲ್ಯಗಳಿಂದ ಇಂತಹ ಭೂಮಿಯನ್ನು ಕಟ್ಟಿ ಬೆಳೆಸಿದ್ದಾರೆ. ಸಾಹಿತ್ಯ, ಕಲೆ, ಹಾಗೂ ಸಂಸ್ಕೃತಿಯ ಅಡಿಯಲ್ಲಿ ಸಮೃದ್ಧಿ ಹಾಗೂ ನೆಮ್ಮದಿಯಿಂದ ಇಲ್ಲಿಯ ಜನರು ಬಾಳಿ ಬದುಕಿದ್ದಾರೆ. ನಮ್ಮ ಭಾರತ ಹಳ್ಳಿಗಳ ನಾಡು. ಇಲ್ಲಿನ ಗ್ರಾಮ ಸಮುದಾಯ ತನ್ನದೇ ಆದ ಹಲವು ವೈಶಿಷ್ಟ್ಯಗಳನ್ನು ಹೊಂದಿದ್ದು, ವಿಶ್ವದಲ್ಲಿಯೇ ಶ್ರೀಮಂತವಾದ ಸಂಸ್ಕೃತಿಯಿಂದ ಪ್ರಸಿದ್ಧವಾಗಿದೆ. ಈ ಸಂಸ್ಕೃತಿಯು ವೈವಿಧ್ಯತೆ ಹಾಗೂ ಐಕ್ಯತೆಯ ಎರಡೂ ಲಕ್ಷಣಗಳನ್ನು ಹೊಂದಿದೆ ಅದರೂ ವಿವಿಧತೆಯಲ್ಲಿ ಏಕತೆಯನ್ನು ಮೆರೆದಿದೆ.

ಈ ಹಿನ್ನೆಲೆಯಲ್ಲಿ ಭಾರತದಲ್ಲಿನ ಕರ್ನಾಟಕ ರಾಜ್ಯದ ಶಿವಮೊಗ್ಗ ಜಿಲ್ಲೆಯು ತಾಲ್ಲೂಕು, ನೂರಾರು ಹಳ್ಳಿಗಳನ್ನು ಹೊಂದಿದಂತಹ ಒಂದು ತಾಲ್ಲೂಕು ಪ್ರದೇಶವಾಗಿದ್ದು ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯದ ಗಡಿ ಪ್ರದೇಶದಲ್ಲಿ ಬರುತ್ತದೆ. ಇಲ್ಲಿನ ಪ್ರತಿ ೪೦ ಕಿ.ಮೀ. ಜನರ ಭಾಷೆ, ವಿವಾಹ, ಕುಟುಂಬಪದ್ಧತಿ ಧಾರ್ಮಿಕ ಭಾವನೆಗಳು, ಸಂಪ್ರದಾಯ, ಉಡುಗೆ, ತೊಡುಗೆ ಮುಂತಾದ ವಿಷಯಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳಿರುತ್ತವೆ ಎಂಬುದು ಸ್ಪಷ್ಟವಾಗಿದೆ. ಅಲ್ಲದೇ ಶಿವಮೊಗ್ಗ ಜಿಲ್ಲಾ ಪರಿಸರವು ಕನ್ನಡ, ಮರಾಠಿ ಸಂಸ್ಕೃತಿಗಳ ಮಿಶ್ರಣವಾಗಿದೆ. ಹಾಗು ಕನ್ನಡ ಮರಾಠಿ ಭಾಷೆಗಳ ಸಂಬಂಧ ವಿಶೇಷವಾಗಿದೆ. ಈ ಆಧಾರದ ಮೇಲೆ ಶಿವಮೊಗ್ಗ ಜಿಲ್ಲೆಯ ಪರಿಸರದ ಸಾಮಾಜಿಕ ಸ್ಥಿತಿಗತಿಯನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

ಭಾರತವು ವಿವಿಧ ಸಮುದಾಯದ, ಜನಾಂಗ, ಧರ್ಮ, ಭಾಷೆ, ಸಂಸ್ಕೃತಿಗಳ ಬಹುರೂಪಿ ಸಮಾಜವಾಗಿದ್ದು, ಇತರರೊಡನೆ ಬದುಕುವ ಅವಕಾಶವಿದ್ದರೂ, ಸಾಮಾಜಿಕ ನಿರ್ಬಂಧ ಇದ್ದು ಇನ್ನೂ ಸಂಪೂರ್ಣವಾಗಿ ಸುಧಾರಣೆಯಾಗಿಲ್ಲವೆಂದೇ ಹೇಳಬಹುದು.

ಸಮಾಜವು ನಿಂತ ನೀರಲ್ಲ. ಅದು ನಿತ್ಯ ಪರಿವರ್ತನಾಶೀಲವಾದುದು. ತನ್ನೊಳಗಿನ ಹಲವಾರು ಅಂಶಗಳಲ್ಲಿ ಬದಲಾವಣೆಗಳನ್ನು ಕಂಡಿದೆ. ಮಾನವ ಹಾಗೂ ಸಮಾಜ ಇವು ಒಂದನ್ನು ಬಿಟ್ಟು ಮತ್ತೊಂದಿಲ್ಲ. ಮಾನವ ಸಮಾಜದ ಚರಿತ್ರೆ ತುಂಬಾ ದೀರ್ಘವಾದುದು. ಒಂದು ಕಾಲದ ಅನಾಗರಿಕ ಮಾನವ ಸಮುದಾಯ ಬೆಳೆದು ಆಧುನೀಕರಣಗೊಂಡಿದೆ. ಮಾನವನು ಜನಿಸಿ ಹಂತಹಂತವಾಗಿ ವಿಕಾಸಹೊಂದಿ, ಬೌದ್ಧಿಕ ಹಾಗೂ ಭೌತಿಕ ಅಂಶಗಳಲ್ಲಿ ಬದಲಾವಣೆ ಹೊಂದಿದ್ದಾನೆ. ಹಾಗೆಯೇ

ಸಮಾಜವು ಸಹ ವಿಕಾಸ ಹೊಂದುತ್ತಲೇ ಬಂದಿದೆ. ಬದಲಾವಣೆ ಮತ್ತು ಪರಿವರ್ತನಾ ಅಂಶಗಳಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದ ಜನರ ಜೀವನವು ಒಂದಾಗಿದೆ. ದೇಶದ ವಿವಿಧೆಡೆ ನೆಲೆಸಿರುವ ಈ ಸಮುದಾಯದವರ ಬದುಕು ವಿವಿಧ ಕಾರಣಗಳಿಂದಾಗಿ ಸ್ಥಿತ್ಯಂತರಗೊಂಡಿದೆ. ಈ ಅಂಶವನ್ನು ಇಟ್ಟುಕೊಂಡು ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಜೀವನದಲ್ಲಿ ಇಂದು ಬದಲಾವಣೆಯಾಗಿರುವುದನ್ನು ನಾವು ಗಮನಿಸಬಹುದು.

ಇಂದಿನ ದಿನಗಳಲ್ಲಿ ಸಮಾಜದ ಮೇಲೆ ಹಿಡಿತ ಸಾಧಿಸಿರುವ ಮುಖ್ಯ ಅಂಶಗಳಾದ ಆಧುನೀಕರಣ, ನಗರೀಕರಣ, ಪಾಶ್ಚಾತ್ಯೀಕರಣ, ಔದ್ಯೋಗೀಕರಣಗಳ ಪ್ರಭಾವಕ್ಕೆ ಒಳಗಾಗಿ ಈ ಸಮುದಾಯದವರು ಬದಲಾವಣೆ ಹೊಂದುತ್ತಿದ್ದಾರೆ. ಈ ಬಾಹುಸಾರ ಕ್ಷತ್ರಿಯ ಸಮುದಾಯದ ಮೇಲೆ ಇತರೆ ಜಾತಿ ಸಮುದಾಯಗಳು ಪ್ರಭಾವ ಬೀರಿ ಇಂದು ತನ್ನಲ್ಲಿರುವ ಕೆಲವು ಆಚರಣಾಕ್ರಮ ಹಾಗೂ ಜೀವನದ ವಿಧಾನದಲ್ಲಿ ಬದಲಾವಣೆಯಾಗಿರುವುದು ಕಂಡುಬರುತ್ತದೆ.

### ೩.೧ ಮೂಲ

ತ್ರೇತಾಯುಗದಲ್ಲಿ ಕಾರ್ತವೀರ್ಯಾರ್ಜುನ ಎಂಬ ರಾಜನ ಸಾಮ್ರಾಜ್ಯದಲ್ಲಿ ಜವದಗ್ನಿ ಎಂಬ ಮಹರ್ಷಿಯು ತನ್ನ ಆಶ್ರಮದಲ್ಲಿ ಕಾಮಧೇನು ಎಂಬ ಹಸುವನ್ನು ದೇವರ ಅನುಗ್ರಹದಿಂದ ಪಡೆದು ಸಲಹುತ್ತಿರುತ್ತಾನೆ. ಆ ಹಸುವನ್ನು ಪಡೆಯಲು ರಾಜನಾದ ಕಾರ್ತವೀರ್ಯಾರ್ಜುನನು ಜಮದಗ್ನಿಯಲ್ಲಿ ವಿಚಾರಿಸಲಾಗಿ, ಮಹರ್ಷಿಯು ಅದನ್ನು ಕೊಡಲೊಪ್ಪದಿದ್ದಾಗ, ರಾಜನು ಬಲಪ್ರದರ್ಶನದಿಂದ ಹಸುವನ್ನು ತೆಗೆದುಕೊಂಡು ಹೋಗಲು ಪ್ರಯತ್ನಿಸಿದಾಗ, ಮಹರ್ಷಿಯು ತನ್ನ ಪುತ್ರನಾದ ಪರಶುರಾಮನನ್ನು ನೆನೆಯುತ್ತಾನೆ. ಪರಶುರಾಮನು ಆಶ್ರಮಕ್ಕೆ ಬಂದು ರಾಜನ ದೌರ್ಜನ್ಯವನ್ನು ಕಂಡು ಕ್ಷತ್ರಿಯರ ವಂಶವನ್ನೇ ನಾಶಮಾಡುವ ಪ್ರತಿಜ್ಞೆಯುತ್ತಾನೆ. ನಂತರ ತನ್ನ ಪ್ರತಿಜ್ಞೆಯನ್ನು ಪೂರೈಸುವ ಸಲುವಾಗಿ ಇಡೀ ಭೂಮಂಡಲವನ್ನು ಪ್ರದಕ್ಷಿಣೆ ಮಾಡಿ ಕ್ಷತ್ರಿಯರನ್ನು ಸಂಹಾರ ಮಾಡುತ್ತಿರುತ್ತಾನೆ. ಹೀಗೆ ಕ್ಷತ್ರಿಯರನ್ನು ಹುಡುಕಿಕೊಂಡು ಬರುವಂತಹ ಸಂದರ್ಭದಲ್ಲಿ ಬರೂಚ್ ಭಾಗದಲ್ಲಿದ್ದಂತಹ ಜನ (ಈಗ ನಮ್ಮ ದೇಶದಲ್ಲಿಲ್ಲ ಈಗ ಅದು ಪಾಕಿಸ್ತಾನದಲ್ಲಿದೆ. ಈಗ ಇಡೀ ಭಾರತ ಇಡಿಯಾಗಿಲ್ಲ, ತುಂಡಾಗಿದೆ. ಆದು ಪಾಕಿ ಕೈಯಲ್ಲಿದೆ.) ಕ್ಷತ್ರಿಯಕುಲದವರಾ ೧. ಭಾವಸಿಂಗ್, ೨. ಸಾರಸಿಂಗ್ ಎಂಬುವವರು ಪರಶುರಾಮರಿಂದ ರಕ್ಷಣೆಗಾಗಿ ಆ ಪ್ರದೇಶದಲ್ಲಿದ್ದ ಹಿಂಗುಲಾಂಬ ದೇವಿಯ ಮೊರೆ ಹೋಗಲಿಕ್ಕೆ ದೇವಸ್ಥಾನಕ್ಕೆ ಬಂದು ನೆರವು ಕೊಡೆಂದು ಅಲ್ಲಿ ಬಂದು ಬಚ್ಚಿಟ್ಟುಕೊಳ್ಳುತ್ತಾರೆ. ಆಗ ಪರಶುರಾಮ ತನ್ನ ದಿವ್ಯ ಜ್ಞಾನದಿಂದ ಅವರನ್ನು ಗುರುತಿಸಿ ಇನ್ನೇನು ಅವರನ್ನು ಕೊಡಲಿಯಿಂದ ಹೊಡೆಯುವಷ್ಟರಲ್ಲಿ ದೇವಿ ಹಿಂಗುಲಾಂಬಿಕೆಯು ಪ್ರತ್ಯಕ್ಷಳಾಗಿ ಪರಶುರಾಮನನ್ನು ಕಂಡು ಅವರಿಬ್ಬರ ಜಾತಿಯನ್ನು ತಿಳಿಹೇಳುತ್ತಾಳೆ. ಅದರಂತೆ ಇವರಿಬ್ಬರೂ ಕ್ಷತ್ರಿಯರಲ್ಲ ಒಬ್ಬ ನನ್ನ ಬಟ್ಟೆ ಹೊಲೆಯುವ ಸಿಂಪಿಗ, ಮತ್ತೊಬ್ಬ ನನ್ನ ಬಟ್ಟೆಗೆ ಬಣ್ಣ ಹಾಕುವ ರಂಗಾರೆ ಜಾತಿಯವರು ಎಂದು ಅವರ ಜಾತಿಯನ್ನು ತಿಳಿಹೇಳಿದಾಗ ಪರಶುರಾಮನು

ಹಿಂತಿರುಗುತ್ತಾರೆ (ಭಾವಸಾರರಲ್ಲಿ ಸಿಂಗ್ ಎಂದರೆ ಕ್ಷತ್ರಿಯ). ದೇವಿಯಿಂದ ರಕ್ಷಿತರಾದ ಅವರು ದೇವಿಯ ಭಕ್ತರಾದರು. ಅಂತಹ ಸಮುದಾಯಕ್ಕೆ ಸೇರಿದವರೆಂದು ಮುಂದಿನ ಪೀಳಿಗೆ ನಮ್ಮನ್ನು ಭಾವಸಾರ ಕ್ಷತ್ರಿಯ ಎಂದು ಗುರುತಿಸಿದರು.

ನಂತರ ಇತ್ತೀಚಿನ ದಿನಗಳಲ್ಲಿ ಭಾವಸಾರ ಕ್ಷತ್ರಿಯರು ಯಾವುದರಲ್ಲೂ ಕಡಿಮೆಯಿಲ್ಲ. ಸ್ವಾತಂತ್ರ್ಯ ಹೋರಾಟದ ಎಲ್ಲಾ ಆಘಾತಗಳಿಗೂ, ದಬ್ಬಾಳಿಕೆಗಳಿಗೂ ಎದೆಯೊಡ್ಡಿ ಹೋರಾಟವನ್ನು ಮಾಡುತ್ತಾ ಬ್ರಿಟೀಷರೊಂದಿಗೆ ಯುದ್ಧಗಳನ್ನು ಮಾಡಿ ಸ್ವಾತಂತ್ರ್ಯಪೂರ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮಾಡಿದ್ದಾರೆ ಹಾಗೂ ಸ್ವಾತಂತ್ರ್ಯವು ಸಿಗಲು ಕಾರಣಕರ್ತರಾಗಿದ್ದಾರೆ. ಅಂತಹ ಪೀಳಿಗೆ ಭಾವಸಾರ ಕ್ಷತ್ರಿಯರದ್ದು ಎನ್ನುವರು ಈ ಸಮುದಾಯದ ಹಿರಿಯರು.

**ಶಕ್ತಿ ಸ್ಥಳಗಳು**

೫೨ ಶಕ್ತಿ ಸ್ಥಳಗಳಿವೆ. ಇದಕ್ಕೆ ಕಾರಣ ಹಿಂದೆ ದಕ್ಷಬ್ರಹ್ಮನ ಆಸ್ಥಾನದಲ್ಲಿ ನಡೆದಂತಹ ಯಜ್ಞಕ್ಕೆ ಪಾರ್ವತಿ ಮಾತ್ರ ಬರುವಳು. ಅವಳ ಪತಿಯಾದ ಶಿವನು ಬಂದಿರುವುದಿಲ್ಲ. ಈ ಸಮಯದಲ್ಲಿ ಆಕೆಗೆ ಅವಮಾನವಾಗುತ್ತದೆ. ಅವಮಾನವನ್ನು ಸಹಿಸದೇ ಪಾರ್ವತಿಯು ಯಜ್ಞಕುಂಡಕ್ಕೆ ಹಾರುವಳು. ತಕ್ಷಣವೇ ಶಿವನು ಪ್ರತ್ಯಕ್ಷನಾಗಿ ಅರೆಬೆಂದ ಪಾರ್ವತಿಯ ದೇಹವನ್ನು ಕಂಡು ರುದ್ರರೂಪವನ್ನು ತಾಳಿದಾಗ, ವಿಷ್ಣುವು ಆ ದೇಹವನ್ನು ಶಿವನಿಗೆ ಗೊತ್ತಿಲ್ಲದಂತೆ ತನ್ನ ಚಕ್ರವನ್ನು ಪ್ರಯೋಗಿಸಿ ೫೨ ತುಂಡುಗಳನ್ನಾಗಿ ಕತ್ತರಿಸಿ ಹಾಕುತ್ತಾನೆ. ಮೊದಲು ಮೆದುಳಿನ ಭಾಗವು ಈಗಿನ ಬಲೂಚ್ ಪ್ರಾಂತ್ಯದಲ್ಲಿರುವ ಬಲೂಚಿಸ್ತಾನದಲ್ಲಿ ಬೀಳುತ್ತದೆ. ಅಲ್ಲಿ ಅದು ನದಿಯಾಗಿ ಹರಿಯುತ್ತದೆ. ಹೀಗೆ ಇದೊಂದು ಶಕ್ತಿ ಸ್ಥಳವಾಯಿತು.

ಶಕ್ತಿ ಸ್ಥಳಗಳನ್ನು ಗುರುತಿಸುವುದು ಬಹು ಸುಲಭ. ಎಲ್ಲೆಲ್ಲಿ ಶಕ್ತಿ ಸ್ಥಳಗಳಿವೆಯೋ ಅಲ್ಲಿಯೇ ಎದುರಿಗಡೆ ಶಿವನ ದೇವಾಲಯವಿರುವುದು. ಎರಡೂ ದೇವಾಲಯಗಳಲ್ಲಿ ಒಟ್ಟಿಗೇ ಪೂಜೆ ಪುನಸ್ಕಾರಗಳು ನಡೆಯುತ್ತವೆ. ನಮ್ಮ ದೇಶದ ವಿವಿಧ ಭಾಗಗಳಲ್ಲಿ ೫೨ ಶಕ್ತಿ ಸ್ಥಳಗಳಿವೆ. ಕರ್ನಾಟಕ ರಾಜ್ಯದ ವಿವಿಧೆಡೆ ಭಾವಸಾರ ಕ್ಷತ್ರಿಯ ಸಮುದಾಯದವರು ಸುಮಾರು ೩.೫.೦೦೦ ಲಕ್ಷ ಜನರಿದ್ದಾರೆ. ಇದರಲ್ಲಿ ಶಿವಮೊಗ್ಗ ನಗರದಲ್ಲಿಯೇ ಸುಮಾರು ೭೦ ಸಾವಿರ ಸಂಖ್ಯೆಯಷ್ಟು ಭಾವಸಾರ ಕ್ಷತ್ರಿಯ ಸಮುದಾಯದವರಿದ್ದಾರೆ. ಕರ್ನಾಟಕದಲ್ಲಿ ನೆಲೆಸಿರುವ ಜನಾಂಗದವರ ಮುಖ್ಯ ಕಸುಬು ಬಟ್ಟೆ ಹೊಲಿಯುವುದಾಗಿದೆ ಹಾಗೂ ಬಟ್ಟೆ ವ್ಯಾಪಾರವಾಗಿರುತ್ತದೆ. ಇವರುಗಳು ಇಲ್ಲಿನ ವ್ಯವಸ್ಥೆಗೆ ಹೊಂದಿಕೊಂಡು, ಸಾಂಸ್ಕೃತಿಕವಾಗಿ ಮುಂದುವರೆದಿದ್ದರೂ ಆರ್ಥಿಕವಾಗಿ ಹಿಂದುಳಿದಿದ್ದಾರೆಂದು ಹಿರಿಯರು ಹೇಳುತ್ತಾರೆ.

**ಭಾವಸಾರ ಕ್ಷತ್ರಿಯ ಆರಾಧ್ಯದೇವತೆಯಾದ ಶ್ರೀ ಹಿಂಗುಲಾಂಬಾ ದೇವಿಯ ವಿವರ**

**ಹಿಂಗುಲಾ ಹೆಸರಿನ ಮೂಲ:**

ಮೊಗಲರ ಕಾಲದ ವಿಚಾದಾರ್ ಎಂಬ ಹೆಸರಿನ ರಾಜನಿಗೆ ಎರಡು ಮಕ್ಕಳು. ಅವರ ಹೆಸರುಗಳು ಹಿಂಗೂಲ್ ಮತ್ತು ಸುಂದರ್ ಎಂಬುದಾಗಿದೆ. ಸೂರ್ಯವಂಶಸ್ಥರಾದ ಇವರು ಚೀನಾದೇಶದಲ್ಲಿ ಆಡಳಿತವನ್ನು ನಡೆಸುತ್ತಿದ್ದರು. ಇಲ್ಲಿರುವ ಜನರು ಚಂದ್ರವಂಶದ ಕ್ಷತ್ರಿಯರಾಗಿದ್ದರು. ಸುಂದರ್ ಎಂಬುವನು ರಾಜನ ಮೊದಲ ಮಗ. ಈತನು ಜನರೊಂದಿಗೆ ಕ್ರೂರವಾಗಿ ವರ್ತಿಸಿ ಅವರಿಗೆ ದೌರ್ಜನ್ಯವೆಸಗುತ್ತಿದ್ದನು. ಇವನ ದೌರ್ಜನ್ಯಕ್ಕೆ ಒಳಗಾದ ಅಲ್ಲಿನ ಜನರು ಶಿವನನ್ನು ಪ್ರಾರ್ಥಿಸಿ ಬೇಡಿಕೊಂಡಾಗ, ಶಿವನು ತನ್ನ ಮಗನಾದ ಗಣೇಶನನ್ನು ಈತನ ಸಂಹಾರಕ್ಕಾಗಿ ಕಳಿಸಿದ. ಆಗ ಗಣೇಶನು ಮೂರು ದಿನದಲ್ಲಿ ರಾಜನ ಮಗನಾದ ಸುಂದರನನ್ನು ಸಂಹರಿಸುತ್ತಾನೆ. ತನ್ನ ಅಣ್ಣ ಸತ್ತನೆಂದು ಇವನ ತಮ್ಮನಾದ ಹಿಂಗೂಲ್‌ನು ಅಣ್ಣನ ಸಾವಿನ ಸೇಡು ತೀರಿಸಿಕೊಳ್ಳಲು ತಾನು ಅಗ್ನಿ, ವಾಯು, ನೀರು ಯಾವುದರಿಂದಲೂ ಸಾಯಬಾರದೆಂದು ವರಪಡೆದನು. ತನಗೆ ಸಾವು ಸಂಭವಿಸುವುದಾದರೆ ಸೂರ್ಯನ ಕಿರಣ ಬೀಳದ ಜಾಗದಲ್ಲಿ ಮಾತ್ರ ಸಾವು ಬರಬೇಕೆಂದು ವರ ಪಡೆದನು. ನಂತರ ಸುತ್ತಮುತ್ತಲಿನ ಎಲ್ಲಾ ರಾಜರನ್ನು ಸಂಹರಿಸಿ ತಾನಾಗಿಯೇ ಹಿಂಗುಲ್ ದೇವ ಎಂದು ಹೆಸರಿಟ್ಟುಕೊಂಡನು. ನಂತರ ಜನರೆಲ್ಲ ಇವನ ಕಾಟ ತಡೆಯಲಾಗದೇ ಯಾಗ ಹವನವನ್ನು ದೇವಿ ಮಠದಲ್ಲಿ ಮಾಡಿದರು ನಂತರ ಆ ದೇವಿ ಪ್ರತ್ಯಕ್ಷಳಾಗಿ ನಾನು ಹಿಂಗುಲನನ್ನು ಸಂಹರಿಸುತ್ತೇನೆ ಎಂದು ಸತ್ಯದೀಪ್ ಎಂಬ ಹೆಸರಿನ ರೂಪದಲ್ಲಿ (ಬಲೂಚಿಸ್ತಾನ) ಕತ್ತಲೆಯ ಗುಹೆಯಲ್ಲಿ ಹಿಂಗುಲ್ ವಾಸಿಸುತ್ತಿದ್ದ ಸ್ಥಳಕ್ಕೆ ಬಂದು ಆಕೆಯ ತ್ರಿಶೂಲದಿಂದ ಸಂಹರಿಸುತ್ತಾಳೆ. ಅವನು ಸಾಯುವುದಕ್ಕಿಂತ ಮುಂಚೆ ಈ ಜಾಗವನ್ನು ಹಿಂಗುಲ್ ತೀರ್ಥ ಎಂದು ಕರೆಯಬೇಕೆಂದು ಕೇಳಿಕೊಂಡನು. ಅಂದಿನಿಂದ ಈ ಪ್ರದೇಶವು ಹಿಂಗೂಲ್ ತೀರ್ಥ ಎಂದು ಪ್ರಸಿದ್ಧವಾಯಿತು. ಅಂದಿನಿಂದ ಪ್ರಜಾಕಂಟಕನಾದ ಹಿಂಗೂಲ್‌ನನ್ನು ದೇವಿಯು ಸಂಹರಿಸಿದಕ್ಕಾಗಿ ಆ ದೇವಿಗೆ ಹಿಂಗುಲಾಂಬಿಕೆ ಎಂಬ ಹೆಸರಿನಿಂದ ಪೂಜಿಸಲ್ಪಡುತ್ತಿದ್ದಾಳೆ.

ಹಿಂದೂ ದರ್ಶನ ಶಾಸ್ತ್ರದಲ್ಲಿ ಸ್ತ್ರೀಯು ದೇವಿಯ ರೂಪವಾಗಿದ್ದಾಳೆ. ಆಕೆಯ ಪೂಜೆ ಆದಿಕಾಲದಿಂದಲೂ ನಡೆದು ಬಂದಿದೆ. ಶಿವನ ಹೆಸರುಗಳ ೫೨ ಶಕ್ತಿ ಪೀಠಗಳಿವೆ. ಅವುಗಳಲ್ಲಿ ಎರಡು ದೇವಿಗೆ ಸಂಬಂಧಿಸಿದವುಗಳು. ಒಂದು **ಗುವಾಹತಿಯ ಕಾಮಾಖ್ಯಾ ದೇವಿ,** ಇನ್ನೊಂದು **ಬಲೂಚಿಸ್ತಾನದ ಹಿಂಗಲಾಜ ದೇವಿ.** ಇವೆರಡು ಪೂರ್ವ – ಪಶ್ಚಿಮಗಳಲ್ಲಿ ಭಾರತೀಯ ಸಂಸ್ಕೃತಿಯ ಕಾವಲುಗಾರರು. ಆರ್ಯಾವರ್ತನ ವಿಭಜನೆಯಾಗುತ್ತಾ ಹೋದ ಹಾಗೆ ಹಿಂದೂಗಳ ಅನೇಕ ತೀರ್ಥ ಕ್ಷೇತ್ರಗಳು ವಿದೇಶಗಳ ಸೊತ್ತಾದವು. **ಇರಾನ್, ಅಫಘಾನಿಸ್ತಾನ, ಕಠಮಂಡೂವಿನಿಂದ ಹಿಡಿದು ಬಾಂಗ್ಲಾದೇಶ, ಇಂಡೋನೇಷ್ಯಾ** ಮುಂತಾದ ಆಗ್ನೇಯ ಏಷ್ಯಾದ ದೇಶಗಳಲ್ಲಿ ಇಂತಹ ಹಿಂದೂ ತೀರ್ಥಕ್ಷೇತ್ರಗಳು ಕಂಡು ಬರುತ್ತಿವೆ. ಪಾಕಿಸ್ತಾನದ ನರಸಿಂಹ ಮಂದಿರ ಮುಂತಾದ ಅನೇಕ ಹಿಂದೂ ಕ್ಷೇತ್ರಗಳು ಜೀರ್ಣಾವಸ್ಥೆಯಲ್ಲಿವೆ. ಹಿಂದೂ ಶ್ರದ್ಧೆ ಮತ್ತು ದರ್ಶನಗಳ ಪ್ರಕಾರ ಪಾಕಿಸ್ತಾನದಲ್ಲಿ ಅತ್ಯಂತ ದೊಡ್ಡ

ತೀರ್ಥಕ್ಷೇತ್ರ ಇರುವುದು **ಹಿಂಗುಲಾಂಬ ದೇವಿ ಶಕ್ತಿ ಪೀಠ**. ದೇಶ ವಿಭಜನೆಯ ಮೊದಲು ಗುಜರಾತ್ ಮತ್ತು ರಾಜಸ್ಥಾನದಿಂದ ಬಹಳಷ್ಟು ಜನ ಹಿಂಗುಲಾಂಬ ದೇವಿಯ ದರ್ಶನಕ್ಕೆ ಹೋಗುತ್ತಿದ್ದರು. ಪಾಕಿಸ್ತಾನ ಆದ ಮೇಲೆ ಬಲೂಚಿಸ್ತಾನವು ಪಾಕಿಸ್ತಾನದ ಅಂಗವಾಯಿತು. ಹಿಂಗಲಾಂಬ ದೇವಿಯ ಮಹತ್ವ ಕಡಿಮೆಯಾಯಿತು. ಬಹಳ ಹಿಂದೆ ಬಲೂಚಿಸ್ತಾನವು ಇರಾನಿನ ಭಾಗವಾಗಿತ್ತು. ಆ ಕಾಲದಲ್ಲಿ ಇದನ್ನು ಇರಾನಿಯರು ತಮ್ಮ ದೇವಿಯ ಮಂದಿರ ಎಂದು ಹೇಳಿಕೊಳ್ಳುತ್ತಿದ್ದರು. ಈಗ ಹಿಂಗುಲಾಂಬ ದೇವಿ ಕೇವಲ ಆದಿವಾಸಿಗಳ ದೇವಿಯಾಗಿ ಉಳಿದುಬಿಟ್ಟಿದ್ದಾಳೆ. ಆದಿವಾಸಿಗಳು ಇದನ್ನು ನಾನಿಕಾಹಜ್ ಎಂದು ಕರೆಯುತ್ತಾರೆ. ಅವರೆಲ್ಲ ಮುಸ್ಲೀಮರಲ್ಲ. ಆದರೂ ಹಜ್ ಶಬ್ದದ ಉಪಯೋಗ ಅಲ್ಲಿ ಆಗುತ್ತಿದೆ. ಅದೊಂದು ಆಶ್ಚರ್ಯದ ವಿಷಯ.

ಪಂಜಾಬಿನ ಗಡಿಯಲ್ಲಿರುವ ಗುರುದ್ವಾರಗಳು ಅಂತರ ರಾಷ್ಟ್ರೀಯ ಒತ್ತಡದಿಂದಾಗಿ ಈಗ ಸಿಖ್ಖರಿಗೆ ತೆರೆಯಲ್ಪಟ್ಟಿದೆ. ಪಾಕಿಸ್ತಾನ ಆ ಗುರುದ್ವಾರಗಳ ರಿಪೇರಿಗಾಗಿ ಹಣ ಖರ್ಚು ಮಾಡುವುದಿಲ್ಲ. ಆದರೆ ವಿದೇಶದಲ್ಲಿರುವ ಸಿಖ್ಖರು ಈ ಕಾರ್ಯ ಮಾಡಲು ಪಾಕಿಸ್ತಾನ ಅನುಮತಿ ಕೊಟ್ಟಿದೆ. ಈ ಗುರುದ್ವಾರಗಳನ್ನು ಸಿಖ್ಖರು ಸುಸ್ಥಿತಿಯಲ್ಲಿ ಇಟ್ಟಿದ್ದಾರೆ. **ನಾನಾಕಾನಾ ಸಾಹಬ್** ಅಂತೂ ಕಂಗೊಳಿಸುತಿದೆ. ಆದರೆ **ಹಿಂದೂ ತೀರ್ಥಸ್ಥಾನಗಳು ಕಡೆಗಣಿಸಲ್ಪಟ್ಟಿವೆ. ಬಿದ್ದು ಹೋಗಿರುವ ದೇವಾಲಯಗಳನ್ನು ಕಟ್ಟಲು ಪುನಃ ಅನುಮತಿಯನ್ನು ಕೊಡುವುದಿಲ್ಲ.** ಯಾವೊಂದು ದೇವಸ್ಥಾನದ ಮೂರ್ತಿಗಳೂ ಸರಿಯಾಗಿಲ್ಲ. ಮೂರ್ತಿಗಳೆಲ್ಲಾ ಭಗ್ನವಾಗಿವೆ. ಸ್ವಲ್ಪ ಸಮಯದ ಹಿಂದೆ ವಿಶ್ವಸಂಸ್ಥೆಯು ನ್ಯಾಷನಲ್ ಹೆರಿಟೇಜ್ ಎಂದು ಮುಲ್ತಾನಿನ ನರಸಿಂಹ ದೇವಾಲಯದ ನವೀಕರಣದಲ್ಲಿ ಆಸಕ್ತಿ ತೋರಿಸಿತು. ಆದರೆ ಪಾಕಿಸ್ತಾನ ಸರಕಾರ ಇದಕ್ಕೆ ಅನುಮತಿ ಕೊಡಲಿಲ್ಲ. ಹಿಂಗುಲಾಂಬ ಮಂದಿರವೂ ಕೂಡ ನೋಡಿಕೊಳ್ಳುವವರಿಲ್ಲದೇ ಪಾಳು ಬಿದ್ದಿದೆ. ಅಟಲ್‌ಜಿ ರವರ ಸರಕಾರ ಇದ್ದಾಗ ಪಾಕಿಸ್ತಾನದೊಂದಿಗಿನ ಸಂಬಂಧಗಳ ಸುಧಾರಣೆಗೆ ಪ್ರಯತ್ನಗಳು ನಡೆದವು. ಫಲವಾಗಿ ಪಾಕ್‌ನ ಜನರಿಗೆ ಭಾರತದಲ್ಲಿ ಸುತ್ತಾಡಲು ಅನುಮತಿ ಸಿಕ್ಕಿತು. ಭಾರತವು ಪ್ರವಾಸಿಗರಿಗೆ ವೀಸಾ ಕೊಟ್ಟಿತು. **ಲಾಹೋರ್, ಕರಾಚಿ, ಸಿಂಧ್, ಹೈದರಾಬಾದ್ ಗಳಿಗೆ ಹೋಗಲು ಭಾರತೀಯರಿಗೆ ಅನುಮತಿ ಸಿಕ್ಕಿತು.** ರಾವಲ್ಪಿಂಡಿ ಸೈನ್ಯದ ಕೇಂದ್ರ, ಆದುದರಿಂದ ಅಲ್ಲಿಗೆ ಹೋಗಲು ಅನುಮತಿ ಸಿಗಲಿಲ್ಲ. **ಭಾರತ–ಪಾಕ್ ಸಂಬಂಧ ಸುಧಾರಿಸಿದ ನಂತರ, ಪಾಕ್ ಭಾರತೀಯರಿಗೆ ವೀಸಾ ಕೊಡುತ್ತಿದೆ.** ಆದರೆ ತೀರ್ಥಕ್ಷೇತ್ರಗಳ ಸಂಬಂಧದಲ್ಲಿ **ಅವರ ನೀತಿ ಬದಲಾಗಿಲ್ಲ, ಪಾಕಿಸ್ತಾನದ ಒಳಭಾಗಗಳಿಗೆ ಈಗಲೂ ಭಾರತೀಯರು ಹೋಗುವುದು ಸಾಧ್ಯವಿಲ್ಲ.** ಈ ಹಿಂಗುಲಾಂಬ ಕ್ಷೇತ್ರವೂ ಕೂಡಾ ಇದೇ ನೀತಿಗೆ ಒಳಗಾಗಿದೆ. ಗುಜರಾತಿನ ಜನ ಹಿಂಗಲಾಂಬಕ್ಕೆ ದೊಡ್ಡ ಪ್ರಮಾಣದಲ್ಲಿ ಹೋಗುತ್ತಾರೆ. ವಿಭಜನೆಯ ಮೊದಲು ಹಿಂಗುಲಾಂಬ ಯಾತ್ರೆಯನ್ನು ಕಚ್ಛ್‌ನ ಜನ ಕಾಲ್ನಡಿಗೆಯಲ್ಲಿ ಮಾಡುತ್ತಿದ್ದರು. ಕಚ್ಛ್‌ನಿಂದ ಹಿಂಗುಲಾಂಬಕ್ಕೆ ಹೋಗಲು ೧೫ ದಿನಗಳು ಬೇಕಾಗುತ್ತಿದ್ದವು.

ಹಿಂಗುಲಾಂಬ ಶಕ್ತಿ ಪೀಠ ಬಲೂಚಿಸ್ತಾನ ಪ್ರಾಂತ್ಯದ **ಲಾಶ್ ಬೆಸಾ ಜಿಲ್ಲೆಯ ಲ್ಯಾರಾ ತಾಲ್ಲೂಕಿನಲ್ಲಿದೆ.** ಕರಾಚಿಯಿಂದ ಇಲ್ಲಿಗೆ ೨೫೦ ಕಿಲೋ ಮೀಟರ್ ದೂರ ಇದೆ. ಈ ಕ್ಷೇತ್ರದ ಬಗ್ಗೆ

ಏನೂ ಗೊತ್ತಿಲ್ಲ. ಬಲೂಚಿಸ್ಥಾನದ ಹಳೆಯ ಗೆಜೆಟ್‌ನಲ್ಲಿ ಈ ಕ್ಷೇತ್ರದ ವರ್ಣನೆ ಇದೆ. ಆಗ ಇಲ್ಲಿಗೆ **ಹೋಗಲು** ಒಂಟೆ ಮಾತ್ರ ಸಾಧನ. ಇದು ಮರುಭೂಮಿಯಲ್ಲಿನ ಕ್ಷೇತ್ರ. ಈಗಲೂ **"ಲಾಶ್ ಬೆಸಾ"** ಜಿಲ್ಲಾ ಕೇಂದ್ರದಿಂದ **"ಹಿಂಗುಲಾಂಬ"** ದವರೆಗೆ ಒಂಟೆಯೇ ಪ್ರಯಾಣಕ್ಕೆ ಸಾಧನ. ಮಾರ್ಗ ತುಂಬಾ ಕಷ್ಟ ಆದುದರಿಂದ ಇಲ್ಲಿಗೆ **ಹೋಗುವ** ಯಾತ್ರಿಕರು ಕಡಿಮೆ. ಮಾರ್ಗದಲ್ಲಿ ತುಂಬಾ ಮಂಗಗಳಿವೆ. ಭಕ್ತರು ಈ ಮಂಗಗಳನ್ನು ಹೊಡೆಯುವುದಿಲ್ಲ. ತಮ್ಮಲ್ಲಿರುವ ತಿಂಡಿಯನ್ನು ಅವರು ಮಂಗಗಳಿಗೆ ತಿನ್ನಿಸಿ ಪುಣ್ಯ ಕಟ್ಟಿಕೊಳ್ಳುತ್ತಾರೆ. **ಈ ಮಂಗಗಳು ಹಿಂಗುಲಾಂಬಾಮಾತೆಯ ಮಂದಿರದ ರಕ್ಷಕರು** ಎಂದು ಓರ್ವ ಒಂಟೆಯ ಮಾಲಿಕ ಹೇಳಿದ. **ದೇವಸ್ಥಾನಕ್ಕೆ ಹಾನಿ ಮಾಡಲು ಯಾರಾದರೂ ಇಲ್ಲಿಗೆ ಬಂದರೆ ಮಂಗಗಳು ಆತನಿಗೆ ಚೆನ್ನಾಗಿ ಹೊಡೆಯುತ್ತವೆ.** ಹಿಂಗುಲಾಂಬದೇವಿಯನ್ನು ನಾನಿಹಜ್ ಮಾತ್ರವಲ್ಲದೆ, **ನಾಜಾ, ಬೀಲಿ, ಭೈರವಿ** ಮತ್ತು **ಕೋಟರಿ** ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಕೊಟ್ಟರೀಯಾ ಎಂಬುದು ಈಕೆಯ ಅತ್ಯಂತ ಜನಪ್ರಿಯವಾದ ಹೆಸರು.

ಕಚ್ಛ್‌ನಿಂದ ಹಿಂಗುಲಾಬದವರೆಗೆ ೧೩ ವಿಶ್ರಾಂತಿ ಸ್ಥಳಗಳಿವೆ. ಇಲ್ಲಿ ಯಾತ್ರಿಕರು ನಿಂತು ತಮ್ಮ ಪ್ರಯಾಣದ ಆಯಾಸವನ್ನು ದೂರ ಮಾಡಿಕೊಳ್ಳುತ್ತಾರೆ. ಹಿಂದೆ ಹಿಂಗಲಾಜನಲ್ಲಿ ದಟ್ಟವಾದ ಮರಗಳಿದ್ದುವಂತೆ. ಈಗ ಮರಗಳು ವಿರಳವಾಗಿವೆ. ಎರಡು ಆಲದ ಮರಗಳು, ಎಂಟು ಅಶ್ವತ್ಥಮರಗಳು ಮತ್ತು ಹಲವು ಬೇವಿನ ಮರಗಳಿವೆ. ಈಗ ಅವು ಚಿಕ್ಕದಾಗುತ್ತಾ ಹೋಗುತ್ತಿವೆ. ಹೊಸ ವೃಕ್ಷಗಳನ್ನು ಈಗ ನೆಡದಿದ್ದರೆ. ಮುಂದೆ ಯಾತ್ರಿಕರಿಗೆ ತುಂಬಾ ತೊಂದರೆಯಾಗಬಹುದು. ಈ ಮಾರ್ಗದಲ್ಲಿ **ಸಣ್ಣ ಪುಟ್ಟ ೨೪ ತೀರ್ಥಸ್ಥಾನಗಳು ಸಿಗುತ್ತವೆ.** ಇವುಗಳಲ್ಲಿ ಪೂಜೆ ನಡೆಯುತ್ತಿಲ್ಲ. ಯಾತ್ರಿಕರು ಅಲ್ಲಿಗೆ ಹೋಗುವುದು ತುಂಬಾ ಅಪರೂಪ. **"ಠಠ್ಠಾ"** ಎಂಬುದು ಇಲ್ಲಿನ ಒಂದು ನಗರ. ಇಲ್ಲಿಂದ ಹಿಂಗಲಾಂಬಕ್ಕೆ ೧೫೦ ಮೈಲು ದೂರ ಇದೆ. ಇಲ್ಲಿ ಒಂದು ಠಮ್ರಾ ಎಂಬ ಬೆಟ್ಟ ಇದೆ. ಇಲ್ಲಿಯ ಭಾಷೆಯಲ್ಲಿ ಕಲ್ಲನ್ನು ಠುಮ್ರಾ ಎನ್ನುತ್ತಾರೆ. **ಈ ಬೆಟ್ಟದ ಕಲ್ಲುಗಳನ್ನು ನೀರಿಗೆ ಹಾಕಿ ಕುದಿಸಿದಾಗ ಕಲ್ಲು ಮೆತ್ತಗಾಗುತ್ತದೆ.** ಎಂದು ಠಠ್ಠಾದ ಜನರು ಹೇಳುತ್ತಾರೆ. ಹೀಗೆ ಆಗುವುದಕ್ಕೆ ಕಾರಣ ಇಂದಿನವರೆಗೂ ಯಾರಿಗೂ ಗೊತ್ತಿಲ್ಲ. ಮೆತ್ತಗಾದ ಕಲ್ಲುಗಳನ್ನು ಚೂರು ಚೂರು ಮಾಡಲಾಗುತ್ತದೆ. ಅವುಗಳನ್ನು ಪೋಣಿಸಿ ಮಾಲೆ ಮಾಡುತ್ತಾರೆ. ಹಿಂಗಲಾದೇವಿಯ ಭಕ್ತರು ಈ ಮಾಲೆಗಳನ್ನು ಧರಿಸುತ್ತಾರೆ. ಇದನ್ನು ಠುಮ್ರಾ ಮಾತೆಯ ಪ್ರಸಾದ ಎನ್ನುತ್ತಾರೆ. ಇದರ ಬಗ್ಗೆ ಹಲವು ವದಂತಿಗಳಿವೆ.

ಹಿಂಗುಲಾಂಬ ಶಕ್ತಿ ಪೀಠ ಮರುಭೂಮಿಯಲ್ಲಿದೆ. **ಇದರ ಪೂರ್ವದಲ್ಲಿ ಸಿಂಧ್ ಇದೆ. ಪಶ್ಚಿಮದಲ್ಲಿ ಕಲಾತ್ ಬೆಟ್ಟಗಳಿವೆ. ದಕ್ಷಿಣದಲ್ಲಿ ಅರಬ್ಬೀ ಸಮುದ್ರ ಇದೆ. ಹೋಕಾರ್ ಪರ್ವತ ಶ್ರೇಣಿಗಳೂ ಇವೆ. ಅಘೋರ ನದಿ ದೇವಸ್ಥಾನಕ್ಕೆ** ಸಮೀಪದಲ್ಲಿ ಹರಿಯುತ್ತದೆ. ಹಿಂದೆ ಇಲ್ಲಿ ಅಘೋರಿಗಳು ಮಂತ್ರ ತಂತ್ರ ಮಾಡುತ್ತಿದ್ದರಂತೆ. ಈಗ ತಾಂತ್ರಿಕರ ದೇವತೆ ಕಾಮಾಖ್ಯಾ, **ಹಿಂದೆ ಹಿಂಗಲಾದೇವಿಯನ್ನು ತಾಂತ್ರಿಕರೂ ನಂಬುತ್ತಿದ್ದರಂತೆ.** ಈಗ ಹಿಂಗುಲಾಂಬದಲ್ಲಿ ಮೌನಕವಿದಿದೆ. ಆದರೆ ಒಂದು ಕಾಲದಲ್ಲಿ ಇದು ತಂತ್ರ

ವಿದ್ಯೆಯ ಕೇಂದ್ರವಾಗಿರಬಹುದೆಂದು ಹೇಳಬಹುದು. ಹಿಂಗಲಾಜ ಯಾತ್ರೆ ಅತ್ಯಂತ ರೋಮಾಂಚಕಾರಿಯಾಗಿದೆ. ಪುರಾಣಗಳಲ್ಲಿ ಹಿಂಗುಲಾಂಬದ ವರ್ಣನೆ ಸಾಕಷ್ಟು ಇದೆ. ಈಗ ಇದು ಪಾಕಿಸ್ತಾನದಲ್ಲಿ ಇರುವುದರಿಂದ ಭಾರತೀಯ ಸಂಸ್ಕೃತಿಗೆ ಸಂಬಂಧಪಟ್ಟ ಈ ಕ್ಷೇತ್ರದ ಪರಿಚಯ ಬಹುಸಂಖ್ಯೆಯ ಭಾರತೀಯರಿಗೆ ಇಲ್ಲ. ಪಾಕಿಸ್ತಾನದಲ್ಲಿ ಈಗಲೂ ಅನೇಕ ಆದಿವಾಸಿಗಳು ಇಸ್ಲಾಮನ್ನು ಅನುಸರಿಸುವುದಿಲ್ಲ. ಈ ಆದಿವಾಸಿಗಳನ್ನು ಭೇಟಿಯಾಗುವುದೇ ಒಂದು ಅಪೂರ್ವವಾದ ಅನುಭವ. ಹಿಂಗಲಾಜನ ಯಾತ್ರೆಯನ್ನಂತೂ ಮರೆಯುವಂತೆಯೇ ಇಲ್ಲ. **"ಭಾರತ ಮಾತಾ ಕಿ ಲಾಜ್ – ಮೇರಾ ಹಿಂಗಲಾಜ್ – ಮೇರಾ ಹಿಂಗಲಾಜ್"** ಎಂದು ದೇವಸ್ಥಾನದ ಒಳ ಗೋಡೆಗಳ ಮೇಲೆ **ಯಾರೋ ಸಿಂಧಿ ಭಾಷೆಯಲ್ಲಿ ಬರೆದಿದ್ದಾರೆ**. ಈಗ ಪಾಕಿಸ್ತಾನದ ಸರಕಾರ ಮೊದಲ ಬಾರಿಗೆ ಹಿಂಗುಲಾಂಬ ಯಾತ್ರೆಗೆ ವೀಸಾ ಕೊಡುತ್ತಿದೆ. **ಕಚ್ಛ್ ಭುಜ್** ಗಳಿಂದ ಮೊದಲ ತಂಡ ಈ ಯಾತ್ರೆಗೆ ಹೊರಟಿದೆ. ಜನ ರಾಜಸ್ಥಾನದ ಖೋಕರಾಪಾರಾವನ್ನು ದಾಟಿ, ಪಾಕಿಸ್ತಾನದ ಗಡಿ ದಾಟಿ ಕರಾಚಿ ಮತ್ತು ಸಿಂಧ್ ಹೈದರಾಬಾದ್ ನ ಮಾರ್ಗವಾಗಿ ಹಿಂಗಲಾಜಗ ಹೋಗುತ್ತಾರೆ. ಎಲ್ಲವೂ ವ್ಯವಸ್ಥಿತವಾಗಿ ನಡೆದರೆ ಈ ಸಲ ೨೫೦ ಭಾರತೀಯರು ಹಿಂಗುಲಾಂಬ ದೇವಿಯ ದರ್ಶನ ಮಾಡುವವರಿದ್ದಾರೆ.*

**ಭಕ್ತ ಪುಂಡಲೀಕನ ಪೂರ್ವ ಚರಿತ್ರೆ**

ಭಕ್ತ ಪುಂಡಲೀಕನ ಪೂರ್ವಚರಿತ್ರೆಯಲ್ಲಿ ಸ್ತ್ರೀಲೋಲುಪನೆಂದು ಪ್ರತೀತಿ ಇದ್ದು, ತನ್ನ ವಯಸ್ಸಾದ ದೃಷ್ಟಿ ಮಂದವಾದ ತಂದೆತಾಯಿಯವರ ಅಭಿಲಾಷೆಯಂತೆ ಕಾಶೀಯಾತ್ರೆಗೆ ಹೊರಡಲು, ತನ್ನ ಪತ್ನಿಯ ಕಿರುಕುಳದಿಂದ ಹೆಂಡತಿಯನ್ನು ತನ್ನ ಹೆಗಲಮೇಲೆ ಕೂರಿಸಿಕೊಂಡು, ವೃದ್ಧ ಅಂಧ ತಂದೆತಾಯಿಯರ ಕೊರಳಿಗೆ ಹಗ್ಗವನ್ನು ಕಟ್ಟಿ ನಡಿಗೆಯಲ್ಲಿ ಕಾಶಿಗೆ ಪ್ರಯಾಣ ಬೆಳೆಸಿದರು.

ಕಾಶಿಯ ಸಮೀಪ ಹೋದಾಗ ಕತ್ತಲಾವರಿಸುತ್ತಿದ್ದಂತೆ ಒಂದು ಕುಟೀರವು ಕಾಣಿಸಿತು. ಅದರ ಹತ್ತಿರ ಎಲ್ಲರೂ ಮಲಗಿದರು. ಬೆಳಗಿನ ನಸುಕಿನಲ್ಲಿ ಪುಂಡಲೀಕನಿಗೆ ಎಚ್ಚರವಾಗಿ ನೋಡಲು ೩ ಜನ ಕುರೂಪಿ ಹೆಂಗಸರು ಆ ಕುಟೀರದ ಮುಂದೆ ಸಾರಿಸಿ ರಂಗವಲ್ಲಿ ಬಿಡಿಸಿ ಕುಟೀರದಲ್ಲಿನ ಮಹಾತ್ಮನನ್ನು ನಮಸ್ಕರಿಸಿದರು. ಆ ಮಹಾತ್ಮನ ಹೆಸರು ಕುಕ್ಕಟಮುನಿ. ನಮಸ್ಕರಿಸಿದಾಗ ಆ ಹೆಂಗಸರ ಕುರೂಪವು ದೂರವಾಗಿ ಅತಿ ಸುಂದರ ರೂಪವು ಪ್ರಾಪ್ತವಾಯಿತು. ಇದನ್ನು ಕಂಡ ಪುಂಡಲೀಕನು ಆ ಹೆಂಗಸರ ಬಳಿ ಹೋಗಿ "ಏನಿದಾಶ್ಚರ್ಯ, ನೀವು ಬರುವಾಗ ಅತಿ ಕುರೂಪಿಗಳಾಗಿದ್ದಿರಿ, ಈಗ ಅತಿ ಸುಂದರವಾಗಿ ಕಂಗೊಳಿಸುತ್ತಿದ್ದೀರಿ. ಏನಿದಾಶ್ಚರ್ಯ" ಎನ್ನಲು, ಆ ಹೆಂಗಸರು ಹೀಗೆಂದು ಹೇಳಿದರು. "ನಾವು ಮೂರು ಜನರಾರೆಂದರೆ, ಗಂಗಾ, ಯಮುನಾ ಮತ್ತು ಸರಸ್ವತಿ ನದಿಗಳು, ನಿನ್ನಂತಹ ಪಾಪಿಷ್ಟರು ನಮ್ಮಲ್ಲಿ ಸ್ನಾನ ಮಾಡುವರು, ಆಗ ನಿನ್ನಂತಹವರ ಪಾಪವು ತಗುಲಿ ನಾವು ಕುರೂಪಿಗಳಾಗುತ್ತೇವೆ.

*ಪ್ರಕಟಣೆ. ಶ್ರೀ ಎಂ.ಎಸ್. ನಾಮದೇವ್ ದೋಯಿಜೋಡೆ.

ಈ ಮುನಿಗಳ (ಕುಕ್ಕಟ ಮುನಿಗಳ) ಸೇವೆ ಮಾಡಿ ಅವರಿಗೆ ನಮಸ್ಕರಿಸಲು ನಮ್ಮ ರೂಪವು ಮರಳಿಬರುವುದು" ಎಂದು ತಿಳಿಸಿ ಹೊರಟು ಹೋದರು.

ಪುಂಡಲೀಕನು ಆಶ್ಚರ್ಯದಿಂದ ಕುಕ್ಕುಟ ಮುನಿಯವರ ಬಳಿ ಬಂದು ಕೇಳುವನು. "ತಾವು ಮಹಾತ್ಮರು ತಮ್ಮ ಸಾಧನಾ ಮಾರ್ಗವೇನು" ಎಂದು ಕೇಳಲು, ಕುಕ್ಕುಟಮುನಿಗಳು ಕುಟೀರದೊಳಗೆ ಮಲಗಿರುವ ತುಂಬಾ ವಯಸ್ಸಾಗಿರುವ ತಮ್ಮ ದೇವಸ್ವರೂಪಿ ತಂದೆ ತಾಯಿಯವರನ್ನು ತೋರಿಸಿ "ಇವರ ಸೇವೆಯನ್ನು ಮಾತ್ರ ಮಾಡುತ್ತಿದ್ದೇನೆ, ಇದರ ಹೊರತು ನನಗೇನೂ ತಿಳಿದಿಲ್ಲ, ನೀನೂ ಸಹ ನಿನ್ನ ತಂದೆ ತಾಯಿಯವರ ಸೇವೆಯನ್ನು ನಿಷ್ಠೆಯಿಂದಮಾಡು" ಎನ್ನಲು ಪುಂಡಲೀಕನ ಮನಸ್ಸಿನ ಪರಿವರ್ತನೆಯಾಯಿತು.

ನಂತರ ಪುಂಡಲೀಕನು ತನ್ನ ತಂದೆತಾಯಿಯವರನ್ನು ಪುಟ್ಟಿಯಲ್ಲಿ ಕೂರಿಸಿ, ಅಡ್ಡೆಯನ್ನು ಹೊತ್ತುಕೊಂಡು, ಹೆಂಡತಿಯನ್ನು ನಡೆಯಿಸಿಕೊಂಡು ಕಾಶಿದರ್ಶನ ಮಾಡಿ ವಾಪಸ್ಸು ಮಹಾರಾಷ್ಟ್ರದ 'ದಿಂಡಿರವನ' ಕ್ಕೆ ಹೋಗಿ ಭೀಮಾನದಿಯ ತಟದಲ್ಲಿ ತಂದೆ ತಾಯಿಯವರ ಸೇವೆಯಲ್ಲಿ ನಿರತನಾಗುವನು. 'ದಿಂಡಿರವನ' ವೇ ಇಂದಿನ ಪಂಢರ ಪುರ. ಸತತವಾಗಿ ನಿಷ್ಠೆಯಿಂದ ಮಾತಾ ಪಿತೃರ ಸೇವೆಯಲ್ಲಿ ಪುಂಡಲೀಕನು ನಿರತನಾಗಿರುವುದನ್ನು ಕಂಡು ವೈಕುಠದಿಂದ ಶ್ರೀಹರಿಯು ಬಂದು "ಪುಂಡಲೀಕ, ನಿನ್ನ ಮಾತಾ ಪಿತೃರ ಸೇವೆಯು ಅಮೂಲ್ಯವಾದದ್ದು, ಇದರಿಂದ ನಾನು ತುಂಬಾ ಪ್ರಸನ್ನನಾಗಿರುವೆನು" ಎಂದು ಕರೆಯಲು, ಪುಂಡಲೀಕನು ಹೇಳಿದನು "ದಯವಿಟ್ಟು ಸದ್ದು ಮಾಡಬೇಡಿ, ತಂದೆತಾಯಿಯರ ಸೇವೆಯಿಂದ ನಾನೀಗ ಬರಲಾಗದು. ನಾನು ಬರುವವರೆಗೆ ಈ ಇಟ್ಟಿಗೆಯ ಮೇಲೆ ನಿಲ್ಲಿ" ಎಂದು ಹೇಳಿ ಅಲ್ಲಿದ್ದ ಒಂದು ಇಟ್ಟಿಗೆಯನ್ನು ಎಸೆಯಲು ಶ್ರೀಹರಿಯು ಸೊಂಟದ ಮೇಲೆ ಕೈಗಳನ್ನಿಟ್ಟು, ಆ ಇಟ್ಟಿಗೆಯ ಮೇಲೆ ನಿಂತನು. ಶ್ರೀಹರಿಯು ಇಟ್ಟಿಗೆಯ ಮೇಲೆ ನಿಂತದ್ದಕ್ಕಾಗಿ ಅವನ ಹೆಸರು ವಿಠೋಬ ಎಂದಾಯಿತು. 'ವಿಟ' ಎಂದರೆ ಇಟ್ಟಿಗೆ 'ಉಭಾ' ಎಂದರೆ ನಿಂತವನು. 'ವಿಠೋಬ'ನನ್ನು 'ವಿಠ್ಠಲ' ಎನ್ನುವರು. 'ವಿ' ಎಂದರೆ ವಿಧಾತ, ಬ್ರಹ್ಮ, 'ಠ' ಎಂದರೆ ನೀಲಕಂಠ, 'ಲ' ಎಂದರೆ ಲಕ್ಷ್ಮೀಪತಿ (ಬ್ರಹ್ಮ, ವಿಷ್ಣು, ಮಹೇಶ್ವರರ ಸ್ವರೂಪವೇ ವಿಠಲನು).

ಸಂತತುಕಾರಾಮರ ಅಭಂಗದಲ್ಲಿ ಈ ರೀತಿ ವರ್ಣಿಸಿದ್ದಾರೆ. "ಗೀತಾ ಜೇಣೆ ಉಪದೇಶಿಲೆ । ತೇಹೀ ವಿಟೇವರಿಮಾವುಲಿ" ॥ (ಅಂದರೆ ಯಾರು ಗೀತೆಯ ಉಪದೇಶವನ್ನು ಅರ್ಜುನನಿಗೆ ಮಾಡಿರುವರೋ ಅವರೇ ವಿಠಲನು)

### "ವಿಠ್ಠಲನು ನಾದಬ್ರಹ್ಮನು"

ಈ ವಿಠ್ಠಲನನ್ನೇ ಬಾಹುಸಾರ ಕ್ಷತ್ರಿಯ ಸಮುದಾಯದವರು ಆರಾಧ್ಯ ದೈವವನ್ನಾಗಿ ಆರಾಧಿಸಿದರು ಎಂದು ಶಿವಮೊಗ್ಗ ವಾಸಿ ಹನುಮಂತರಾವ್ ರಂಗಧೋಳ್ ನುಡಿದಿದ್ದಾರೆ. ಪ್ರತಿನಿತ್ಯವೂ ಆರಾಧನೆ ಮಾಡಿ ವಿಠ್ಠಲನನ್ನು ಸಾಕ್ಷಾತ್ಕರಿಸಿಕೊಂಡವರಿಗೆ ಮರಾಠಿ ಭಾಷೆಯಲ್ಲಿ ಸಂತರೆನ್ನುತ್ತಾರೆ.

| | ಸಂತರು | ಆಂಕಿತನಾಮ |
|---|---|---|
| (ಬ್ರಾಹ್ಮಣ) | ಸಂತ ಜ್ಞಾನೇಶ್ವರ | ಜ್ಞಾನದೇವ ಮ್ಹಣೆ<br>ಬಾಪ್ ರಖುಮಾದೇವಿಯವರು |
| (ಬಾಹುಸಾರ ಕ್ಷತ್ರಿಯ) | ಸಂತ ನಾಮದೇವ | ನಾಮಾ ಮ್ಹಣೆ<br>ವಿಷ್ಣುದಾಸ ನಾಮ |
| (ಹರಿಜನ) | ಸಂತ ಚೌಕಾಮೇಳ | ಚೌಕಾ ಮ್ಹಣೆ |
| (ಬ್ರಾಹ್ಮಣ) | ಸಂತ ಮುಕ್ತಾಬಾಯಿ | ಮುಕ್ತಾ ಮ್ಹಣೆ |
| (ಅಕ್ಕಸಾಲಿಗ) | ಸಂತ ನರಹರಿಸೊನಾರ್ | ನರಹರಿಸೋನಾರ್ |
| (ರೈತಾಪಿ) | ಸಂತ ಸಾವತಾ ಮಾಳಿ | ಸಾವತಾ ಮ್ಹಣೆ |
| (ಬ್ರಾಹ್ಮಣ) | ಸಂತ ಜನಾರ್ಧನ | ಮ್ಹಣೆ ಜನಾರ್ಧನ್ |
| | ಸಂತ ಏಕನಾಥ್ | ಏಕಾ ಜನಾರ್ಧನಿ |
| | ಸಂತ ತುಕಾರಾಂ | ತುಕಾ ಮ್ಹಣೆ |
| | ಸಂತ ನೀಳೋಬರಾಯ | ನೀಳಾಮ್ಹಣೆ |
| | ಸಂತ ಬಹಿಣಾಬಾಯಿ | ಮ್ಹಣೆ ಬಹಿಣಾ |
| | ಸಂತ ಸೇನಾ ಮಹಾರಾಜ್ | ಸೇನಾ ಮ್ಹಣೆ<br>(ವೃತ್ತಿಯಿಂದ ಕ್ಷೌರಿಕರು) |

ಹೀಗೆ ಪ್ರತಿಯೊಂದು ಜನಾಂಗದಲ್ಲಿ ಸಂತರು ಅವತರಿಸಿ, ತಮ್ಮ ಕಾಯಕ ವೃತ್ತಿಯಲ್ಲೇ ವಿಠ್ಠಲನನ್ನು ಸಾಕ್ಷಾತ್ಕರಿಸಿಕೊಂಡ ಸಂತರಿವರು.

೧೨ ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಬಸವಣ್ಣ ಮತ್ತು ಶಿವಶರಣರು ಅವತರಿಸಿದರು. ಅಂತೆಯೇ ಮಹಾರಾಷ್ಟ್ರದಲ್ಲಿ ವಾರಕರೀ ಪಂಥ (ಮರಾಠಿ ಭಕ್ತಿ ಪಂಥ) ಉದಯವಾಯಿತು. ಈ ಪಂಥದ ಮೂಲಕರ್ತೃ ಸಂತ ಜ್ಞಾನೇಶ್ವರರು ಹಾಗೂ ನಾಮದೇವರು. ಇವರಿಂದಲೇ ಈ ವಾರಕರೀ ಪಂಥ ಬೆಳೆದು ನಾಡಿನಾದ್ಯಂತ ಪ್ರಸಿದ್ಧವಾಯಿತು.

**ವಾರಕರೀ ಪಂಥ :**

ವಾರಕರೀ ಎಂದರೆ ವಿಠಲನ ಸೇವೆಗಾಗಿ ಪಂಢರ ಪುರಕ್ಕೆ ಆಷಾಢ, ಕಾರ್ತೀಕ ಶುದ್ಧ ಏಕಾದಶಿಯ ವಾರಿಗಾಗಿ ಹೋಗಿಬರಲು ಗುರುಗಳಿಂದ ದೀಕ್ಷೆ ಪಡೆದ ಭಕ್ತರಿಗೆ ವಾರಕರಿ ಎನ್ನುವರು. ವಾರಕರಿಯ ಅರ್ಥ ಹೀಗಿದೆ. 'ವಾರಿ' ಎಂದರೆ ಬರುವುದು ಹೋಗುವುದು 'ಕರಿ' ಎಂದರೆ

ಮಾಡುವವರು. ಎಂದರೆ ವಾರ ನಿಯಮಗಳನ್ನಾಚರಿಸುವವರು ಎಂದು ಶಿವಮೊಗ್ಗ ಬಾಹುಸಾರ ಕ್ಷತ್ರಿಯ ಸಮುದಾಯದ ಹಿರಿಯ ವ್ಯಕ್ತಿಗಳಾದ ಹನುಮಂತರಾವ್ ರಂಗಧೋಳ್ ನುಡಿದಿದ್ದಾರೆ.

## ೩.೨ ಭೌಗೋಳಿಕ ಪರಿಸರ

ಯಾವುದೇ ಸಮುದಾಯವು ಕೇವಲ ವೃತ್ತಿ ಅಥವಾ ಭೌಗೋಳಿಕ ಪರಿಸ್ಥಿತಿಯನ್ನು ಅನುಸರಿಸಿಯಷ್ಟೇ ಬೆಳೆಯುವುದಿಲ್ಲ ಮತ್ತು ವೈವಿಧ್ಯಗೊಳ್ಳುವುದಿಲ್ಲ, ಅದರ ನಡುವೆ ವಿವಿಧ ಸಮುದಾಯಗಳ ಸಂಬಂಧವೂ ಮುಖ್ಯವಾಗಿರುತ್ತದೆ. ಕಾರಣ ಇವೆಲ್ಲ ಪರಸ್ಪರ ಅಂತರ್ ಸಂಬಂಧಿಗಳು.

ಕರ್ನಾಟಕದ ಇತರೆ ಕಡೆಗಳಲ್ಲಿ ಇರುವಂತೆ ಶಿವಮೊಗ್ಗ ಜಿಲ್ಲೆಯಲ್ಲಿಯೂ ಹಲವು ಮತಪಂಥಗಳು ವಿವಿಧ ವರ್ಗಗಳ ಜನರು ವಾಸವಾಗಿದ್ದಾರೆ. ಭಾರತೀಯ ಸಂದರ್ಭದಲ್ಲಿಯಂತೂ ಸಮುದಾಯವು ಬಲಿಷ್ಟವಾದ ಒಂದು ಸಾಮಾಜಿಕ ಗುಣವಾಗಿದ್ದು, ಸಾಂಸ್ಕೃತಿಕವಾಗಿ ಹಲವು ಅಂಶಗಳನ್ನು ನಿಯಂತ್ರಿಸುವ, ನಿರ್ಮಿಸುವ ವಿಶೇಷತೆಯನ್ನು ಸಮುದಾಯವು ಹೊಂದಿರುತ್ತದೆ. ಅಲ್ಲದೇ ಯಾವುದೇ ಸಮುದಾಯದ ಬಗೆಗೆ ಆಯಾಸಮುದಾಯಗಳಲ್ಲಿರುವ ನಂಬಿಕೆ, ಐತಿಹ್ಯ, ಪುರಾಣಗಳು ಈ ಕುರಿತ ಅಧ್ಯಯನಕ್ಕೆ ಪೂರಕವಾದ ಅಂಶಗಳೇ ಅಗಿರುತ್ತದೆ.

ಶಿವಮೊಗ್ಗ ಜಿಲ್ಲೆಯಲ್ಲಿ ವೀರಶೈವರು, ಜೈನರು, ಬ್ರಾಹ್ಮಣರು, ಮರಾಠರೂ, ಕುರುಬರು, ಒಡ್ಡರು, ಬೇಡರು, ಮುಸ್ಲೀಮರು, ಸಮಗಾರರು, ಅಕ್ಕಸಾಲಿಗರು, (ಪತ್ತಾರರು) ಅಥವಾ ಪೋತದಾರರು, ಜೆಸ್ತರು ಎಂದು ಎರಡು ಪಂಗಡಗಳಿವೆ.

ನನ್ನ ಪ್ರಬಂಧದ ಪ್ರಮುಖ ಸಮುದಾಯವು ಅಂದರೆ ಬಾಹುಸಾರ ಕ್ಷತ್ರಿಯ ಸಮುದಾಯವು ಶಿವಮೊಗ್ಗ ಜಿಲ್ಲೆಯ ಭದ್ರಾವತಿ, ಸಾಗರ, ಸೊರಬ, ಶಿಕಾರಿಪುರ, ಹೊಸನಗರ ಮುಂತಾದ ೧೮-೨೦ ಹಳ್ಳಿಗಳಲ್ಲಿ ವಾಸವಾಗಿದ್ದಾರೆ. ಇವರ ಆರಾಧ್ಯ ದೈವ ತುಳಜಾ ಭವಾನಿ, ವಿಠಲ ರುಖುಮಾಯಿಯಾಗಿದ್ದು ಈ ಪರಿಸರದಲ್ಲಿ ಹೆಚ್ಚು ಭಕ್ತಾದಿಗಳನ್ನು ಪಡೆದಿದ್ದು ವಿಶೇಷವಾದ ನಡವಳಿಕೆಯನ್ನು ಹೊಂದಿದ ದೈವವಾಗಿದ್ದಾರೆ.

ಕುರುಬರು ಕುರಿಸಾಕುವುದು, ಕಂಬಳಿ ನೇಯುವುದು ಮೊದಲಾದ ಕೆಲಸವನ್ನು ಮಾಡುತ್ತಿದ್ದಾರೆ. ಜೊತೆಗೆ ಬೇಸಾಯ ವೃತ್ತಿಯನ್ನು ಕೈಕೊಂಡಿದ್ದಾರೆ. ಇತ್ತೀಚೆಗೆ ಕೆಲವರು ಶಿಕ್ಷಣವನ್ನು ಪಡೆದು ಸರ್ಕಾರಿ ಉದ್ಯೋಗವನ್ನು ಹಿಡಿದು ಜೀವನ ಮಾಡುತ್ತಾರೆ.

ಕಮ್ಮಾರರು, ಬಡಿಗೇರು, ಕುಂಬಾರರು, ತಮ್ಮ ತಮ್ಮ ಉದ್ಯೋಗದಲ್ಲಿ ಮುಂದುವರಿಸಿಕೊಂಡು ಬಂದಿದ್ದು, ತಮ್ಮ ಕುಟುಂಬಗಳಲ್ಲಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದಾರೆ. ತಮ್ಮ ಕುಲ ಕಸುಬುಗಳಿಂದಲೇ ಜೀವನವನ್ನು ನಡೆಸುತ್ತಿದ್ದಾರೆ. ವೈಜ್ಞಾನಿಕವಾಗಿ ಮುಂದುವರಿದ ಈ ಸಂದರ್ಭದಲ್ಲಿ

ನಗರೀಕರಣದ ಪ್ರಭಾವದಿಂದಾಗಿ ಇವರು ಇಂದು ತತ್ತರಗೊಂಡಿದ್ದಾರೆ. (ಹಾಗೆಯೇ ಪೈಪೋಟಿ ಜೀವನವನ್ನು ನಡೆಸುತ್ತಿದ್ದಾರೆ) ಇಂದು ಜನತೆ ಅಡುಗೆ ಮಾಡುವುದಕ್ಕಾಗಿ ಸ್ಟೀಲ್, ತಾಮ್ರ, ಅಲ್ಯುಮಿನಿಯಂ ಸಾಮಾನುಗಳಿಗೆ ಮಾರು ಹೋಗಿರುವುದರಿಂದ ಕುಂಬಾರರು ತಮ್ಮ ವೃತ್ತಿಯ ಮಹತ್ವವನ್ನು ಕಳೆದುಕೊಳ್ಳುತ್ತಿದ್ದಾರೆ.

ಅಕ್ಕಸಾಲಿಗರು ಅಥವಾ ಪತ್ತಾರರು ತಮ್ಮ ಕುಲಕಸುಬು ಆಗಿರುವ ಟಂಕಸಾಲೆಯ ವೃತ್ತಿಯಿಂದ ಸಣ್ಣಗೆ ಮುಂದುವರಿದುಕೊಂಡು ನೆಮ್ಮದಿಯ ಜೀವನವನ್ನು ಮಾಡುತ್ತಿದ್ದಾರೆ. ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಿ ಸರ್ಕಾರಿ ಕೆಲಸ ಕೊಡಿಸುವ ಸಿದ್ಧತೆಯಲ್ಲಿದ್ದಾರೆ. ಕೆಲವರು ಈಗಾಗಲೇ ಅಂತಹ ಕೆಲಸದಲ್ಲಿ ಮುಂದುವರೆದಿದ್ದಾರೆ.

ಏನೇ ಆದರೂ ನಗರೀಕರಣದ ಪ್ರಭಾವ ಹೆಚ್ಚಾಗುತ್ತಿರವ ಈ ಸಮಯದಲ್ಲಿ ಹಾಗೆಯೇ ಜನರು ನಗರ ಜೀವನದ ರೀತಿ–ನೀತಿಗಳಿಗೆ ಮಾರುಹೋಗುತ್ತಿರುವ ಸಮಯದಲ್ಲಿ ಇಂತಹ ಕುಲಕಸುಬನ್ನು ನಂಬಿಕೊಂಡಿರುವ ಜನರು ಅತಂತ್ರ ಸ್ಥಿತಿಯಲ್ಲಿದ್ದಾರೆನಿಸುತ್ತದೆ.

ಚಮ್ಮಾರರು ಚರ್ಮದಿಂದ ತಯಾರಿಸುವ ವಸ್ತುಗಳನ್ನು ತಯಾರಿಸುತ್ತಾರೆ. ಅವರು ಚಮ್ಮಾರಿಕೆಯಲ್ಲಿ ತೊಡಗಿದ್ದಾರೆ. ಇವರು ತಯಾರಿಸಿದ ವಸ್ತುಗಳಿಗೆ ದೇಶಾದ್ಯಂತ ಬೇಡಿಕೆಯಿರುತ್ತದೆ. ಹಲವಾರು ಚರ್ಮಾಲಯಗಳು ಇಲ್ಲಿ ಕಾರ್ಯನಿರ್ವಹಿಸುತ್ತಿವೆ.

**೩.೩ ವಸತಿ ವ್ಯವಸ್ಥೆ**

ಇವರ ರೀತಿ–ನೀತಿ, ವಸತಿಯನ್ನು ನೋಡಿದ ಕೂಡಲೇ ಇವರು ಬಾಹುಸಾರ ಕ್ಷತ್ರಿಯ ಸಮುದಾಯದವರು ಎನ್ನುವ ಕಾಲವೊಂದಿತ್ತು. ಆದರೆ ಇಂದು ಯಾವುದೇ ಸಮುದಾಯಕ್ಕೂ ನಾವೇನು ಕಡಿಮೆ ಎನ್ನುವಷ್ಟರ ಮಟ್ಟಿಗೆ ಸಾಮಾಜಿಕವಾಗಿ ಮುಂದೆ ಬಂದಿದ್ದಾರೆ. ತಮಗೆ ಬೇಕಾದ ರೀತಿಯಲ್ಲಿ ಹುಲ್ಲಿನಿಂದ, ಕಟ್ಟಿಗೆಯಿಂದ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದ ಇವರು ಇಂದು ಈ ಪರಿಸರದಲ್ಲಿ ಆರ್ಥಿಕವಾಗಿ ಪ್ರಬಲವಾದವರು, ಸಿಮೆಂಟು, ಇಟ್ಟಿಗೆ, ಕಬ್ಬಿಣ ಮೊದಲಾದ ವಿನೂತನ ಮಾದರಿಯ ಹಾಗೂ ವಾಸ್ತು ಶಾಸ್ತ್ರದ ಹಿನ್ನೆಲೆಯಲ್ಲಿ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಇನ್ನು ಕೆಲವರು, ಇಂದಿರಾ ಆವಾಜಯೋಜನೆ, ರಾಜೀವಗಾಂಧಿ ಆಶ್ರಯಯೋಜನೆಯಂತಹ ಸೌಲಭ್ಯವನ್ನು ಪಡೆದ ಫಲಾನುಭವಿಗಳು ಪತ್ರಾಸು (ಸಿಮೆಂಟಿನ ತಗಡು) ಪರಿಸೆ (ಕಡಪದ ಕಲ್ಲು) ಬಳಸಿದಂತಹ ಮನೆಗಳಲ್ಲಿ ವಾಸವಾಗಿದ್ದಾರೆ. ಅಲ್ಪಸ್ವಲ್ಪ ಭೂಮಿ ಇದ್ದವರು ಹೊಲಗದ್ದೆಗಳಲ್ಲಿಯೇ ಪ್ರಾಚೀನ ಪರಂಪರೆಯಂತೆ ಮನೆಯನ್ನು ಮಾಡಿಕೊಂಡು ತಮ್ಮ ಮೂಲ ನೆಲೆಯ ನೆನಪು ತಂದುಕೊಡುವ ರೀತಿಯಲ್ಲಿ ಬದುಕುತ್ತಿದ್ದಾರೆ. ಈ ಪರಿಸರದಲ್ಲಿ ಇವರು ಇಂದಿಗೂ ಬಹುತೇಕ ತೋಟಪಟ್ಟಿಯಲ್ಲಿ ಮನೆಮಾಡಿಕೊಂಡು ವಾಸಿಸುತ್ತಿದ್ದಾರೆ.

### ೩.೪ ಕುಟುಂಬ ವ್ಯವಸ್ಥೆ

ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಅವಿಭಕ್ತ ಕುಟುಂಬ ಪದ್ಧತಿಯು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿದೆ. ಇತ್ತೀಚಿನ ದಿನಮಾನದಲ್ಲಿ ಜನರು ವಿವಿಧ ವೃತ್ತಿಯನ್ನು ಅನುಸರಿಸಿ, ಜೀವನ ಸಾಗಿಸುವುದರಿಂದ ಕೈಗಾರೀಕರಣ, ನಗರೀಕರಣ, ಶಿಕ್ಷಣ, ಉದ್ಯೋಗದಂತಹ ಪ್ರಭಾವಕ್ಕೆ ಒಳಗಾಗಿ ತಮಗೆ ಅನುಕೂಲವಾಗುವ ಸ್ಥಳಗಳಲ್ಲಿ ಜೀವಿಸಲು ಮುಂದಾಗಿ ಅವಿಭಕ್ತ ಕುಟುಂಬಗಳೆಲ್ಲ ವಿಭಕ್ತ ಕುಟುಂಬಗಳಾಗಿ ಪರಿವರ್ತನೆಯನ್ನು ಹೊಂದುತ್ತಾ ಸಾಗಿದೆ. ಪುರುಷಪ್ರಧಾನ ಕುಟುಂಬಗಳು ಎಲ್ಲೆಲ್ಲೂ ಕಂಡುಬರುತ್ತಿದ್ದು, ಆತನೇ ಕುಟುಂಬದ ಯಜಮಾನ, ಕುಟುಂಬದ ಎಲ್ಲಾ ಸದಸ್ಯರ ಮೇಲೂ ಆತನು ಅಧಿಕಾರ ನಡೆಸುತ್ತಾನೆ. ಸ್ತ್ರೀಯರಿಗೆ ಗೌರವ ಸ್ಥಾನವನ್ನು ಕೊಟ್ಟಿದ್ದಾನೆ. ಈಕೆ ಮನೆ ಮಕ್ಕಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊಂದಿದ್ದಾಳೆ. ಆದರೆ ಇಂದು ಮನುಷ್ಯ ನಾಗರೀಕತೆಯ ಕಡೆಗೆ ವಾಲಿರುವುದರಿಂದ ಈ ವ್ಯವಸ್ಥೆಯಲ್ಲಿ ಸ್ವಲ್ಪ ಬದಲಾವಣೆಯಾಗಿರುವುದನ್ನು ಕಾಣಬಹುದು. ಈ ಸಮುದಾಯದ ಪುರುಷರು ಹಲವಾರು ದುಶ್ಚಟಗಳಿಗೆ ಬಲಿಯಾಗಿ ತಮ್ಮ ಕುಟುಂಬವನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಹೋಗುವಲ್ಲಿ ಸೋತಿದ್ದಂತಹ ಸಂದರ್ಭದಲ್ಲಿ ಮಹಿಳೆಯೇ ಯಜಮಾನಿಯಾಗಿ, ತಾಯಿಯಾಗಿ, ಹೆಂಡತಿಯಾಗಿ, ಈ ಕುಟುಂಬಗಳನ್ನು ಸುರಕ್ಷಿತವಾಗಿ ನೋಡಿಕೊಂಡು ಹೋಗುವುದು ಕಂಡುಬರುತ್ತಿದೆ.

### ೩.೫ ವಿವಾಹ ಪದ್ಧತಿ

ವಿವಾಹ ಮತ್ತು ಕುಟುಂಬ ಇವು ಸಾಮಾಜಿಕವಾಗಿ ಬಹಳ ಪ್ರಾಮುಖ್ಯತೆಯನ್ನು ಗಳಿಸಿರುವ ಸಂಸ್ಥೆಗಳು. ಮಾನವನ ಲೈಂಗಿಕ ಸ್ವಚ್ಛಂದತೆಯನ್ನು ನಿವಾರಣೆಮಾಡಿ ಆತನ ಲೈಂಗಿಕ ಬಯಕೆಯ ಪೂರೈಕೆಗೆ ಕ್ರಮಬದ್ಧವಾದ ವ್ಯವಸ್ಥೆಯೊಂದನ್ನು ನಿರ್ಮಿಸಲೋಸುಗ ವಿವಾಹವು ಹುಟ್ಟಿಕೊಂಡಿರಬೇಕು. ವಿವಾಹವೆನ್ನುವಂತಹ ಒಂದು ಸಂಸ್ಥೆ ಸಾರ್ವತ್ರಿಕ ಸ್ವರೂಪದ್ದಾಗಿದ್ದರೂ ಅದರ ರೂಪ ಸ್ವರೂಪಗಳು ಎಲ್ಲಾ ಕಡೆ ಒಂದೇ ರೀತಿಯಲ್ಲಿ ಇರುತ್ತವೆ ಎನ್ನಬಹುದು. ವಿವಾಹದ ವಯಸ್ಸು, ಸಂಗಾತಿಗಳ ಆಯ್ಕೆಯ ಕ್ರಮ, ವಿವಾಹ ಸಮಾರಂಭದ ಸ್ವರೂಪ, ವಿವಾಹವೊಂದರ ಮುಖಾಂತರ ಸಂಗಾತಿಗಳಾಗುವವರ ಸಂಖ್ಯೆ, ಅಂದರೆ ವಿವಾಹದ ವಿವಿಧ ವಿಧಗಳು, ವಿವಾಹ ವಿಚ್ಛೇದನ, ಲೈಂಗಿಕ ಜೀವನಕ್ಕೆ ಸಂಬಂಧಿಸಿದ ನಿಯಮಗಳು ಒಂದೊಂದು ಕಡೆಗೆ ಒಂದೊಂದು ರೀತಿಯಲ್ಲಿ ನಡೆದುಕೊಂಡು ಬಂದಿರುತ್ತವೆ. ಭಾರತದಂತಹ ದೇಶದಲ್ಲಿ ಹಿಂದುಗಳ ನಂಬಿಕೆಯಂತೆ ಪಿತೃಋಣವನ್ನು ತೀರಿಸಲು ಸತ್‌ಪುತ್ರನ ಅಗತ್ಯವಿದೆಯಾದ್ದರಿಂದ ಅಂತಹ ಪುತ್ರನನ್ನು ಪಡೆಯಲು ವಿವಾಹಗಳು ಒಂದು ಪವಿತ್ರಸ್ಥಾನ ಪಡೆದುಕೊಂಡಿದೆ. ಅಂತೆಯೇ ಭಾರತದಲ್ಲಿ ವಿವಾಹವಿಲ್ಲದ ಸಂಸ್ಥೆಯು ಸರ್ವವ್ಯಾಪಿಯಾಗಿರಲು ಅದರ ಉದ್ದೇಶಗಳು ಮತ್ತು ಕಾರ್ಯಗಳೇ ಕಾರಣ. ಸಮಾಜ ಶಾಸ್ತ್ರಜ್ಞ ಕೆ.ಎಂ. ಕಪಾಡಿಯರವರು ಹೇಳುವಂತೆ ಧರ್ಮ, ಪ್ರಜಾ ಮತ್ತು ಕಲೆ, ಧರ್ಮಾಚರಣೆ, ಸಂತಾನೋತ್ಪತ್ತಿ ಮತ್ತು ಲೈಂಗಿಕತೃಪ್ತಿ ಇವು ಹಿಂದೂ ವಿವಾಹ ಪದ್ಧತಿಯ ಮುಖ್ಯ ಉದ್ದೇಶಗಳಾಗಿವೆ.

ಹೀಗೆ ಗಂಡು-ಹೆಣ್ಣಿನ ಸಂಬಂಧವನ್ನು ಕಾನೂನುಬದ್ಧಗೊಳಿಸಿ ಸಂತಾನವನ್ನು ಬೆಳೆಸಿಕೊಳ್ಳುವುದಕ್ಕೆ ಅನುವು ಮಾಡಿಕೊಡುವ ವ್ಯವಸ್ಥೆ ಇದಾಗಿದೆ. ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಹಲವಾರು ಬೆಡಗುಗಳು ಕಂಡು ಬರುತ್ತಿದ್ದು, ಒಂದೇ ರೀತಿಯ ಬೆಡಗುಗಳಲ್ಲಿ ವಿವಾಹವು ನಡೆಯುವುದಿಲ್ಲ. ಅಣ್ಣ ತಮ್ಮಂದಿರು ಎಂಬ ಭಾವನೆ ಇವರಲ್ಲಿದೆ, ಆದರೆ ಭಿನ್ನ ಬೆಡಗುಗಳಲ್ಲಿ ವಿವಾಹವೇರ್ಪಡುತ್ತದೆ. ಒಂದು ವೇಳೆ ವಧು-ವರರು ಪ್ರೇಮಿಸಿ ಒಂದೇ ಬೆಡಗದವರಾಗಿದ್ದು ಹಿರಿಯರಿಗೆ ಹೇಳದೇ ಕೇಳದೇ ಮದುವೆಯಾಗಿ ಬಂದರೆ ಅವರಿಗೆ ಸಮುದಾಯದ ದೈವದವರು, ಅಥವಾ ಕುಟುಂಬದ ಹಿರಿಯರು ಆ ವಿವಾಹ ಬಂಧನವನ್ನು ಅವರಿಗೆ ತಿಳುವಳಿಕೆ ಹೇಳುವುದರ ಮೂಲಕ ಬಂಧಮುಕ್ತರನ್ನಾಗಿ ಮಾಡುತ್ತಾರೆ. ಪುನಃ ಅವರಿಗೆ ಬೇರೆಡೆಗೆ ವರ ಅಥವಾ ವಧುವನ್ನು ಗೊತ್ತುಮಾಡಿ ಮದುವೆ ಮಾಡಿಸುತ್ತಾರೆ.

ವಿವಾಹ ಒಂದು ಸಂಸ್ಕಾರವಿಧಿ. ಇದನ್ನು ವಿಧಿವತ್ತಾಗಿ ನಡೆಸಿಕೊಂಡು ಬಂದಿದ್ದಾರೆ. ಇಲ್ಲಿ ಕುಟುಂಬ ವ್ಯವಸ್ಥೆಯ ಅಡಿಯಲ್ಲಿ ಬರುವ ವೈವಾಹಿಕ ಪದ್ಧತಿಯಲ್ಲಿ ಇಂದಿಗೂ ಸೋದರ ಸಂಬಂಧಿ ಮದುವೆಗಳು ಬಹುಆಸಕ್ತಿಯಿಂದ ನಡೆಯುತ್ತವೆ. ಅಂದರೆ ಒಳಗಿನ ಸಂಬಂಧಗಳು. ಅತ್ತೆಯ/ಅಕ್ಕನ ಮಗಳನ್ನು ಮದುವೆಯಾಗುವರು. ಮದುವೆಗಳು ಬಹುತೇಕ ಗಂಡಿನ ಮನೆಮುಂದೆಯೇ ನಡೆಯುವುದು ಕಂಡುಬರುತ್ತಿದೆ. ಪುಟ್ಟಿಯಲ್ಲಿ ಮದುಮಕ್ಕಳನ್ನು ನಿಲ್ಲಿಸಿ ತೆರೆಯನ್ನು ಹಿಡಿದು ತಾಳಿಕಟ್ಟಿಸುವ ಪದ್ಧತಿಯು ಜಾರಿಯಲ್ಲಿದೆ. ಹೆಣ್ಣಿಗೆ ದಂಡೆಯನ್ನು ಹಾಕುತ್ತಾರೆ. ಇಲ್ಲವೇ ಮುತ್ತಿನ ಬಾಸಿಂಗ ಕಟ್ಟುತ್ತಾರೆ. ಗಂಡಿಗೆ ಟೊಪ್ಪಿಗೆಯನ್ನು ಹಾಕಿ ಮುತ್ತಿನ ಬಾಸಿಂಗ ಕಟ್ಟುತ್ತಾರೆ.

ಈ ಪರಿಸರದ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಹೆಣ್ಣಿಗೆ ತೆರವು ಕೊಡುವ ಪದ್ಧತಿಯು ಇನ್ನೂ ಜೀವಂತವಾಗಿದೆ. ಅಂದರೆ ಧಾನ್ಯಗಳ ರೂಪದಲ್ಲಿಯಾದರೂ, ಹಣದ ರೂಪದಲ್ಲಿಯಾದರೂ ಮದುವೆ ಹಿಂದಿನ ದಿನ ನಿಶ್ಚಿತಾರ್ಥದ ದಿನದಂದು ತೆರವು ಕೊಡುವ ಪದ್ಧತಿ ಇದೆ.

ಈ ಪರಿಸರದಲ್ಲಿ ಮದುವೆಗಳು ಎರಡು ರೀತಿಯಲ್ಲಿ ಜರುಗುತ್ತವೆ. ಆಡಂಬರದ, ಅದ್ದೂರಿಯ ೫ ದಿನಗಳ ಕಾಲ ನಡೆಯುವ ಸಾಂಪ್ರದಾಯಿಕ ಮದುವೆಗಳು ಹಾಗೂ ಒಂದೇ ದಿನದಲ್ಲಿ ಹುಡುಗಿಯನ್ನು ನೋಡಿದ ಕೂಡಲೇ ಪಸಂದ (ಒಪ್ಪಿಗೆ) ಬಂದರೆ ತತ್‌ಕ್ಷಣವೇ ನಿರಾಡಂಬರವಾಗಿ ನಡೆಯುವ ಮದುವೆ 'ಯಾದಿಮೆ ಶ್ಯಾದಿ'. ಇದರಲ್ಲಿ ಜನರು ಕಡಿಮೆ. ಸಮಯಾವಕಾಶ ಉಳಿಯುತ್ತೆ, ಖರ್ಚು ಅಷ್ಟಕಷ್ಟೇ. ವಧುವರರು ದಾಂಪತ್ಯಕ್ಕೆ ಕಾಲು ಇಡುತ್ತಾರೆ. ಈ ವಿವಾಹ ಪದ್ಧತಿಯನ್ನು ಕುರಿತು ಜೀವನಾವರ್ತನದ ಆಚರಣೆಯಲ್ಲಿ ವಿವರಿಸಲಾಗಿದೆ.

**ಬೆಡಗುಗಳು :**

ಬೇರೆ ಮೇಲ್ವರ್ಗದವರಲ್ಲಿ ಗೋತ್ರಗಳಿರುವ ಹಾಗೆ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿಯೂ ಬೆಡಗುಗಳಿವೆ. ಇಂದಿಗೂ ಅವುಗಳ ಪಾಲನೆ ಅತಿ ಕಟ್ಟುನಿಟ್ಟಾಗಿ ನಡೆಯುತ್ತದೆ. ತನ್ನ ಮೂಲದ ಶುದ್ಧತೆಯನ್ನು ಈ ಬೆಡಗುಗಳು ಕಾಪಾಡಿಕೊಂಡಿವೆ. ಈ ಸಮುದಾಯದಲ್ಲಿ ಯಾವುದೇ ಹೆಸರಿನಿಂದ ಕರೆಸಿಕೊಳ್ಳುತ್ತಿದ್ದರೂ ಇವರು ಯಾವ ಪ್ರದೇಶದವರೇ ಆದರೂ ನೆಂಟಸ್ತಿಕೆಗಳನ್ನು ಬೆಡಗುಗಳ ಮೂಲಕವೇ ನಡೆಸುತ್ತಾರೆ.

## ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿನ ಬೆಡಗುಗಳು

(ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಬೆಡಗುಗಳಿಗೆ ಅಡನಾವಗಳೆನ್ನುತ್ತಾರೆ)

| ಕ್ರ.ಸಂ | ಅಡನಾವಗಳ ಹೆಸರು | ಗೋತ್ರದ ಹೆಸರು | ಕುಲದೇವತೆ | ವೇದ | ಶಾಖಾ | ವಂಶ |
|---|---|---|---|---|---|---|
| ೦೧ | ನವಲೆ, ಬನಾರಸೆ, ಗಾಡೆಕರ, ಜುನಗಡ್ಡೆ ಗಡಕರ, ನಾವಳೆ ನಿವಾಸಕರ | ಕಪೀಜಲ | ಅಂಬಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೦೨ | ಅಂಬೆಕರ, ಪೆಟಿಕರ್ಜ ಅಂಬಾರೆ, ಅಂಬರಕರ | ಕಾಸ್ಯಾಯನ | ದೇವಿ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೦೩ | ನವಧರೆ, ಘೋಟೆ, ಘೋರ, ಫಾಯಕರ ಘೋಸಾಳಕರ. | ಕಲಾಸಿ | ಅಂಬಿಕಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೦೪ | ಜಬಡೆ, ಈಲಾಪೆ, ಈಜಂತಕರ, ಚಾಪೆಕರ್ಜ, ಈಭ್ವಾಪೆ, ಜಾವಾದೆ ಜವಡೆ | ಕೌಸಿಕ | ಓಂಗುಲಾಂಬಿಕಾ | ಋಗ್ವೇದ | ಅಶ್ವಲಾಯನ | ಸೂರ್ಯ |
| ೦೫ | ಪಾರಕರ, ಪರಿಹಾರ, ಪರಳಕರ, ಪರಳೀಕರ, ಪ್ರಭಾಳಕರ, ಪಾಖೆ | ಕೌಂಡೀಣ್ಯ | ಓಂಗುಲಾಂಬಿಕಾ | ಋಗ್ವೇದ | ಆಶ್ವಾಲಾಯನ | ಚಂದ್ರ |
| ೦೬ | ಲಿಮಿಕರ, ಬಾಂಬುರೆ, ಲಂಜೆ,ಸುಮಕರ, ವವುಗೆರೆ, ಭಾಕರೆ, ವಧೀಸಾಗರ | ಗವಿಸ್ಟರ | ಓಂಗುಲಾಂಬಿಕಾ | ಸಾಮವೇದ | ಕೌಥಮೀ | ಚಂದ್ರ |
| ೦೭ | ಉತ್ತರಕರ, ತಾಂದಳೆ, ಫಾಗರವಾಳೆ, ದೋಕಟ್ಜೆಫಡಸೆ, ಖನಕರ | ಗಾರ್ಗೀಯ | ಓಂಗುಲಾಂಬಿಕಾ | ಸಾಮವೇದ | ಕೌಥಮೀಶಾಳಾ | ಚಂದ್ರ |

| | | | | | | |
|---|---|---|---|---|---|---|
| ೦೮ | ಚವ್ಹಾಣ, ಭಾಗವತ, ಮಹಾತ್ಮೇ, ಚವ್ಹಾನ, ಮಾತೀಖಾ ಉ. | ಗಾಗ್ಯೆಡ | ಆಗದಾಂಬಾ | ಯುಜುರ್ವೇದ | ಮಾಧ್ಯಂದಿನ | ಚಂದ್ರ |
| ೦೯ | ಖರೀರಸಾಗರ, ಖಬಾ ಈತರ, ಕಾಳೆ, ಕಾಕಢೇ ಕಾಳಣೆಕರ, ಕೆಕಡೆ, ನಾಗಲಕರ, ಟೋಪಣೆ | ಆಮದಾಗ್ನೀ | ಶಕ್ತಿ | ಋಗ್ವೇದ | ಶಾಕಲ್ಯ | ಸೂರ್ಯ |
| ೧೦ | ಮಿನೆ, ಮಾನೆ, ಮೋಬಡೆ, ಗಣಾಳೆ | ದೇವಿದಾಸ | ಶಕ್ತಿ | ಯುಜುರ್ವೇದ | ಮಾಧ್ಯಂದಿನ | ಚಂದ್ರ |
| ೧೧ | ಮಾಳವೆ, ಮಹಾಜನ, ಅಡಾಸರ | ದ್ರೋಣಾಯನ | ದೇವಿ | ಯುಜುರ್ವೇದ | ಮಾಧ್ಯಂದಿನ | ಚಂದ್ರ |
| ೧೨ | ಅಂಬರಕರ, ಹಾಜೀರೆ, ಹೇಮಕರ, ಹಮಣಕರ, ಹಂಬರ, ಹಂಬೋರೆ | ಪಾನಸ್ಯ | ಅಶಾಪೂರ್ಣದೇವಿ | ಸಾಮವೇದ | ಕೌಥಮೀ | ಮನುವಂಶ |
| ೧೩ | ಅವಂತಕರ, ತಾಂದಳೆ | ಪಿಗಲಾಕ್ಷ | ಅಂಬಿಕಾ | ಯುಜುರ್ವೇದ | ಮಾಧ್ಯಂದಿನ | ಚಂದ್ರ |
| ೧೪ | ಅಂಬೋರೆ, ದಿಲ್ಲಿಸಾಗರ, x ಅಂಬುರೆ | ಪುಲಹ | ಜಗದಾಂಬ | ಯುಜುರ್ವೇದ | ಮಾಧ್ಯಂದಿನ | ಚಂದ್ರ |
| ೧೫ | ಗೋಂಧಕರ, ಬೋದೆ, ರೇಣುಕೆ, x ಗುಂದಕರ, ಬುದ್ಧಿಮೂನೆ, ಬಾಧಲಾ, ಬಾಧೆಲಾ, ಬೋಧಲಾ, ರೇಣುಕಾದಾಸ | ಪೌಲ | ಜಗದಾಂಬ | ಯುಜುರ್ವೇದ | ಮಾಧ್ಯಂದಿನ | ಚಂದ್ರ |
| ೧೬ | ಖೇಮಕರ, ಟಿಮಕರ, ಕಿಮಕರ, ಪಾಖರೆ, ಪಾಖರಿಯೆ, ಖಪೋಲೋ, ಭಾಕರೆ, x'ಭಾಕಡಿಯೆ, ಖಪಾಟೆ, ಟಮೆ. | ಪೌಲುಂಗ | ವರ್ದಾಯನೀ | ಯುಜುರ್ವೇದ | ಮಾಧ್ಯಂದಿನ | ಚಂದ್ರ |

| | | | | | | |
|---|---|---|---|---|---|---|
| | ಟಮಕೆ, ಟಿಂಭೇ, ಟಿಭೀಮಂಡಳ, ಟೇಮಕರ, ಪರವಾರೆ, ಪಸಕೀ | | | | | |
| ೧೭ | ಹಿಖಾರೆ, ಚವ್ಹಾಣ, ರತ್ನಪಾರಖೀ x ಈಗೋರಿ, ಹೆಬ್ಬಾರೆ, ಹಬೀರೆ, ಚುಹಾಣ, ವಸ್ತೆ, ರತ್ನಾಗಿರಿ, ರಾಣಾಗಿರೀ ವಿರಹವಡೆ, ವಾಚಲ ಪಾಟಣಕರ, ಸಿರೋ, ಈಯಾ, ಧಾರೂ, ಸೋಳಂಕೀ, ಬರ್ಧಾಣಪುರ, ಬಾದೆಲಾ ವಿರಪೂರ, ಬೇದ್ರೆ, ಬಾಸುದಕರ, ರತ್ನಪಾರಖೆ ಹೆಬಾರೆ ಗಡಖಳ. | ಜಿಂದುಲಸ | ಲಕ್ಷ್ಮೀದೇವಿ | ಯಜುರ್ವೇದ | ಮಾಧ್ಯಂದಿನ | ಅಗ್ನಿ |
| ೧೮ | ಕಟಾರೆ, ಗಡ್ಡಾಳೆ, ಚೋತರೆ, ತಳೆಕರ, ಶೇವಕರ, ಚಿತಲಕರ, x ಚೋಥಳೆ, ಚೋರೆ, ಚೌಧರೆ, ಚೌದಕೆ, ಚೋಂದ್ರೆ, ಚೋಧರೀ, ಗೋಟೆ | ಭಾರದ್ವಾಜ | ಅಂಬಿಕಾ | ಋಗ್ವೇದ | ಅಶ್ವಾಲಾಯನ | ಸೂರ್ಯ |
| ೧೯ | ಗೋಂಧಳೆಕರ ಲಿಂಗರಕರ ಕಾಳೆಕರ, ಹಿರಾಸ ಕಬಬೆ ಗಧಾರೆ, ಗೊಂಧಳೆ, ಗದ್ರೆ ತಾಬಡೆ | ಭುಜಲ | ಶಕ್ತಿ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೨೦ | ಮಿರಜಕರ | ಭುಯಸೀ | ಭವಾನಿ | ಯಜುರ್ವೇದ | ಮಾಧ್ಯಂದಿನ | ಚಂದ್ರ |

| | | | | | | |
|---|---|---|---|---|---|---|
| ೨೧ | ಸಾಖರೆ x ಸುಖಧಾಣೆ, ಸುಖಣಕರ ಶಾ ಈವಾಲೆ ಸಾಖೆರಖರಲೆ, ಸಾಖವೀ, ಸೂಪಶಾಖ ಸುಕಾಳೆ' | ಮಾಣವಂಶ | ಅಂಬಿಕಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೨೨ | ದೇವಳೆ ಮಿರಜಕರ | ಮೈತ್ರಾವರುಣಾ | ಅಂಬಿಕಾ | ಯಜುರ್ವೇದ | ಕೌಥಮೀ | ನಾಗವಂಶ |
| ೨೩ | ಮಹೇಂದ್ರಕರ, ನಿಕತೆ ಅನಂತ ಮಾಲವೆ ರೋಕಡೆ ಬುರಸೆ ವಾಲೆ ಗುಂಡೇ, ಉಪರೆ ನಾಗೇ, ಸುಪೆಕರ ಗಂಭೀರೆ ಕನೆಕರ ನರುಶೆ ಅಪಸಿಂಗಕರ, ನಾಗ, ನಾಗವೆಕರ, ಪವನೆಕರ ಪಾನಸರೆ ಮಹೀಂದ್ರಕರ | ವಶಿಷ್ಠ | ಅಂಬಿಕಾ | ಸಾಮವೇದ | ಕೌಥಮೀ | ಸೋಮ (ನಾಗ) |
| ೨೪ | ದೋಂದಕರ | ಪಾಶವ್ಯ | ಅಂಬಿಕಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೨೫ | ಸರ್ವದೆ ಸರ್ವವದೆ, ಸಾತಪುತೆ ಪೆಟಕರ ದಗಟಕರ ಸಶೋನಡಾಳ, ನಾವಾಡೆ, ಸಾಡಲೆ ದಹಿವಾರೆ ನಾವಾಡೀಯೆ ಪೈರಣಕರ ಸೌದಾಗರ | ವಾದ್ರಸ್ಥ | ದೇವಿ | ಋಗ್ವೇದ | ಆಶ್ವಾಲಾಯನ | ಸೂರ್ಯ |
| ೨೬ | ಜಾವಳೆ, ಜವಜಾಳ, ಜಬಡೆ ಜಾವಾಡೆ ಜವಡೆ | ವಿಷ್ಣು | ದೇವಿ | ಋಗ್ವೇದ | ಆಶ್ವಾಲಾಯನ | ಸೂರ್ಯ |
| ೨೭ | ರೇಳೆಕರ ದೇವಳೆ ಮಿರಜಕರ | ವಿರುಪಾಕ್ಷ | ಓಂಗುಲಾಂಬಿಕಾ | ಯಜುರ್ವೇದ | ಆಶ್ವಾಲಾಯನ | ಸೂರ್ಯ |

| ೨೮ | ಅವಸರೀಯ ಅವಸೇಕರ ಅವಸರೆ | ವ್ಯಸ್ಯ | ಶಕ್ತಿ | ಯಜುರ್ವೇದ | ಮಾಧ್ಯಂದಿನ | ಚಂದ್ರ |
|---|---|---|---|---|---|---|
| ೨೯ | ಕಡಮಸೀಯೆ, ಪಾರಣೆಕರ ಕುರಮಸೆ ಕರಮಯೆ ಪಾಲನಗಾಂವಕರ, ಪಿರನಕರ ಕರಮುಸೆ | ವೈಶಂಪಾಯನ | ಶಕ್ತಿ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೩೦ | ಮಾನವತ ವಡಾ ಉಕರ ಗರುಡ ವಾಟ ಕೋರೆ ಬೆಡಕರ | ಶಾಮಾಯನ | ಹಿಂಗುಲಾಂಬಿಕಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೩೧ | ಪತಂಗೆ ದಾಸಲೋಲೆ ದಾಡೀಮುಂಡೆ ದಾತಸೋಡೆ ಪುತಣಕ | ಶಾಂತಮ್ಮು | ಹಿಂಗುಲಾಂಬಿಕಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೩೨ | ರಾಊತಕರ, ದಲಭೀಡೇ, ರಾಜಹಂಸ ತೋರಮಲೀ ದಳವೀ, ದಂಭೀಮಂಡಳ, ದಾಭೋಳೆ, ರಾಜವರ್ಝುರೆ, ರಾಜಪುತ, ರಾವಳೆ | ಶಾಂಬರೀ | ಹಿಂಗುಲಾಂಬಿಕಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೩೩ | ಡೋಈಜೋಡೆ, ಚಂಡಕೀಯೆ, ಚೇಳಕೀಯೆ ಮಾಜರೆ | ಶಾಂಡಿಲ್ಯ | ಹಿಂಗುಲಾಂಬಿಕಾ | ಋಗ್ವೇದ | ಮಾಧ್ಯಂದಿನ | ಚಂದ್ರ |
| ೩೪ | ಗುಜರ, ಅನಂತ ದಾಸರೆ, ಧಾರುಕಸರ, ಖುತನಕ, ಅಣೇ, ಝುನಕರ, ದುರಢಫೆ, ಕವಿಟಕರ, ಕವಿಸಕರ | ಶುಕ್ರ (ಚಾರ್ಯ) | ಹಿಂಗುಲಾಂಬಿಕಾ | ಅಥರ್ವೇದ | ಪಿಪಲಹ:ಶಾಖಾ | ಮನುವಂಶ |

| | | | | | | |
|---|---|---|---|---|---|---|
| ೩೫ | ತಾತುಸಕರ, ತಾಲುಸಕರ, ಸಂಭುದಾಸ | ಸಾತ್ಯಕೀ | ಜಗದಾಂಬಾ | ಋಗ್ವೇದ | ಆಶ್ವಾಲಾಯನ | ಸೂರ್ಯ |
| ೩೬ | ಘಟಕೆ, ಓರಾಸ, ಔಧಕರ, ಈಢಲೆ, ಘಾಟಕೆ | ಸಾಖ್ಯಾಯನ | ಓಂಗುಲಾಂಬಿಕಾ | ಅಥರ್ವೇದ | ಪಿಪಲ:ಶಾಖಾ | ಚಂದ್ರವಂಶ |
| ೩೭ | ಸುದಾವರ್ತೆ, ಶೇಂಡಗೆ | ಸುಮನಾಯನರ | ದೇವಿ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೩೮ | ಪುಟಾಣೆ, ಬಾಚಲ, ಪಿಸೆ, ಪವಾರ, ಪುವಾರ | ಸುರಾತನ | ದೇವಿ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೩೯ | ಬೋಂದಡೆ, ಪಂಡೀತ ಕಹಾಡೆ | ಹಾಲೋಕರ | ಜಗದಾಂಬ | ಋಗ್ವೇದ | ಆಶ್ವಾಲಾಯನ | ಸೂರ್ಯ |
| ೪೦ | ತುನನಕರ ತುತುರಕರ ನಿಹಳಕರ ಗುರ್ಜರ ಬಡಗುರ್ಜರ ಕುರುಮಾಳೆ, ಪಡೀಯಾಳಜಾ ತಾಬಡೆ ಬರಡೆ ಖಡೆತೋಡ ಬಡೋದೆ ಸೇವಾಳೆ ಬಾಹೆಕರ, ಪತಂಗೆ | ಅತ್ರಿ | ಓಂಗುಲಾಂಬಿಕಾ | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೪೧ | ನಸನಕರ ಮಧೋಳಕರ ದೇಶಮುಖಿ ಝುರೆ ಖಡೋಳೆ | ಆತ್ರೆಯಾಪಣಾ | ಓಂಗುಲಾಂಬಿಕಾ | ಋಗ್ವೇದ | ಅಶ್ವಾಲಾಯನ ಶಾಖಾ | ಸೂರ್ಯ |

| | | | | | | |
|---|---|---|---|---|---|---|
| ೪೨ | ಮಾನಕರ ಮಾಲಪಾಣೀ ಸೇನಾಚಾರ್ಯ ದರ್ಯಾಖನೀ ನಿಕಂಭ ಖಿತ ನರಡೆ, ಗೋಗೆ ಗುಂಡಗೆ ಬೇದರಕರ ರಿನಪೂರಕರ ಖೋದಕರ ಬುದ್ಧೀವಂತ, ಜಿರಾಫೆ ಅವಡೆಕರ ಅಂಬಾರೆ ಅನಂತಮಾಳವೀ ಮಹಿಂದ್ರಕರ | ಅಗಸ್ತಿ | ಹಿಂಗುಲಾಂಬಿಕಾ | ಸಾಮವೇದ | ಕೌಥಮೀ | ನಾಗವಂಶ |
| ೪೩ | ಗನಗೆ ಗನೋಲೆ ಹಾನಜಾಟೆ ಗಾಯಕವಾಡ ಮುಬಾರಕರ | ದೇವಶ್ರವ ಜಗದಾಂಬಾ | | ಯಜುರ್ವೇದ | ಮಾಧ್ಯಂದಿನ | ಚಂದ್ರ |
| ೪೪ | ತಣಗೆ ಮಸೂಲಕರ ಪಾತುರೆ. | ಗಾವೀ | ಜಗದಾಂಬಾ | ಋಗ್ವೇದ | ಮಾಧ್ಯಂದಿನ ಶಾಖಾ | ಚಂದ್ರ |
| ೪೫ | ರಣದಳ, ರಂಗಧೋಳ, ಚೇಳಕೆ, ವಳಸೆ | ಕಾತ್ಯಾಯನ | ಆಗದಾಂಬಾ | ಸಾಮವೇದ | ಶಕ್ತಿ | ಚಂದ್ರ |

ಅಡಿ ಟಿಪ್ಪಣಿ ೧ .ಬಾಹುಸಾರ ಕ್ಷತ್ರಿಯ ಸಮಾಜದ ಇತಿಹಾಸ ಮತ್ತು ಗೋತ್ರಾವಳಿ. ಸಂಗ್ರಹ ಮತ್ತು ಲೇಖಕರು. ಪ.ಭ.ಪ. ಡಾ॥ ನಾಮದೇವ ಸ್ವಾಮಿ ಆನಂದರಾವ್ ಉತ್ತರಕರ್. ಪುಟ ಸಂಖ್ಯೆ.೧೫೬-೧೭೯

**೩.೬ ನ್ಯಾಯ ಪದ್ಧತಿ.**

ಇಂದಿನ ದಿನಗಳಲ್ಲಿಯೂ ಸಹ ನ್ಯಾಯ ಪದ್ಧತಿ ಕಂಡುಬರುತ್ತದೆ. ಆಧುನಿಕತೆಯ ಪ್ರಭಾವದಿಂದ ಹಿಂದಿನ ಆಚಾರಗಳು ಬದಲಾಗಿದ್ದರೂ ಸಹ ಶಿಕ್ಷೆ, ದಂಡ ಮಾತ್ರ ಉಳಿದುಕೊಂಡಿದೆ.

ಕುಟುಂಬಗಳ ಸೌಖ್ಯಕ್ಕೆ, ಹಳ್ಳಿಗಳ ಶಾಂತಿಗೆ ತಮ್ಮದೇ ಆದ ನ್ಯಾಯ ಪದ್ಧತಿಯನ್ನು ಜನಪದರು ರೂಢಿಸಿಕೊಂಡು ಬಂದಿದ್ದಾರೆ. ಜನ ಶಾಂತಿಯಿಂದ ಬದುಕಬೇಕು ಎಂದರೆ ರೀತಿ-ನಿಯಮಗಳು ಮುಖ್ಯವಾಗಿ ಬೇಕಾಗುತ್ತವೆ. ಹಿಂದೆಲ್ಲಾ ರಾಜ ಅಥವಾ ಸಂಸ್ಥಾನಿಕರ ಪರವಾಗಿ ಗೌಡನೋ, ಶ್ಯಾನುಭೋಗನೋ, ಪಾಟೀಲನೋ, ಊರಿನ ಆಡಳಿತ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದನು. ರಾಜಕೀಯ ಕಟ್ಟಳೆಗಳಿಗಿಂತ ಸಾಮಾಜಿಕ ಕಟ್ಟಳೆಗಳೇ ಗ್ರಾಮೀಣರಿಗೆ ಹೆಚ್ಚು ಮುಖ್ಯವಾಗುತ್ತಿವೆ. ಕಾನೂನಿನನ್ವಯ ಜಾರಿಗೆ ಬರುವ ಕಟ್ಟಳೆಗಳಿಗಿಂತ ಸಾಮಾಜಿಕ ಕಟ್ಟಳೆಗಳೇ ಹೆಚ್ಚು ಅತ್ಮೀಯವೆನಿಸುತ್ತವೆ.

ಸಾಮಾಜಿಕ ನಿಯಂತ್ರಣದ ಅನೌಪಚಾರಿಕ ಸಾಧನಗಳಲ್ಲಿ ನ್ಯಾಯಪಂಚಾಯತಿ ಮುಖ್ಯವಾದದ್ದು. ಪ್ರಾಚೀನ ಸಾಮಾಜಿಕಜೀವನದಲ್ಲಿ ನ್ಯಾಯಪಂಚಾಯ್ತಿ ತೀರ್ಮಾನ ಸಮುದಾಯಗಳನ್ನೇ ಅವಲಂಬಿಸಿದ್ದವು. ಏಕೆಂದರೆ ಅವುಗಳ ಗಾತ್ರ ಚಿಕ್ಕವು, ಜನಸಂಖ್ಯೆ ಕಡಿಮೆ, ಜೀವನದ ವಿವಿಧ ಕ್ಷೇತ್ರಗಳು ಸರಳ ಸ್ವರೂಪದವುಗಳಾಗಿದ್ದವು. ಆವರು ಸಾಮಾಜಿಕ ಜೀವನದ ಸಂಬಂಧಗಳನ್ನು ಹೊಂದಿದ್ದರೂ ಭಾರತದ ಜಾತಿಗಳನ್ನು ಗಮನಿಸಿದಾಗ ಇವು ತಮ್ಮದೇ ಆದ ನ್ಯಾಯ ಪದ್ಧತಿಯ ಕ್ರಮವನ್ನು ಅನುಸರಿಸಿರುವುದು ಕಂಡುಬರುತ್ತದೆ. ಎಲ್ಲಾ ಜಾತಿ, ಸಮುದಾಯಗಳ, ಬುಡಕಟ್ಟುಗಳ ನ್ಯಾಯ ಪದ್ಧತಿಯ ಮೂಲ ಉದ್ದೇಶ ಒಂದೇ ಆಗಿದ್ದರೂ, ಸಮುದಾಯಗಳಲ್ಲಿನ ಪದ್ಧತಿಯಲ್ಲಿರುವ ರಚನಾಕ್ರಮಗಳು ಮಾತ್ರ ಭಿನ್ನತೆಯಿಂದ ಕೂಡಿರುವುದನ್ನು ಕಾಣಬಹುದಾಗಿದೆ. ನ್ಯಾಯದ ಧ್ಯೇಯೋದ್ಧೇಶಗಳನ್ನು ಸಾಧಿಸಲು ಮತ್ತು ಜನಜೀವನದಲ್ಲಿ ಸುವ್ಯವಸ್ಥೆಯನ್ನುಂಟುಮಾಡಲು ನ್ಯಾಯ ಪಂಚಾಯ್ತಿ ರಚಿಸಿಕೊಳ್ಳಲಾಗುವುದು. ಅಂತೆಯೇ ನ್ಯಾಯ ಪಂಚಾಯ್ತಿಯು ಯೋಜಿತ ರೀತಿಯಲ್ಲಿ ರೂಪುಗೊಂಡು ಚಾಲನೆಯಲ್ಲಿರುವ ಸಾಮಾಜಿಕ ನಿಯಂತ್ರಣದ ಒಂದು ಅನೌಪಚಾರಿಕ ಸಾಧನವಾಗಿದೆ.

ಒಂದು ಜನ ಸಮುದಾಯದ ನಂಬಿಕೆ, ಆಚರಣೆ, ಆದರ್ಶ, ಮೌಲ್ಯಗಳು ನ್ಯಾಯ ನಿರ್ಣಯಗಳ ಪದ್ದತಿಗಳನ್ನು ರೂಪಿಸುತ್ತವೆ. ಈ ನ್ಯಾಯ ಪದ್ಧತಿ ಕ್ರಮವು ಬುಡಕಟ್ಟುಗಳಲ್ಲಿ ತುಂಬಾ ಗೌರವ ಮತ್ತು ನಿಷ್ಠೆಯಿಂದ ನಡೆಯಲ್ಪಡುತ್ತದೆ.

ಸರಕಾರವು ರಚಿಸಿದ ನ್ಯಾಯವ್ಯವಸ್ಥೆಗಿಂತ ಹೆಚ್ಚಿನ ಮಹತ್ವವನ್ನು ಈ ಸಮುದಾಯಗಳ ನ್ಯಾಯವ್ಯವಸ್ಥೆ ಹೊಂದಿರುತ್ತದೆ. ಇತರ ಸಮುದಾಯಗಳಲ್ಲಿಯಂತೆ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ, ನ್ಯಾಯ ಪದ್ಧತಿಯು ತನ್ನದೇ ಆದ ಮಹತ್ವವನ್ನು ಹೊಂದಿದೆ. ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ನ್ಯಾಯತೀರ್ಮಾನ ಮಾಡುವ ಒಂದು ಗುಂಪಿಗೆ ಅಥವಾ ಆ ಸದಸ್ಯರಿಗೆ ದೈವದವರು

ಎಂದು, ಹಿರಿಯರು ಎಂದು, ಪಂಚಾಯ್ತಿ ಕಟ್ಟೆಯವರು ಎಂದು ಕರೆಯುತ್ತಾರೆ. ಆಪಾದಿತ ವ್ಯಕ್ತಿಯು ಮಾಡಿದ ಪ್ರಮಾದಕ್ಕನುಗುಣವಾಗಿ ತೀರ್ಪು ನಿರ್ಧರಿತವಾಗುತ್ತದೆ.

ನಮ್ಮ ಬಹುಪಾಲು ಹಳ್ಳಿಗಳನ್ನು ಆಳುವ ವರ್ಗ ವರ್ಣ ವ್ಯವಸ್ಥೆ ಜನಪದ ನ್ಯಾಯ ಸಂದರ್ಭವನ್ನು ವ್ಯಾಪಿಸಿದಂತೆ, ಸಾಮಾನ್ಯವಾಗಿ ಉಚ್ಚ ಕುಲದವರು, ಶ್ರೀಮಂತರು, ಇಲ್ಲಿ ಹಿರಿಯರೆಂಬುದು ಸತ್ಯ. ಮದುವೆ, ಮುಂಜಿಗಳಲ್ಲಿ ಅಣ್ಣ ತಮ್ಮಂದಿರು ಬೇರೆಯಾಗುವಲ್ಲಿ ಇವರು ಬೇಕು. ಮನೆಯ ಜಾಗದ ಜಗಳ, ಆಸ್ತಿಯ ಜಗಳ, ದುಡ್ಡು ಬಂಗಾರದ ಜಗಳ ಎಲ್ಲವನ್ನೂ ಈ ಹಿರಿಯರೇ ಬಗೆಹರಿಸುತ್ತಾರೆ. ಒಂದರ್ಥದಲ್ಲಿ ಇವರುಗಳು ಅಧಿಕೃತ ನ್ಯಾಯಾಧೀಶರಾಗಿ ಕೆಲಸಮಾಡುತ್ತಾರೆ.

ಈ ಸಮುದಾಯದಲ್ಲಿ ಅಪರಾಧಕ್ಕೆ ತಕ್ಕಂತೆ ಶಿಕ್ಷೆಯನ್ನು ಬೇರೆ ಬೇರೆ ರೀತಿಯಲ್ಲಿ ವಿಧಿಸಲಾಗುತ್ತಿದೆ. ಕಳ್ಳತನ, ಕುಡಿತ, ಜಮೀನು ಹಗರಣ, ಹಲ್ಲೆ ಮುಂತಾದ ಅಪರಾಧಗೈದ ಸಂದರ್ಭಗಳಿಗಿಂತಲೂ, ಹೆಣ್ಣು ಮಕ್ಕಳ ಮಾನಕ್ಕೆ ಸಂಬಂಧಿಸಿದ ಅಪರಾಧ ಹಳ್ಳಿಗಳಲ್ಲಿ ತೀವ್ರವಾಗಿ ಪರಿಗಣಿಸಲ್ಪಡುತ್ತದೆ. ಒಂದು ಕಡೆಗೆ ಕುಲದವರು ಬಹಿಷ್ಕಾರ ಹಾಕುವುದು ಇನ್ನೊಂದೆಡೆ ಇಡೀ ಊರೇ ಬಹಿಷ್ಕಾರ ಹಾಕುವ ಪದ್ಧತಿಯು ಹಿಂದಕ್ಕೆ ಜಾರಿಯಲ್ಲಿತ್ತು. ಆದರೆ ಇಂದು ವೈಜ್ಞಾನಿಕವಾಗಿ ಮುಂದುವರಿದ ಸಂದರ್ಭದಲ್ಲಿ, ನಗರೀಕರಣದ ಸ್ಪರ್ಶದ ಸಂದರ್ಭದಲ್ಲಿ ಈ ಸಮುದಾಯದ ಯಾವುದೇ ಮಹಿಳೆಯ ಮೇಲೆ ಅದೇ ಸಮುದಾಯದವರು ಅಥವಾ ಬೇರೆ ಸಮುದಾಯದ ಪುರುಷರು ಮಾನಭಂಗ ಮಾಡಿದ ಸಂದರ್ಭದಲ್ಲಿ ಅವರಿಬ್ಬರನ್ನು ಒಂದುಗೂಡಿಸುವ, ಇಲ್ಲವೇ ಬೇರೆ ಕಡೆಗೆ ಮದುವೆ ಮಾಡಿಕೊಡುವುದನ್ನು ನೋಡಬಹುದು. ಹೆಣ್ಣಿನ ಮದುವೆಯ ಖರ್ಚಿಗೆ ಬೇಕಾಗುವಷ್ಟು ಹಣವನ್ನು ಆಪಾದಿತ ವ್ಯಕ್ತಿ ಕೊಡಬೇಕು. ಇಲ್ಲಿ ಗೌಪ್ಯತೆಯನ್ನು ಕಾಪಾಡುತ್ತಾರೆ. ಎರಡೂ ಕಡೆಯವರಿಗೂ ಒಪ್ಪಂದ ಮಾಡಿಸುವ ಪ್ರಯತ್ನ ಮಾಡುತ್ತಾರೆ. ನ್ಯಾಯ ಸಮ್ಮತವಾಗಿ ಬಗೆಹರಿಸಲು ಪ್ರಯತ್ನಿಸುತ್ತಾರೆ. ಶಿವಮೊಗ್ಗ ಜಿಲ್ಲೆಯ ಪರಿಸರದ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಪುರುಷ ತನಗಿಂತ ಕೆಳಸಮುದಾಯದ ಇಲ್ಲವೇ ಮೇಲಿನ ಸಮುದಾಯದ ಮಹಿಳೆಯನ್ನು ಮದುವೆಯಾದರೆ, ದೈವದವರು ಅವರನ್ನು ಮನ್ನಿಸಿ ಮನೆಯೊಳಗಡೆ ಕರೆದುಕೊಳ್ಳುತ್ತಾರೆ. ಆದರೆ ಮಹಿಳೆ ಹೀಗೆ ಮಾಡಿದರೆ ಮನೆಯೊಳಗೆ ಸೇರಿಸಿಕೊಳ್ಳುವುದು ಅತಿ ವಿರಳ.

ಭಾರತೀಯ ಹಳ್ಳಿಗಳಲ್ಲಿ ಸಾಮಾಜಿಕ ನ್ಯಾಯವು ಸಮಾಜದ ವ್ಯವಸ್ಥೆಯನ್ನು ನಿಯಂತ್ರಿಸುವುದರ ಮೂಲಕ ಸಮಾಜದಲ್ಲಿ ಅಹಿತಕರ ಘಟನೆಗಳು ನಡೆಯದಂತೆ ತಡೆಗಟ್ಟುವುದಾಗಿತ್ತು. ಇದಕ್ಕಾಗಿ ತಮ್ಮದೇ ಆದ ಸಾಮಾಜಿಕ ಕಟ್ಟಳೆಗಳ ಮೂಲಕ, ವಿಧಿ–ವಿಧಾನಗಳ ಮೂಲಕ, ನ್ಯಾಯ ಪದ್ಧತಿಗಳನ್ನು ಅಳವಡಿಸಿಕೊಳ್ಳುತ್ತಿದ್ದರು. ಈ ನ್ಯಾಯ ನಿರ್ಣಯಗಳು ಸಾಮಾಜಿಕ, ಧಾರ್ಮಿಕ ಚೌಕಟ್ಟನ್ನು ಪಡೆದುಕೊಂಡಿರುತ್ತಿದ್ದರಿಂದ ಯಾರೂ ಉಲ್ಲಂಘಿಸುತ್ತಿರಲಿಲ್ಲ.

ಅಪರಾಧಗಳು ಭಿನ್ನವಾಗಿದ್ದರೆ ಅವುಗಳಿಗೆ ತಕ್ಕಂತೆ ನ್ಯಾಯ ನಿರ್ಧಾರ ಮಾಡಲಾಗುತ್ತಿತ್ತು. ಅಪರಾಧ ಮಾಡಿದರೆ ಅವನ ಕೈಯನ್ನು ಕಾದ ಎಣ್ಣೆಯಲ್ಲಿ ಅದ್ದುವುದು, ದಂಡವನ್ನು ಕಟ್ಟುವುದು, ಬಾಡೂಟವನ್ನು ಹಾಕಿಸುವುದು, ಬಹಿಷ್ಕಾರ ಹಾಕುವುದು ಮೊದಲಾದ ಪದ್ಧತಿಗಳಿದ್ದವು. ಬಾಮಸಾರ ಕ್ಷತ್ರಿಯ ಸಮುದಾಯದಲ್ಲಿಯೂ ಇದೇ ಪದ್ಧತಿಗಳು ಚಾಲ್ತಿಯಲ್ಲಿದ್ದವು.

ನಮ್ಮ ದೇವರ ಕಾರ್ಯದಲ್ಲಿ ಅಥವಾ ಗ್ರಾಮಸ್ಥರ ಗ್ರಾಮದ ಸಾಮಾಜಿಕ ಕಟ್ಟಳೆಗಳನ್ನು ಮೀರಿ ವರ್ತಿಸುವ ವ್ಯಕ್ತಿಯನ್ನು ಕುಲದಿಂದ, ಗ್ರಾಮದಿಂದ ಇಂತಿಷ್ಟು ದಿನ ವರ್ಷ ಬಹಿಷ್ಕಾರ ಹಾಕಲಾಗುತ್ತಿತ್ತು. ಬಹಿಷ್ಕಾರಕ್ಕೆ ಒಳಗಾದವರಿಗೆ ಯಾರೂ ಸಹಾಯಮಾಡುವಂತಿರಲಿಲ್ಲ. ಇಂತಹ ಸಂದರ್ಭದಲ್ಲಿ ಅಪರಾಧಿಯು ಶರಣಾಗತನಾದರೆ, ದಂಡವನ್ನು ಕಟ್ಟಿ ಬಾಡೂಟವನ್ನು ಹಾಕಬೇಕಾಗಿತ್ತು.

ಹೀಗೆ ಗ್ರಾಮೀಣ ಸಮುದಾಯಗಳಲ್ಲಿ ಇನ್ನೂ ಹಲವಾರು ನಂಬಿಕೆಗಳು ವಿಧಿ-ನಿಷಿದ್ಧಗಳು ಮತ್ತು ನ್ಯಾಯ ಪದ್ಧತಿಗಳು ಅಸ್ಥಿತ್ವದಲ್ಲಿದ್ದವು. ಇವುಗಳಲ್ಲಿ ಬಹುತೇಕ ಪದ್ಧತಿಗಳು, ನಂಬಿಕೆಗಳು ಆಧುನಿಕತೆಯ ಜಾಗತೀಕರಣ ಅಸ್ಥಿತ್ವಕ್ಕೆ ಬಂದಂತೆ ಕಣ್ಮರೆಯಾಗುತ್ತಿವೆ. ಹಳ್ಳಿಗಳ ಜಾನಪದ ನೆಲೆಯಲ್ಲಿನ ಇಂತಹ ವಿಧಿ, ನಿಷೇಧಗಳು, ಜಾಗತೀಕರಣದ ಜ್ವಾಲೆಯಲ್ಲಿ ಕಣ್ಮರೆಯಾಗುತ್ತಿರುವುದರಿಂದ ಗ್ರಾಮಗಳ ಸಾಮರಸ್ಯ, ಮಾನವೀಯತೆ, ಅಂತಃಕರಣ, ಸಮಾನತೆ ಮೌಲ್ಯಗಳು ಇಲ್ಲವಾಗುತ್ತಾ ದಿನನಿತ್ಯದ ಬದುಕಿನಲ್ಲಿ ಆತಂಕ ತಲ್ಲಣಗಳನ್ನು ತಂದೊಡ್ಡಿವೆ. ಹಿರಿಯರು ನೀಡಿದ ಸಲಹೆ ಹಿತನುಡಿಗಳಿಗೆ ಯುವಕರು ಮೂಗು ಮುರಿಯುತ್ತಿದ್ದಾರೆ. ಕುಡಿತ, ಗುಟಕಾ, ಮಟಕಾ, ಪ್ರೇಮ ಗೀಮ ಎಂಬ ಹೆಸರಿನಲ್ಲಿ ನಗರಗಳು ನಾಶದ ಅಂಚಿನತ್ತ ಸಾಗುತ್ತಿವೆ.

ಇಂತಹ ಸಂದರ್ಭದಲ್ಲಿ ಜನಪದ ನೆಲೆಯಲ್ಲಿ ಕಂಡುಬರುವ ಕ್ರೀಡೆ, ಸಂಸ್ಕೃತಿ. ನಂಬಿಕೆ, ನಿಯಮಗಳನ್ನು ಪುನರ್ ಜೀವನಗೊಳಿಸಬೇಕಾಗಿದೆ. ಇಲ್ಲವಾದರೆ ನಗರಗಳು ನಗರಗಳಾಗಿ ಉಳಿಯುವುದಿಲ್ಲ. ಸಮಸ್ಯೆಗಳ ಸರಮಾಲೆಗಳೇ ಎದುರಾಗಿ ಬದುಕು ದುಸ್ತರವಾಗುವಂತೆ ಮಾಡುತ್ತದೆ.

ಸಮಾಜದಲ್ಲಿ ನ್ಯಾಯ ಸಂಹಿತೆಯು ದಂಡ. ಶಿಕ್ಷೆ, ಬಹಿಷ್ಕಾರ ಈ ಮೂರು ಹಂತದಲ್ಲಿಯೂ ನಡೆಯುತ್ತದೆ. ಹಿರಿಯರಾದವರು. ದೈವದವರು ಬಹಳಷ್ಟು ವಿಚಾರವನ್ನು ಮಾಡಿ ಆಯಾ ವ್ಯಕ್ತಿಗಳ ಸಮಸ್ಯೆಗಳನ್ನು ಪರಿಗಣಿಸಿ. ತೀರ್ಪನ್ನು ಇಂದು ಕೊಡುವಲ್ಲಿ ಬಹಳಷ್ಟು ಸಡಿಲಿಕೆ ಕಂಡುಬರುತ್ತದೆ. ಹೊಂದಾಣಿಕೆಯ ಗುಣವನ್ನು ಹುಟ್ಟುಹಾಕುವ ಪ್ರಯತ್ನ ಇಲ್ಲಿ ನಡೆಯುತ್ತದೆ. ಸಣ್ಣ ಪುಟ್ಟ ತಪ್ಪು ಒಪ್ಪುಗಳ ಸಂದರ್ಭದಲ್ಲಿ ದೈವಕ್ಕೆ ಶರಣಾಗುವುದರ ಮುಖಾಂತರ ಅಡ್ಡ ಬಿದ್ದರೆ ಶಿಕ್ಷೆಯಿಂದ ಪರಿಹಾರ ಸಿಗುತ್ತದೆ. ಸಮುದಾಯದ ಹೆಣ್ಣು ಅಥವಾ ವಿಧುರೆ ಪರಪುರುಷನೊಂದಿಗೆ ಲೈಂಗಿಕ ಸಂಪರ್ಕವನ್ನು ಇಟ್ಟುಕೊಂಡಿದ್ದರೆ ಅವಳನ್ನು ನೀತಿಗೆಟ್ಟವಳು ಎಂದು ಸಂಬೋಧಿಸಿ ಸಮುದಾಯದಿಂದ ಹೊರಹಾಕುವ ಅಥವಾ ಇಂತಿಷ್ಟು ವರ್ಷಗಳ ಕಾಲ ಸಮುದಾಯದ, ಕುಟುಂಬದ ಸಂಪರ್ಕ ಕಡಿದು ಹಾಕುವ ಪ್ರಯತ್ನ ಇಲ್ಲಿ ನಡೆಯುತ್ತದೆ. ಅಲ್ಲದೆ ಪರಂಪರಾಗತವಾಗಿ ನಡೆದುಕೊಂಡು ಬಂದಿರುವ ದೈವ, ಹಿರಿಯರು,

ಪಂಚರು ಇವರನ್ನು ಆಧುನಿಕ ಸಮುದಾಯ ಸಂಬಧೀ ಕೋರ್ಟ್ ಕಛೇರಿ ಎಂದು ಅಲೆದಾಡಲು ಮುಂದಾಗಿದ್ದಾರೆ ಎಂದು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಜಯಲಕ್ಷ್ಮಮ್ಮ ನುಡಿಯುತ್ತಾರೆ.

### ೩.೭ ಆಹಾರ ಪದ್ಧತಿ

ಪ್ರತಿಯೊಂದು ಸಮುದಾಯವು ಆಹಾರ ಪದ್ಧತಿಯಲ್ಲಿ ತನ್ನದೇ ಆದ ವಿಶಿಷ್ಟ ರೀತಿಗಳನ್ನು ಅನುಸರಿಸುತ್ತಾ ಬಂದಿರುವುದು ಕಂಡುಬರುತ್ತದೆ. ಆಹಾರದ ವಿಶಿಷ್ಟ ರೀತಿಯು ಪ್ರಯುಕ್ತ ಜಾತಿಗಳು ಹುಟ್ಟಿರಬೇಕು ಎನಿಸುತ್ತದೆ. ಆಹಾರವು ಒಂದು ಜಾತಿಯಲ್ಲಿ ಜೀವಂತವಾಗಿದ್ದುಕೊಂಡು ಆರ್ಥಿಕ ಸ್ಥಿತಿಗತಿಯನ್ನು ಪರಿಚಯಿಸುವ ಪ್ರಮುಖ ಭೂಮಿಕೆಯಾಗಿದೆ. ಕನಕದಾಸರು ಹೇಳುವ ಹಾಗೆ ಮನುಷ್ಯನು ಹಲವಾರು ವೃತ್ತಿಗಳನ್ನು ಕೈಕೊಂಡು, ಭಂಗಬಿದ್ದು, ವ್ಯಂಗ್ಯವಾಡಿ, ದುಡಿಯುವುದು, ಗಳಿಸುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ, ಆಹಾರಕ್ಕಾಗಿ ನಿತ್ಯವೂ ದುಡಿಯಲೇ ಬೇಕು. ಮನುಷ್ಯನಿಗೆ ಆಹಾರವಿಲ್ಲದಿದ್ದರೆ ಬದುಕೇ ಇಲ್ಲ, ಉಸಿರೂ ಇಲ್ಲ, ನಡಿಗೆಯೂ ಇಲ್ಲ. ಆಹಾರ ಕೇವಲ ಮನುಷ್ಯನಿಗೆ ಮಾತ್ರವಲ್ಲದೇ ಪ್ರಕೃತಿಯಲ್ಲಿ ಹುಟ್ಟಿರುವ ಪ್ರತಿಯೊಂದು ಜೀವಿಗೂ ಅಗತ್ಯವಾಗಿದೆ. ಆಹಾರದ ವರ್ಗೀಕರಣದಿಂದಾಗಿ ಭಿನ್ನ ಸಮುದಾಯಗಳು ಭೌಗೋಳಿಕ ಪ್ರದೇಶದಲ್ಲಿ ವಾಸಿಸುತ್ತವೆ. ಬಾಹುಸಾರ ಕ್ಷತ್ರಿಯ ಸಮುದಾಯವು ಆಹಾರಕ್ಕಾಗಿ ತಮ್ಮ ಮೂಲ ವೃತ್ತಿಯನ್ನು ಬಿಟ್ಟು ವ್ಯವಸಾಯ, ಕೂಲಿಕುಂಬಳಿಯನ್ನು ಮಾಡಿಕೊಂಡು ಆಹಾರ ಸಂಪಾದಿಸುತ್ತಿದ್ದಾರೆ. ಇವರು ಮೂಲತಃ ಬೇಟೆಗಾರರಾಗಿದ್ದರೂ, ಇಂದು ಈ ವೃತ್ತಿಯನ್ನು ಮನೋರಂಜನೆಗಾಗಿ ಇಲ್ಲವೇ ಹಬ್ಬ ಹರಿದಿನದಂತಹ ಸಂದರ್ಭದಲ್ಲಿ ಅನುಸರಿಸುತ್ತಾ ಬಂದಿದ್ದು, ಮಾಂಸಾಹಾರಿಗಳಾಗಿದ್ದರೂ ಕೂಡ ಸಸ್ಯಾಹಾರವೇ ಪ್ರಮುಖ ಆಹಾರ ಪದ್ಧತಿ ಆಗಿದೆ. ಇವರು ಆಹಾರವನ್ನು ತಯಾರಿಸಲು ಮಣ್ಣಿನ ಮಡಿಕೆ, ಕುಡಿಕೆ, ಗಡಿಗೆ ಮತ್ತು ಆಧುನಿಕ ಗೃಹೋಪಯೋಗಿ ವಸ್ತುಗಳನ್ನು ಹೆಚ್ಚಾಗಿ ಬಳಸುತ್ತಿದ್ದು ಆಹಾರ ತಯಾರಿಸುವಲ್ಲಿ ದ್ವಿದಳಧಾನ್ಯಗಳು, ಮೊಳಕೆಕಟ್ಟಿದ ಕಾಳುಗಳು, ತರಕಾರಿ, ಹಾಲು, ಮೊಸರು, ತುಪ್ಪ ಮತ್ತು ಮಾಂಸ ಉಪಯೋಗಿಸುತ್ತಾರೆ. ಕುಂಬಾರರು ತಯಾರಿಸಿದ ಮಣ್ಣಿನ ಒಲೆಗಳನ್ನು ತಂದು ಅಡುಗೆ ಮನೆಯಲ್ಲಿ ಒಂದು ಗೊತ್ತಾದ ಸ್ಥಳದಲ್ಲಿ ಹುದುಗಿಟ್ಟು ಬೆಂಕಿ ಹಚ್ಚಿ ಆಹಾರ ಬೇಯಿಸುತ್ತಾರೆ.



ಮನುಷ್ಯನು ಹಸಿವು ನಿವಾರಿಸಿಕೊಳ್ಳಲು ಆಹಾರ ಸೇವಿಸುತ್ತಾನೆ. ಒಂದು ಕಾಲಕ್ಕೆ ಕೇವಲ ಹಸಿಯಾದ ಆಹಾರ ಪದಾರ್ಥಗಳನ್ನು ಸೇವಿಸುತ್ತಿದ್ದನು. ಬೆಂಕಿಯ ಆವಿಷ್ಕಾರವಾದ ಮೇಲೆ ರುಚಿಯ ಬೆನ್ನು ಹತ್ತಿ ಬಗೆ ಬಗೆಯ ಅಡುಗೆ ಮಾಡಿಕೊಳ್ಳುತ್ತಾ, ಹಲವಾರು ರೀತಿಯ ಅಡುಗೆ ಪದಾರ್ಥಗಳನ್ನು ಕಂಡುಹಿಡಿದು ಬೇಯಿಸಿಕೊಂಡು ತಿನ್ನುವುದನ್ನು ಕಲಿತ. ಹೀಗೆ ಅಡುಗೆಯ ಅಭಿರುಚಿ ವ್ಯಕ್ತಿಯಿಂದ ವ್ಯಕ್ತಿಗೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುತ್ತಾ ವೈವಿಧ್ಯಮಯ ಆಹಾರ ಪದಾರ್ಥಗಳು ಬಳಕೆಗೆ ಬಂದಿವೆ.

ಅದರಲ್ಲೂ ಕರ್ನಾಟಕಕ್ಕಷ್ಟೇ ಸಂಬಂಧಿಸಿದಂತೆ ಆಹಾರ ಮತ್ತು ಪಾನೀಯಗಳು ಪ್ರಾದೇಶಿಕತೆಯ ಕಾರಣವಾಗಿ ಬೇರೆ ಬೇರೆಯಾಗಿವೆ. ಈ ವಿಷಯದಲ್ಲಿ ದಕ್ಷಿಣ ಕರ್ನಾಟಕ, ಉತ್ತರ ಕರ್ನಾಟಕ, ಕೊಡಗು

ಎಂದು ನಾಲ್ಕು ವಿಭಾಗಗಳನ್ನು ತಜ್ಞರುಗಳು ಗುರುತಿಸುತ್ತಾರೆ. ಈ ಒಂದೊಂದು ಪ್ರದೇಶದ ಅಡುಗೆಗಳನ್ನು ನಿತ್ಯದ ಅಡುಗೆ, ವಿಶೇಷ ಸಂದರ್ಭದ ಅಡುಗೆ ಎಂದು ಮುಖ್ಯವಾಗಿ ಎರಡು ವಿಭಾಗಗಳಾಗಿ ನೋಡಬಹುದು. ಮಾಂಸದ ಅಡುಗೆ ಮತ್ತು ನಂಬಿಕೆಗಳನ್ನು ಈ ಎರಡರಲ್ಲೂ ಸಮೀಕರಿಸಬಹುದು. ಪಾನೀಯಗಳನ್ನು ಪ್ರತ್ಯೇಕವಾಗಿ ನೋಡಬಹುದು.

ಒಟ್ಟು ಕರ್ನಾಟಕದೊಳಗೆ ರೊಟ್ಟಿಯು ಅಂದರೆ ಜೋಳದ ರೊಟ್ಟಿ, ರಾಗಿ ರೊಟ್ಟಿ, ಅಕ್ಕಿ ರೊಟ್ಟಿ ಎಂದು ಹಾಗೆಯೇ ಜೋಳದ ಮುದ್ದೆ, ರಾಗಿಯ ಮುದ್ದೆ, ಅಕ್ಕಿಯ ಅನ್ನ, ಜೋಳದ ಅನ್ನ, ನವಣೆ ಅಕ್ಕಿ ಅನ್ನ ಎಂದು, ಗೋಧಿಯಿಂದ ತಯಾರಿಸುವ ಚಪಾತಿ, ಪೂರಿ ಎಂದು ವಿವಿಧ ರೀತಿಯ ಅಡುಗೆಗಳನ್ನು ಇವಕ್ಕೆ ಜೋಡಿಯಾಗಿ ಹಲವಾರು ರೀತಿಯ ತರಕಾರಿ, ಪಲ್ಯೆಗಳು, ದವಸಧಾನ್ಯಗಳು, ಸೊಪ್ಪು ಸೆದೆ ಇತ್ಯಾದಿಯಾಗಿ ಬಳಸುತ್ತಾ ಬಂದಿದ್ದಾರೆ.

ಇವರ ಆಹಾರ ಪದ್ಧತಿಯಲ್ಲಿ ಮೂರು ವಿಧಗಳಾಗಿ ನೋಡಬಹುದು.

೧. ನಿತ್ಯದ ಅಡುಗೆ

೨. ಹಬ್ಬ, ಜಾತ್ರೆ, ಮದುವೆ ವಿಶೇಷ ಸಂದರ್ಭದ ಅಡುಗೆ

೩. ಪಾನೀಯಗಳು.

**ನಿತ್ಯದ ಅಡುಗೆಗಳು:**

ನಿತ್ಯದ ಅಡುಗೆಯಲ್ಲಿ ಇವರಿಗೆ ಬಹಳಷ್ಟು ಪ್ರೀತಿ ಇರುವುದು ಚಪಾತಿ, ಅಕ್ಕಿರೊಟ್ಟಿ, ದಕ್ಷಿಣ ಕರ್ನಾಟಕದವರು ರಾಗಿಯ ರೊಟ್ಟಿ ಮಾಡುವುದಕ್ಕೂ, ಉತ್ತರ ಕರ್ನಾಟಕದವರು ಜೋಳದ ರೊಟ್ಟಿ ಮಾಡುವುದಕ್ಕೂ ಬಹಳಷ್ಟು ವ್ಯತ್ಯಾಸವೇನೂ ಇಲ್ಲ. ಶಿವಮೊಗ್ಗದ ಪರಿಸರದಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದವರು ರೊಟ್ಟಿಯನ್ನು ತಯಾರಿಸುವುದು ಸ್ವಲ್ಪ ಭಿನ್ನ. ಅಕ್ಕಿ ಹಿಟ್ಟನ್ನು ಕೊಣಬಿಗೆ ಹಾಕಿಕೊಂಡು ನಾದಿ, ಸಣ್ಣ ಸಣ್ಣ ಹಿಡಿಯಷ್ಟಿರುವ ಉಂಡಿಗಳನ್ನು ಅಂದರೆ ನಾದಿಕೊಂಡ ಹಿಟ್ಟನ್ನು ತೆಗೆದುಕೊಂಡು ಕೊಣಬಿಗೆಯಲ್ಲಿ ತಟ್ಟುತ್ತಾರೆ. ಇದರಲ್ಲಿ ವಿಶೇಷವೇನೂ ಇಲ್ಲ, ನಾಡಿನಾದ್ಯಂತ ಎಲ್ಲರೂ ಹೀಗೆಯೇ ರೊಟ್ಟಿ ತಟ್ಟುತ್ತಾರೆ. ಆದರೆ ಬೇಯಿಸುವುದರಲ್ಲಿ ಭಿನ್ನತೆಯಿದೆ. ದುಂಡಾಗಿ ತಟ್ಟಿದ ರೊಟ್ಟಿಯನ್ನು ಹೆಂಚು ಅಥವಾ ಕಾಯಿಸಿದ ತೆವಿಗೆ ಹಾಕಿ ಬೇಯಿಸುವುದು ಸಾಮಾನ್ಯ. ಆದರೆ ಈ ಭಾಗದ ಬಹಳ ಸಮುದಾಯಗಳು ಅದರಲ್ಲೂ ಬಾಹುಸಾರ ಕ್ಷತ್ರಿಯ ಸಮುದಾಯದವರು ಹೆಂಚು ಅಥವಾ ತೆವಿಯಲ್ಲಿ ಸ್ವಲ್ಪ ಬೇಯಿಸಿ ನಂತರ ಅದನ್ನು ಕಿಚ್ಚಿನಲ್ಲಿ ಅಂದರೆ ಕೆಂಡದ ಮೇಲೆ ಹಾಕಿ ಸುಡುತ್ತಿರುವುದನ್ನು ನಾವು ನೋಡಬಹುದು. ಒಲೆಯಿಂದ ಕೆಂಡವನ್ನು ಹೊರಗೆ ತೆಗೆದು ಸುಡುವಾಗ ಹತ್ತಿರದಲ್ಲಿಯೇ ಕುಳಿತಿರುವ ಇವರಿಗೆ ಬೆಂಕಿಯ ಶಾಖವು ತಟ್ಟುತ್ತದೆ. ಏಕೆಂದರೆ ಗಂಟೆಗಟ್ಟಲೆ ಬಹಳ ರೊಟ್ಟಿ ಸುಡಬೇಕಾಗಿರುವುದರಿಂದ. ಆ ಕಾರಣಕ್ಕಾಗಿಯೇ ಇರಬೇಕು.

ಕುಟ್ಟುವುದು ಖುಷಿಬಾಳ

ಬೀಸುವುದು ಬಿಗಿಬಾಳ

ರೊಟ್ಟಿ ಸುಡುವುದು ಜಳ ಬಾಳ

ಎನ್ನುವ ಹಾಡು ಇವರ ಬಾಯಿಂದ ಬರುತ್ತದೆ. ಇಂತಹ ರೊಟ್ಟಿಯ ಜೊತೆಗೆ ಆಸರೆಯಾಗಿ ಕಾಳಿನ ಪಲ್ಯ ಮತ್ತು ತರಕಾರಿ ಪಲ್ಯೆಗಳು ಇರುತ್ತವೆ. ಕಾಳಿನ ಪಲ್ಯೆಗಳಲ್ಲಿ ಹೆಸರು, ಮೂಕಣಿ (ಮಡಿಕೆಕಾಳು), ಕಡಲೆ, ಬಟಾಣಿ, ಅಲಸಂದಿ ಮೊದಲಾದವುಗಳನ್ನು ಬಳಸುತ್ತಾರೆ. ಮುಕಣಿಕಾಳು ಇತರೆ ಕೆಲಕಾಳುಗಳನ್ನು ಮೊಳಕೆ ಮಾಡಿಯೇ ಪಲ್ಲೆ ಮತ್ತು ಸಾರು ಮಾಡುವುದು ರೂಢಿ. ಅಲ್ಲದೆ ಇವರಿಗೆ ಅತ್ಯಂತ ಪ್ರೀತಿಯಿಂದರೆ ಖಾರಬೇಳೆ ಪಲ್ಲೆ. ಇದು ತೊಗರಿಬೇಳೆ ಅಥವಾ ಕಡಲೆಬೇಳೆ ಆಗಬಹುದು. ಇದನ್ನು ರಾತ್ರಿ ನೆನೆಯುವುದಕ್ಕೆ ಬಿಟ್ಟು ಮರುದಿನ ಇದಕ್ಕೆ ಒಗ್ಗರಣೆ ಹಾಕುತ್ತಾರೆ. ಬಹುಬೇಗ ಕೆಡುವ ಪದಾರ್ಥ ಇದಲ್ಲ. ದೂರದ ಪ್ರದೇಶಕ್ಕೆ ಹೋಗುವಾಗ ಇದು ಇದ್ದೇ ಇರುತ್ತದೆ. ಅಲ್ಲದೆ ಕಡಲೆಬೇಳೆ ಹಿಟ್ಟಿನ ಪಲ್ಲೆ ಜುನಕ ಎಂದು ತಯಾರಿಸುತ್ತಾರೆ. ಇದು ನಮ್ಮ ಆಧುನಿಕ ಸಿಹಿತಿಂಡಿ ಕರದಂಟು ಇದ್ದ ಹಾಗೆ ಇರುತ್ತದೆ. ಆದರೆ ಖಾರಪದಾರ್ಥ, ಚಪಾತಿ ರೊಟ್ಟಿಯ ಜೊತೆ ಇದನ್ನು ಬಳಸುತ್ತಾರೆ. ಇದು ಕೂಡ ಬೇಗ ಕೆಡುವ ಪದಾರ್ಥವಲ್ಲ. ಬೇಳೆ ಮತ್ತು ಕಾಳಿನ ಪಲ್ಲೆಗಳನ್ನು ಒಂದೊಂದು ದಿನ ಮಾಡುವಾಗ ಬೇಳೆ ಅಥವಾ ಕಾಳು ಬೇಯಿಸಿದ ನೀರನ್ನೇ ಬಸಿದುಕೊಂಡು, ಉಪ್ಪು, ಖಾರ, ಹುಳಿ, ಬೆರಸಿ ಅದಕ್ಕೆ ಒಗ್ಗರಣೆ ಹಾಕಿ ಸಾರು ತಯಾರಿಸುತ್ತಾರೆ. ಈ ಭಾಗದಲ್ಲಿ ಬಹುತೇಕ ನೀರು ಸಾರು ಬಳಕೆಯಲ್ಲಿದೆ. ಇದು ಅನ್ನಕ್ಕೂ, ನುಚ್ಚಿನ ಅನ್ನಕ್ಕೂ ಜೋಡಿಯಾಗಿರುತ್ತದೆ. ನುಚ್ಚಿನ ಅನ್ನ ಅಂದರೆ ಅಕ್ಕಿಯನ್ನು ದಪ್ಪವಾಗಿ ಒಡೆಸಿ ನುಚ್ಚು ಮಾಡಿರುತ್ತಾರೆ. ಹಿಟ್ಟಿಗಿಂತಲೂ ದಪ್ಪವಾಗಿರುವ ಈ ನುಚ್ಚನ್ನು ನೀರಿನಲ್ಲಿ ಕುದಿಸಿ ನುಚ್ಚಿನ ಅನ್ನ ತಯಾರಿಸುತ್ತಾರೆ. ಇದರ ಜೊತೆಗೆ ಮಜ್ಜಿಗೆ ಸಾರು, ಹುಳಿಸಾರು ಮಾಡುವುದುಂಟು.

ಇನ್ನೊಂದು ವಿಶೇಷವೆಂದರೆ ದುಂಡುಗಡಲೆಯ ಸೊಪ್ಪನ್ನು ಯಾವುದಾದರೂ ನೆನಸಿದ ಬ್ಯಾಳಿಯ ಜೊತೆಗೆ ಒಗ್ಗರಣೆ ಹಾಕಿ ಪಲ್ಲೆಯನ್ನು ತಯಾರಿಸುತ್ತಾರೆ. ಹಾಗೆಯೇ ಇವರಿಗೆ ಬದನೆಕಾಯಿ ಪಲ್ಲೆಯು ದಿನನಿತ್ಯವೂ ಇರಬೇಕು.

ಅಲ್ಲದೆ ಈ ಸಮುದಾಯದವರು ಗುಡ್ಡ ಗಾಡುಗಳಲ್ಲಿ, ಕಾಡುಗಳಲ್ಲಿ ವಾಸಿಸುತ್ತಿದ್ದ ಸಮಯದಲ್ಲಿ ಹೇಗೆ ಹಸಿ ಸೊಪ್ಪು ಗೆಡ್ಡೆ ಗೆಣಸುಗಳನ್ನು ತಿನ್ನುತ್ತಿದ್ದರೋ ಹಾಗೆಯೇ ಇಂದಿನತನಕವೂ ಊಟದ ಸಮಯದಲ್ಲಿ ಮೆಂತೆಪಲ್ಲೆ, ಉಳ್ಳಾಗಡ್ಡಿಗಿಡ, ಸೌತೆಕಾಯಿ, ಗಜ್ಜರಿಕಾಯಿ, ಟೊಮೆಟೋ, ಉಳ್ಳಾಗಡ್ಡಿ, ಆಕರಿಕೆ ಪಲ್ಲೆ ಮುಂತಾದವುಗಳನ್ನು ಹಸಿಯದಾಗಿಯೇ ತಿನ್ನುವುದನ್ನು ಕಾಣಬಹುದು. ಊಟದ ಜೊತೆಗೆ ಹುರಿದ ಶೇಂಗಾ ಬೀಜವು ಇರುತ್ತದೆ. ನಿತ್ಯದ ಅಡುಗೆಯಲ್ಲಿ ಯಾವಾಗಲಾದರೊಮ್ಮೆ ಮಾಂಸದ ಅಡುಗೆಯೂ ಇವರಿಗೆ ಬೇಕು.

ಮದುವೆ, ಹಬ್ಬ, ಜಾತ್ರೆಯಂತಹ ಸಂದರ್ಭದಲ್ಲಿ ಹೋಳಿಗೆ, ಕಡುಬು, ಸಜ್ಜಕ, ಹುಗ್ಗಿ, ಶಿರಾ, ಪಲಾವು, ಬೋಂದೆ, ಹಾಲುಹುಗ್ಗಿ ಮುಂತಾದ ಸಿಹಿ ಪದಾರ್ಥಗಳನ್ನು ಮಾಡುತ್ತಾರೆ. ಮೊದಲಿಗೆ ಈ

ಹೋಳಿಗೆಯನ್ನು ಕಡಲೆಬೇಳೆ ಅಥವಾ ತೊಗರಿಬೇಳೆ ಕುದಿಸಿ, ಬಸಿದುಕೊಂಡು, ಅದಕ್ಕೆ ಬೆಲ್ಲ ಹಾಕಿ ಮತ್ತಷ್ಟು ಬಿಸಿಮಾಡಿ ಆರಿದ ನಂತರ ಹೂರಣವನ್ನು ಮಾಡಿಕೊಂಡು ತರುವಾಯ ಹೋಳಿಗೆಯನ್ನು, ಕಡುಬನ್ನು ಮಾಡುತ್ತಾರೆ. ವಿಶೇಷವೆಂದರೆ ಕರ್ನಾಟಕದ ಬಹುತೇಕ ಭಾಗದಲ್ಲಿ ಮೈದಾ ಹಿಟ್ಟಿನ ಕಣಕವನ್ನು ಹೋಳಿಗೆ ಮಾಡಲು ಬಳಸಿದಂತೆಯೇ ಶಿವಮೊಗ್ಗ ಜಿಲ್ಲೆಯ ಪರಿಸರದ ಬಾಹುಸಾರ ಕ್ಷತ್ರಿಯ ಸಮುದಾಯದವರು ಮೈದಾ ಹಿಟ್ಟಿನ ಕಣಕವನ್ನು ಮಾಡಿ, ಅದರೊಳಗೆ ಹೂರಣವನ್ನು ತುಂಬಿ ಹೋಳಿಗೆ ಮಣೆಯ ಮೇಲೆ ತೀಡುತ್ತಾರೆ. ನಂತರ ತವಿಯ ಮೇಲೆ ಹಾಕಿ ಬೇಯಿಸುತ್ತಾರೆ. ಇನ್ನು ಕಡುಬಿಗೂ ಹೂರಣ ಮತ್ತು ಮೈದಾಹಿಟ್ಟಿನ ಕಣಕ ಬೇಕು. ಇದನ್ನು ಕೆಲವರು ಎಣ್ಣೆಯಲ್ಲಿ ಕಡುಬನ್ನು ಕರಿಯುತ್ತಾರೆ. ಮತ್ತೆ ಕೆಲವರು ನೀರಿನಲ್ಲಿ ಬೇಯಿಸುತ್ತಾರೆ. ಈ ರೀತಿ ನಾಡಿನ ಬಹಳಷ್ಟು ಕಡೆ ಮಾಡಿಕೊಂಡು, ಹಾಲು-ತುಪ್ಪದ ಜೊತೆ ಊಟಮಾಡುವುದನ್ನು ನಾವು ನೋಡಿದ್ದೇವೆ. ಆದರೆ ಇಲ್ಲಿ ಇವರಲ್ಲಿ ಬೆಲ್ಲದ ನೀರಿನ ಜೊತೆ ಅದ್ದಿಕೊಂಡು ತಿನ್ನುವುದನ್ನು ನಾವು ಕಾಣಬಹುದು. ಹೋಳಿಗೆ ತರುವಾಯ ಉಣ್ಣುವ ಅನ್ನಕ್ಕೆ ಹೋಳಿಗೆಗೆ ಬೇಯಿಸಿಕೊಂಡ ಬೇಳೆಯನ್ನು ಬಳಿಸಿದ ನೀರಿನಿಂದಲೇ ಕಟ್ಟಿನ ಸಾರು ತಯಾರಿಸುತ್ತಾರೆ. ಸಜ್ಜಕ ಎನ್ನುವುದು ಗೋಧಿಯ ಪದಾರ್ಥ, ಗೋಧಿಯನ್ನು ಹೊಡೆಸಿ ನುಚ್ಚು ತಯಾರಿಸಿಕೊಂಡು, ಅದನ್ನು ನೀರಿನಲ್ಲಿ ಬೆಲ್ಲದೊಂದಿಗೆ ಕುದಿಸಿ ಮಾಡುತ್ತಾರೆ. ಇದು ಬಾಣಂತಿಯರಿಗೂ ಯೋಗ್ಯ ಆಹಾರವಂತೆ. ಗೋಧಿಕಾಳನ್ನು ರಾತ್ರಿಯಿಡೀ ನೆನಸಿ ಬೆಲ್ಲದೊಂದಿಗೆ ನೀರಿನಲ್ಲಿ ಕುದಿಸಿ ಹುಗ್ಗಿಯನ್ನು ಮಾಡುತ್ತಾರೆ.

ಇನ್ನು ಸಾಕು ಪ್ರಾಣಿಗಳ ಉತ್ಪನ್ನಗಳಿಂದ ಅಂದರೆ ಕುರಿ, ಆಕಳು, ಎಮ್ಮೆಯ ಹಾಲನ್ನು ಮೊಸರು ಮಾಡಿ ಕಡೆದು ಮಜ್ಜಿಗೆ ಮಾಡಿ, ಮಜ್ಜಿಗೆಗೆ ಸ್ವಲ್ಪ ಉಪ್ಪು ಬೆರೆಸಿ ಕುಡಿಯುವುದು, ಮತ್ತೆ ಇದೇ ಮಜ್ಜಿಗೆಗೆ ಕೊತ್ತಂಬರೆ, ಬೆಳ್ಳುಳ್ಳಿ, ಜೀರಿಗೆ ಉಪ್ಪು ಅರೆದು ಹಾಕಿ ಬೆರಸಿ ಅದಕ್ಕೆ ಜೀರಿಗೆ, ಸಾಸ್ವಿ, ಒಣಮೆಣಸಿನಕಾಯಿ, ಕರಿಬೇವು ಒಗ್ಗರಣೆ ಹಾಕಿ ಮಸಾಲ ಮಜ್ಜಿಗೆ ಎಂದು ತಯಾರಿಸಿಕೊಂಡು ಕುಡಿಯುತ್ತಾರೆ ಮತ್ತು ಅನ್ನ-ನುಚ್ಚಿನ ಜೊತೆ ಊಟಮಾಡುತ್ತಾರೆ.

ಒಟ್ಟಾರೆ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಇತರೆ ಸಮುದಾಯಕ್ಕಿಂತ ಭಿನ್ನವಾದ ಆಹಾರಪದ್ಧತಿಯನ್ನು ಅನುಸರಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

**೩.೮ ಉಡುಗೆ – ತೊಡುಗೆ :**

ಯಾವುದೇ ಒಂದು ಸಮುದಾಯವು ತನ್ನದೇ ಆದ ಆಡುಭಾಷೆ, ಸಂಸ್ಕೃತಿ, ಆಚರಣೆಗಳನ್ನು ಒಳಗೊಂಡಿರುವಂತೆಯೇ ತಮ್ಮತಮ್ಮ ಉಡುಗೆ-ತೊಡುಗೆಗಳಲ್ಲಿಯೂ ವಿಶೇಷತೆಯನ್ನು ಕಾಯ್ದುಕೊಂಡಿರುತ್ತದೆ. ಇದಕ್ಕೆ ಶಿವಮೊಗ್ಗ ಜಿಲ್ಲೆಯ ಪರಿಸರದ ಬಾಹುಸಾರ ಕ್ಷತ್ರಿಯ ಸಮುದಾಯವೂ ಹೊರತಲ್ಲ. ಪ್ರಾದೇಶಿಕವಾಗಿ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿಯೂ ಕೂಡಾ ವೇಷ-

ಭೂಷಣಗಳಲ್ಲಿ, ಅಹಾರ ಪದ್ಧತಿಯಲ್ಲಿ, ಆಚರಣೆಗಳಲ್ಲಿ ಬದಲಾವಣೆ ಹೊಂದಿದಂತೆ, ಇಲ್ಲಿಯ ಉಡುಗೆ ತೊಡುಗೆಗಳಲ್ಲಿ ಕೊಂಚ ಬೇರೆಡೆಗಿಂತ ವ್ಯತ್ಯಾಸ ಕಂಡುಬಂದರೂ, ಇಂದು ಆಧುನಿಕತೆಯ ಸ್ಪರ್ಶದಿಂದಾಗಿ, ಹಲವಾರು ನಗರ ಪ್ರದೇಶಗಳಿಗೆ ವಿವಿಧ ಕೆಲಸ ಕಾರ್ಯಗಳಿಗಾಗಿ ಹೋಗಿ ಓಡಾಡಿಕೊಂಡು ಬರುವುದರಿಂದ, ತಮ್ಮ ಮೂಲ ಉಡುಗೆ ತೊಡುಗೆ ಅಥವಾ ತಮ್ಮಲ್ಲಿರುವ ಉಡುಗೆ-ತೊಡುಗೆಗಿಂತ ಭಿನ್ನ ಉಡುಗೆ-ತೊಡುಗೆಯ ಕಡೆ ಗಮನಹರಿಸಿದ್ದರೂ, ಮೈಮುಚ್ಚುವ ರೀತಿಯಲ್ಲಿ ಬಟ್ಟೆ ತೊಡುತ್ತಾರೆ. ಮಹಿಳೆಯರು ಅರೆಬರೆ ಉಡುಗೆಗಳನ್ನು ಉಡುವುದಿಲ್ಲ. ಉಡುಗೆಯು ಮಾನವನ ಮರ್ಯಾದೆಯನ್ನು ಕಾಪಾಡಿದರೆ, ತೊಡುಗೆಯು ಅವರ ಸೌಂದರ್ಯವನ್ನು ಹೆಚ್ಚಿಸಲು ಸಹಾಯಕ. ಹೀಗೆ ಮಾನಮುಚ್ಚುವ ಉಡುಗೆಯನ್ನು ಇವರು ರೂಢಿಸಿಕೊಂಡು ಬಂದಿದ್ದಾರೆ. ಇಂತಹ ಉಡುಗೆಯು ಸಮುದಾಯದ ಘನತೆ, ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಬದುಕನ್ನು ಪ್ರತಿಬಿಂಬಿಸುತ್ತವೆ. ಉಡುಗೆಗಳಲ್ಲಿ ಮಹಿಳೆಯರಿಗೆ ಕೆಲವು ಕಟ್ಟುಪಾಡುಗಳಿವೆ. ಮೈಮುಚ್ಚುವಂತಹ ಸೀರೆಯನ್ನು ಉಟ್ಟುಕೊಂಡು ತಲೆಯಮೇಲೆ ಸೆರಗು ಹಾಕಿಕೊಳ್ಳಬೇಕು. ಮೈನೆರೆದ ಬಾಲೆ ಸೀರೆಯನ್ನು ಉಡಬೇಕು. ಶಾಲಾ ಕಾಲೇಜಿಗೆ ಹೋಗುತ್ತಿದ್ದರೆ ನಿಯಮ ಅನ್ವಯಿಸುವುದಿಲ್ಲ.

ಸ್ತ್ರೀಯರು ಸೌಂದರ್ಯ ಸಂಕೇತವಾಗಿ ಹಬ್ಬ ಹರಿದಿನಗಳಲ್ಲಿ ವಿಧ ವಿಧವಾದ ಕೇಶಾಲಂಕಾರ ಮಾಡಿಕೊಳ್ಳುತ್ತಾರೆ. ಹಣೆಯ ಮೇಲೆ ಅರಿಷಿಣ, ದೊಡ್ಡದಾಗಿ ದುಂಡಾಗಿ ಕುಂಕುಮ ಇಟ್ಟುಕೊಂಡು ತಲೆಯಲ್ಲಿ ಹೂ ಮುಡಿಯುತ್ತಾರೆ. ಯಾವುದೇ ಶುಭ-ಶೋಭನಾದಿಗಳಲ್ಲಿ, ಧಾರ್ಮಿಕ ಸಂದರ್ಭದಲ್ಲಿ ಮಹಿಳೆಯರು ತಲೆಯ ಮೇಲೆ ಸೆರಗು ಹಾಕಿಕೊಂಡು ಕಳಸ ಬೆಳಗುವುದನ್ನು, ದೇವರಿಗೆ ಕೈಮುಗಿಯುವುದನ್ನು, ಹಿರಿಯರ ಎದುರುಗಡೆ ಸೆರಗು ಹೊದ್ದುಕೊಳ್ಳುತ್ತಿರುವುದನ್ನು ನೋಡಬಹುದು. ಇಲ್ಲಿಯೂ ಬಾಹುಸಾರ ಕ್ಷತ್ರಿಯ ಸಮುದಾಯದವರು ಸಾಂಪ್ರದಾಯಿಕ ಉಡುಗೆಯನ್ನು ಧರಿಸುತ್ತಾರೆ. ಬಹುತೇಕ ಹಿರಿಯ ಮಹಿಳೆಯರು ಕಚ್ಚೆಹಾಕಿ ೧೬ ಮೊಳದ ಸೀರೆ ಉಟ್ಟರೆ, ನಡು ವಯಸ್ಸಿನ ಮಹಿಳೆಯರು ನೈಲಾನ್, ಪಾಲಿಸ್ಟರ್ ಸೀರೆಗಳನ್ನು ಉಡುತ್ತಾರೆ. ಚಿಕ್ಕ ವಯಸ್ಸಿನ ಹುಡುಗಿಯರು ಪರಕಾರ-ಜಂಪರ್ ತೊಡುವುದು, ಶಾಲೆ-ಕಾಲೇಜಿಗೆ ಹೋಗುವ ಹುಡುಗಿಯರು ಚೂಡಿದಾರ ಹಾಕುತ್ತಾರೆ. ಹಿರಿಯ ಪುರುಷರು ದೋತಿ, ಉದ್ದನೆಯ ಷರ್ಟ್, ಟೊಪ್ಪಿಗೆ ಧರಿಸುತ್ತಾರೆ. ವ್ಯವಸಾಯ ಮಾಡುವ ಪುರುಷರು ದೋತಿ ಇಲ್ಲವೇ ಲುಂಗಿಯನ್ನು ಉಡುತ್ತಾರೆ. ವಿದ್ಯಾವಂತ ಯುವಕರು ಪ್ಯಾಂಟ್ ಷರ್ಟ್ ಧರಿಸುತ್ತಾರೆ.

ಮಹಿಳೆಯರು ಕಾಲಲ್ಲಿ ಬೆಳ್ಳಿಯ ಚಾಳ (ಚೈನುಕಾಲು) ಕಿವಿಯಲ್ಲಿ ಬಂಗಾರದ ಓಲೆಗಳನ್ನು ಧರಿಸುತ್ತಾರೆ. ಕೈಯಲ್ಲಿ ಬಿಲವಾರ (ಬಂಗಾರ/ಗಿಲೀಟು) ಗಾಜಿನ ಬಳೆಗಳನ್ನು ತೊಡುತ್ತಾರೆ. ಬೇವಿನ ಕಾಯಿ ಮಾದರಿಯ ಬೋರಮಳ ಸರವನ್ನು ವಿಶೇಷವಾಗಿ ಕೊರಳಿಗೆ ಹಾಕುತ್ತಾರೆ. ಮೂಗಿನಲ್ಲಿ ದೊಡ್ಡಗಾತ್ರದ ಮುತ್ತಿನ ಮೂಗುತಿಯನ್ನು ಧರಿಸುತ್ತಾರೆ. ಇಂದು ಆಧುನಿಕತೆಯ ಪ್ರಭಾವಕ್ಕೆ ಒಳಗಾದ

ಇವರು ವಿವಿಧ ಮಾದರಿಯ ಆಭರಣ, ಉಡುಗೆ-ತೊಡುಗೆಯ ಕಡೆಗೆ ವಾಲುತ್ತಿರುವುದು ಕಂಡುಬರುತ್ತದೆ. ಅಲ್ಲದೇ ಹಲವಾರು ಸಮುದಾಯದವರ ಜೊತೆಗೆ ಬೆರೆತು ಸೀರೆ, ಕಚ್ಚೆ ಹಾಕುವ ಪದ್ಧತಿ ಸಡಿಲಗೊಂಡಿದೆ. ಹಬ್ಬ ಹರಿದಿನಗಳಲ್ಲಿ ವಿಶೇಷವಾಗಿ ಹಿರಿಯ ಮಹಿಳೆಯರು ಟೋಪು ಸೆರಗಿನ ಸೀರೆಗಳನ್ನು ಉಡುತ್ತಾರೆ. ಚಿಕ್ಕಮಕ್ಕಳಿಗೆ ಕಿವಿಯನ್ನು ಚುಚ್ಚುವ ಪದ್ಧತಿ ಇದ್ದು, ಮುರ ಚುಚ್ಚುತ್ತಾರೆ. ಎಡಭಾಗಕ್ಕೆ ಕನ್ಯೆಯರು ಮೂಗುತಿ ಧರಿಸುತ್ತಾರೆ. ದಪ್ಪನೆಯ ಕಾಲುಂಗುರ ತೊಡುತ್ತಾರೆ. ಮಕ್ಕಳಿಗೆ ಉಡುದಾರ, ಲಿಂಗದ ಕಾಯಿ, ಕಡಗ, ಕಾಲ್ಗೆಜ್ಜೆಯನ್ನು ಹಾಕುತ್ತಾರೆ.

ಹಿಂದೆ ಗಂಡಸರು ಕಚ್ಚೆಪಂಚೆ, ಷರಟು, ಜುಬ್ಬ, ಪೇಟ, ಟೋಪಿಗಳು ಧರಿಸುತ್ತಿದ್ದರು. ಕ್ರಮೇಣ ಲುಂಗಿ, ಪೈಜಾಮ, ಷರ್ಟಗಳು ಹಾಗೂ ಇತ್ತೀಚೆಗೆ ಪ್ಯಾಂಟು ಷರ್ಟಗಳನ್ನು ಧರಿಸುತ್ತಾರೆ. ಆದರೆ ಭಜನೆಯಲ್ಲಿ ಮಾತ್ರ ಸಂಪ್ರದಾಯ ಉಡುಗೆ ಸಹಿತ ಬಿಳಿ ಟೋಪಿಗಳನ್ನು ಧರಿಸುತ್ತಾರೆ. ಹೆಣ್ಣುಮಕ್ಕಳು ಹಿಂದೆ ಸೀರೆಯಲ್ಲಿ ಕಚ್ಚೆ ತೊಡುತ್ತಿದ್ದರು, ಕಣದ ಚೋಲಿಗಳು, ಹಣೆಯಲ್ಲಿ ಅಗಲ ಕುಂಕುಮ, ಕೈತುಂಬಾ ಬಳೆಗಳು ಮೂಗಿಗೆ ನತ್ತು, ಕಿವಿಗೆ ಓಲೆ, ಕೊರಳಲ್ಲಿ ಮಂಗಳಸೂತ್ರ ಮುಂತಾಗಿ ಧರಿಸುತ್ತಿದ್ದರು. ಕ್ರಮೇಣ ಸಾದಾ ಸೀರೆ ಕುಪ್ಪುಸಗಳನ್ನು ಧರಿಸುತ್ತ, ಈಚೆಗೆ ಚೂಡಿದಾರ, ನೈಟಿಗಳನ್ನು, ಕುಂಕುಮದ ಬದಲಿಗೆ ಸ್ಟಿಕ್ಕರನ್ನು ಧರಿಸುವರು.

### ೩.೯ ವೃತ್ತಿ

ಪ್ರತಿಯೊಂದು ಸಮುದಾಯಕ್ಕೂ ಯಾವುದಾದರೊಂದು ಮೂಲ ವೃತ್ತಿ ಇರುವಂತೆ ಇವರಲ್ಲಿಯೂ ಅವರದೇ ಆದ ಕಸುಬು, ಉಪಕಸುಬುಗಳು ಇರುವುದನ್ನು ನೋಡಬಹುದಾಗಿದೆ. ಇವರು ತಮ್ಮ ಕಸುಬಿಗನುಗುಣವಾಗಿ ಹೆಸರು ಪಡೆದಿದ್ದಾರೆ.

ಇತರೆ ಸಮುದಾಯಗಳೊಂದಿಗೆ ಒಟ್ಟಾಗಿ ಸೇರಿ ವಾಸಿಸುತ್ತಿದ್ದು, ಎಲ್ಲರಂತೆ ಅವರ ಮಕ್ಕಳೂ ಸಹ ಸರ್ಕಾರಿ ಶಾಲೆಗೆ ಹೋಗಿ ಓದುವುದು, ಬರೆಯುವುದು ಮಾಡುತ್ತಿದ್ದಾರೆ. ಇವರಲ್ಲಿ ಕೆಲವರು ಶಿಕ್ಷಕರಾಗಿ, ವೈದ್ಯರಾಗಿ, ಇಂಜಿನಿಯರುಗಳಾಗಿ, ಪೇದೆಗಳಾಗಿ, ಫಾರ್ಮಸಿಸ್ಟ್‌ಗಳಾಗಿ, ಉಪನ್ಯಾಸಕರಾಗಿ, ವಕೀಲರಾಗಿ, ಎಫ್.ಡಿ.ಎ. ವೃತ್ತಿಯಲ್ಲಿರುವುದು ಮೊದಲಾದ ಬೇರೆ ಬೇರೆ ಇಲಾಖೆಗಳಲ್ಲಿ ಕಾರ್ಯ ಪ್ರವೃತ್ತರಾಗಿ ಕೆಲಸ ಮಾಡುತ್ತಿದ್ದಾರೆ. ಇವರುಗಳು ತಮ್ಮ ಮೂಲ ಸ್ವರೂಪವನ್ನು ಬಹುತೇಕ ಕಳೆದುಕೊಂಡಿದ್ದಾರೆ ಎಂದು ಹೇಳಬೇಕಾಗುತ್ತದೆ. ಇವರು ಉಡುಗೆ, ತೊಡುಗೆ, ನಡವಳಿಕೆ ಮತ್ತು ಸಂಪ್ರದಾಯಗಳಲ್ಲಿ ರೈತರನ್ನು ಹೋಲುತ್ತಾರೆ. ಈ ಸಮುದಾಯಗಳು ತಲೆತಲಾಂತರಗಳಿಂದ ಅನುಸರಿಸಿಕೊಂಡು ಬರುತ್ತಿರುವ ವೃತ್ತಿಗಳ ಬಗೆಗೆ ಅಲ್ಲಲ್ಲಿ ಮಾಹಿತಿಗಳು ದೊರೆಯುತ್ತವೆ. ವೃತ್ತಿಯಲ್ಲಿ ಮೇಲು ಕೀಳೆಂದು ಭಾವಿಸದೆ ಬದುಕಿನ ಭವಿಷ್ಯದ ಚಿಂತನೆಯನ್ನು ಮಾಡದೆ ಹಾಗೂ ಕನಸುಗಳನ್ನು

ಕಾಣದೆ ಸಾಗಿಸಿಕೊಂಡು ಬರುತ್ತಿದ್ದಾರೆ ಎಂದು ಹೇಳಬಹುದು. ತಮ್ಮ ಹೊಟ್ಟೆಪಾಡಿಗಾಗಿ ಪ್ರತಿಯೊಬ್ಬರೂ ಒಂದಲ್ಲ ಒಂದು ಕೆಲಸವನ್ನು ಮಾಡುವುದು ಸ್ವಾಭಾವಿಕವಾಗಿದೆ.

ಬಾಹುಸಾರ ಕ್ಷತ್ರಿಯರ ಮೂಲ ಕಸುಬು ಬಟ್ಟೆಗಳಿಗೆ ಬಣ್ಣ ಹಾಕುವುದು. ಮಹಾರಾಷ್ಟ್ರದಿಂದ ವಲಸೆ ಬಂದು, ಬರಬರುತ್ತಾ ಆಯಾಯಾ ಪ್ರದೇಶಗಳಲ್ಲಿ ನೆಲೆಗೊಳ್ಳುತ್ತಾ, ಮಹಾರಾಷ್ಟ್ರದ ಸಂಸ್ಕೃತಿಯಲ್ಲಿರುವ ಭಕ್ತಿ ಪಂಥವಾದಂತ ವಾರಕರಿ ಪಂಥದಲ್ಲಿ ವಿಲೀನಗೊಂಡರು. ಇದೇ ರೀತಿ ಆಂಧ್ರ ಪ್ರದೇಶ, ಕರ್ನಾಟಕ, ತಮಿಳುನಾಡು, ಗುಜರಾತ್, ರಾಜಸ್ಥಾನಗಳಿಗೂ ವಲಸೆ ಬಂದು ಬರಬರುತ್ತಾ ಅಲ್ಲಿಯೇ ನೆಲೆಗೊಂಡರು. ಅಂತೆಯೇ ಕರ್ನಾಟಕದ ಶಿವಮೊಗ್ಗೆಯಲ್ಲೂ ನೆಲೆಗೊಂಡರು. ಬರಬರುತ್ತಾ ಹೊನ್ನಾಳಿಯ ದೊಡೆತ್ತಿನ ಹಳ್ಳಿಯ ಕೆರೆಯ ನೀರನ್ನು ತೆಗೆದುಕೊಂಡು, ಬಣ್ಣವನ್ನು ಕಲಸಿ ಬಟ್ಟೆಗೆ ಹಾಕಿದಾಗ, ಆ ಬಣ್ಣವು ಬಟ್ಟೆಗೆ ಅಂಟಿಕೊಂಡು ಬಣ್ಣ ಹೋಗದೇ ಅಂಟಿಕೊಂಡಿತ್ತು. ಹೀಗಾಗಿ ಬಾಹುಸಾರ ಕ್ಷತ್ರಿಯ ಸಮುದಾಯದ ಪೂರ್ವಜರು ಅಲ್ಲಿಯೇ ನೆಲೆಗೊಂಡರು. ನಂತರ ಅವರವರ ಕಸುಬಿನಾಧಾರದ ಮೇಲೆ ಶಿವಮೊಗ್ಗ ಜಿಲ್ಲೆಯ ತಾಲ್ಲೂಕುಗಳಾದ ಸಾಗರ, ಶಿಕಾರಿಪುರ, ಭದ್ರಾವತಿ, ಹೊಸನಗರ, ಸೊರಬ, ತೀರ್ಥಹಳ್ಳಿಗಳಲ್ಲಿ ನೆಲೆನಿಂತರು. ಇವರ ಮೂಲವೃತ್ತಿ ಬಟ್ಟೆಗೆ ಬಣ್ಣಹಾಕುವುದಾದರಿಂದ ವೃತ್ತಿಯಿಂದ ಈ ಸಮುದಾಯದವರಿಗೆ "ರಂಗಾರೆ' ಯವರು ಎನ್ನುತ್ತಾರೆ. 'ರಂಗ್' ಎಂದರೆ ಬಣ್ಣ 'ಅರೆ' ಎಂದರೆ ಹಾಕುವವರು. ಬಟ್ಟೆಗೆ ಬಣ್ಣ ಹಾಕುವವರು ಎಂದರ್ಥ.

**ಬಾಹುಸಾರ ಕ್ಷತ್ರಿಯ ಸಮುದಾಯದ ವೃತ್ತಿಯನ್ನು ಆಧರಿಸಿದ ಸಂತರ ನುಡಿಗಳು**

**ಸಂತನಾಮದೇವ** ಇವರ ತಂದೆ ತಾಯಿ ಭಾಹುಸಾರ ಕ್ಷತ್ರಿಯ ಸಮುದಾಯದವರು. ನಾಮದೇವರು ಭಕ್ತಿ, ಜ್ಞಾನ, ವೈರಾಗ್ಯದ ಪಂಥವಾದ ವಾರಕರಿ ಸಂಪ್ರದಾಯದ ಪ್ರಚಾರಕ್ಕಾಗಿ, ಪಂಜಾಬಿನವರೆಗೆ (ಪಾಕಿಸ್ತಾನದ ಗಡಿಯವರೆಗೂ) ಪ್ರವಾಸ ಮಾಡಿ ಪ್ರಸಿದ್ಧರಾದನಂತರ ಇವರ ಶಿಂಪಿ ವೃತ್ತಿಯ ಅನುಯಾಯಿಗಳು ನಾವು ನಾಮದೇವರ ಕಡೆಯ ಶಿಂಪಿಗಳೆಂದು ಹಮ್ಮೆಯಿಂದ ಹೇಳಿಕೊಳ್ಳುತ್ತಾ "ನಾಮದೇವ ಶಿಂಪಿ" ಎಂದು ಕೊಂಡರು. ವಾಸ್ತವಿಕವಾಗಿ ಭಾಹುಸಾರ ಕ್ಷತ್ರಿಯ ಮತ್ತು ನಾಮದೇವ ಶಿಂಪಿ ಎರಡೂ ಒಂದೇ ಸಮುದಾಯದವರು. ಶಿಂಪಿ ಎಂದರೆ ದರ್ಜಿ, ಬಟ್ಟೆ ಹೊಲಿಯುವವ, ಟೈಲರ್ ಎಂದರ್ಥ. ನಾಮದೇವರು ತಮ್ಮ ಶಿಂಪಿ ವೃತ್ತಿಯ ಬಗ್ಗೆ ಅಭಂಗ ಒಂದರಲ್ಲಿ ಹೀಗೆ ವರ್ಣಿಸಿದ್ದಾರೆ.

**ಶಿಂಪಿಯಾಚೆ ಕುಳೀ ಜನ್ಮ ಮನಝಾಲಾ । ಪರಿಹೇತುಗುಂತಲಾ ಸದಾ ಶೀವೀ ॥೧॥ ರಾತ್ರಿ ಮಾಜಿ ಶೀವೀ ದಿವಸಾಮಾಜಿ ಶೀವೀ । ಆರುಣುಕ ಜೀವೀ ನಾಹೀ ಮಾಝ್ಯೋ ॥೨॥ ಸುಯೀ ಆಣೆ ಸಾತುಳೀ ಕಾತ್ರೀ ಗಜದೋರಾ । ಮಾಂಡಿಲಾ ಪಸಾರಾ ಸದಾ ಶೀವೀ ॥೩॥ ನಾಮಾ ಮ್ಹಣೇ ಶೀವೀ ವಿಠೋಬಾಚೆ ಅಂಗೀ । ತ್ಯಾಚೆನಿ ಮೀ ಜನೀ ಧನ್ಯ ಝಾಲೋ ॥೪॥**

ಅಂದರೆ ಬಟ್ಟೆ ಹೊಲಿಯುವ ಚಿಪ್ಪಿಗ ಕುಲದಲ್ಲಿ ನನ್ನ ಜನ್ಮವಾಗಿ ನನ್ನ ಹಿತವು ಸದಾ ಬಟ್ಟೆಹೊಲೆಯುವುದರಲ್ಲಿ ತಲ್ಲೀನವಾಗಿರುವುದು ॥ ರಾತ್ರಿ ಹಗಲೆಲ್ಲಾ ಬಟ್ಟೆ ಹೊಲೆಯುವುದಾಗಿದೆ ॥ ಸೂಜಿ ಕತ್ತರಿ ಗಾತ್ರದ ಕಟ್ಟಿಗೆದಾರ ಇವೆಲ್ಲಾ ಹೊಲೆಯಲು ಬೇಕಾದ ವಸ್ತುಗಳು ಹರಡಿರುತ್ತೆ ॥ ವಿಠ್ಠಲನ ಅಂಗಿಯನ್ನು ಹೊಲೆದು ಅದರಿಂದ ಜಗತ್ತಿನಲ್ಲಿ ಧನ್ಯನಾದೆನೆಂದು ಹೇಳುವರು.

ಈ ರೀತಿಯಾಗಿ ಈ ಸಮುದಾಯದವರು ಬಟ್ಟೆ ಹೊಲಿಯುವ, ಬಟ್ಟೆಗೆ ಬಣ್ಣ ಹಾಕುವ ಬಟ್ಟೆ ವ್ಯಾಪಾರ ಮಾಡುವ ಕರಕುಶಲ ವೃತ್ತಿಯನ್ನು ವಂಶಪಾರಂಪರ್ಯವಾಗಿ ಉಳಿಸಿ ಬೆಳಸಿಕೊಂಡು ಬಂದಿರುವರೆಂದು ಹನುಮಂತ ರಾವ್ ರಂಗಧೋಳ್ ಕ್ಷೇತ್ರ ಕಾರ್ಯದಲ್ಲಿ ತೊಡಗಿದ್ದಾಗಿ ನುಡಿದಿದ್ದಾರೆ. ಇದೇ ಮೂಲವೃತ್ತಿ ಇಂದಿಗೂ ಆಧುನಿಕ ರೀತಿಯಲ್ಲಿ ಮುಂದುವರಿಸಿಕೊಂಡು ಬಂದಿರುವುದನ್ನು ಈ ಸಮುದಾಯದವರಲ್ಲಿ ಕಾಣುತ್ತೇವೆ. ಈ ವೃತ್ತಿಯಲ್ಲಿ ತೊಡಗಿಸುವುದರಿಂದ ಇತರೆ ಸಮುದಾಯಗಳೊಂದಿಗೆ ಸ್ನೇಹ ಸೌಹಾರ್ದತೆಯನ್ನು ಬೆಳೆಸಿಕೊಳ್ಳಲು ಉತ್ತಮ ಅವಕಾಶವೆಂದು ಈ ಸಮುದಾಯದ ಹಿರಿಯ ವ್ಯಕ್ತಿಗಳು ನುಡಿದಿದ್ದಾರೆ.

**೩.೧೦ ಕ್ರೀಡೆಗಳು**

**ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಕ್ರೀಡೆಗಳು :**

ಜನಪದ ಆಟಗಳು ಬಹುತೇಕ ಅನುಕರಣೆಯಿಂದ ಕಲಿಕೆಯಾಗಿ ಮೈಗೂಡಿಸಿಕೊಂಡಂತವುಗಳು. ಉದಾ : ಮಣ್ಣಿನಲ್ಲಿ ಆಡುವ ಮಕ್ಲಾಟ, ಮಕ್ಕಳಿಗೆ ಪ್ರಿಯ. ಮಣ್ಣಿನಿಂದ ಮಡಿಕೆ ಕುಡಿಕೆ ಇತ್ಯಾದಿಗಳನ್ನು ಇಂದಿನ ತನಕವೂ ಕುಂಬಾರರು ಮಾಡಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ಹಾಗೆಯೇ ಮಣ್ಣನ್ನು ಹದಗೊಳಿಸಿ ಆಟಿಕೆಗಳನ್ನು ಈ ಸಮುದಾಯದ ಮಕ್ಕಳು ಕೂಡ ಸೃಷ್ಟಿಸಿ ಬಿಡುತ್ತಾರೆ. ಅಂತೆಯೇ ಬಿಲ್ಲುಗಾರಿಕೆ, ಗುರಿಗಾರಿಕೆ, ಇತ್ಯಾದಿಗಳು ಅಗತ್ಯತೆಯನ್ನು ಪೂರೈಸಲು ಬೆಳೆದು ಬಂದ ಗ್ರಾಮೀಣ ಆಟಗಳಾಗಿವೆ.

ಕ್ರೀಡೆ ಅಥವಾ ಆಟವೆಂಬುದು ಏಕ ಘಟಕ ಕ್ರಿಯೆಯಲ್ಲ. ಅಂದರೆ ಇಲ್ಲಿ ನಿರ್ಧಿಷ್ಟವಾಗಿ ಇಬ್ಬರು ಅಥವಾ ಮುಖಾ ಮುಖಿಯಾಗಿ ಎರಡು ತಂಡಗಳು ಬೇಕಾಗುತ್ತವೆ. ಇಬ್ಬರಲ್ಲೂ ಸ್ಪರ್ಧೆ ಇರುತ್ತದೆ. ಸೋಲು-ಗೆಲುವು ಎಂಬುದೇ ಇಲ್ಲಿ ನಿರ್ಣಾಯಕ. ಯಾವುದೇ ಗ್ರಾಮೀಣ ಆಟದಲ್ಲಿ ಸಂವಹನ ಮತ್ತು ಕ್ರೀಯೆಗಳ ಸಹಚರ್ಯ ಇದ್ದೇ ಇರುತ್ತದೆ. ಈ ಸಂವಹನವು ಕ್ರಿಯಾತ್ಮಕವಾಗಿ ಆಟಗಾರರ ಚಾತುರ್ಯ ಬುದ್ಧಿ, ಸಾಂಘಿಕತೆ, ಶಿಸ್ತು ನೀತಿ ನಿಯಮಾವಳಿಗಳನ್ನು ಪ್ರಚೋದಿಸುತ್ತದೆ. ಸಮಾಜದಲ್ಲಿ ಸಮಚಿತ್ತತೆಯ ಮನೋಭಾವವನ್ನು ರೂಪಿಸಿಕೊಳ್ಳಬೇಕೆಂಬ ಪಾಠವನ್ನು ಪರೋಕ್ಷವಾಗಿ ವರ್ತಿಸುವಂತೆ ಮಾಡುತ್ತವೆ. ಅಂದರೆ ಮನಸ್ಸನ್ನು ಹದಗೊಳಿಸುವ ಮಾಧ್ಯಮವಾಗಿ ಜನಪದ ಆಟಗಳು ಕೆಲಸ ಮಾಡುತ್ತವೆ.

ಜನಪದ ಆಟಗಳು ಕೇವಲ ಮನೋರಂಜನೆಯನ್ನು ಉಂಟು ಮಾಡುವುದಲ್ಲದೆ ಸಮಾಜದೊಳಗಿನ ಏರು ಪೇರುಗಳನ್ನು ಸರಿಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಗ್ರಾಮೀಣ

ಪರಿಸರದ ಆಟಗಳು ಮನುಷ್ಯನ ಮಾನಸಿಕ ಬೆಳವಣಿಗೆ, ಆಂತರಿಕ ವಿಕಾಸಕ್ಕೆ ಕಾರಣವಾಗುತ್ತದೆ ಎಂಬುದು ಸತ್ಯ. ಅಂದರೆ ಇಂತಹ ಆಟಗಳು ಸಾಂದರ್ಭಿಕ ಅಗತ್ಯಕ್ಕಾಗಿ ಅನೇಕ ಮಾರ್ಪಾಡುಗಳನ್ನು ಪಡೆದವು. ಉದಾ : ಕೋಟೆ ಕಾಳಗ ಎಂಬುದು ಯುದ್ಧದ ಸೈನಿಕರು ಕೆಳಗಿರುವ ವೈರಿಗಳನ್ನು ಕಲ್ಲು ಎಸೆಯುವ ಮೂಲಕ ಹಿಮ್ಮೆಟ್ಟಿಸುತ್ತಿದ್ದರು. ಇಲ್ಲಿನ ಕಲ್ಲು ಎಸೆಯುವ ಕ್ರಿಯೆಯು ಗುರಿಯನ್ನು, ಹೊಡೆಯುವ ತಂತ್ರಗಾರಿಕೆಯನ್ನು ಸೂಚಿಸುತ್ತದೆ. ಅಂದರೆ ಕವಣೆ ಕಲ್ಲಾಟ, ಕಲ್ಲು ಬೀಸುವಾಟ ಗುರಿಯನ್ನು ತೆಂಗಿನ ಕಾಯಿ ಒಡೆಯುವಾಟ, ಗುರಿಯಿಟ್ಟು ತೆಂಗಿನ ಕಾಯಿ ಒಡೆಯುವಾಟ, ಗುರಿಯಿಟ್ಟು ಒಬ್ಬರಿಂದೊಬ್ಬರಿಗೆ ಚೆಂಡಿನಿಂದ ಬಡೆದಾಡುವಾಟ ಇತ್ಯಾದಿಗಳಲ್ಲಿ ಈ ತಂತ್ರಗಾರಿಕೆ ಕಂಡು ಬರುತ್ತದೆ.

ಅಟಕ್ಕೆ ಬಳಸುವಂತಹ ವಸ್ತುಗಳನ್ನೇ ಆಧರಿಸಿ ಹೇಳುವುದಾದರೆ, ಹರಳಾಟ, ಬೆರಳಾಟ, ತುಳದಾಟ, ಸುತ್ತಾಟ, ಹುಡುಕಾಟ, ಕುಂಟಾಟ, ಮುಟ್ಟಾಟ, ಎಳೆದಾಟ, ಗುರಿಯಾಟ, ಬೆನ್ನಟ್ಟುವಾಟ, ಅನುಕರಣದ ಆಟ, ಗೋಲಿಗುಂಡಿನಾಟ, ಚಿಣ್ಣಿದಾಂಡಿನಾಟ, ಬುಗುರಿಯಾಟ, ಕಬ್ಬಡಿಯಾಟ, ಇತ್ಯಾದಿಗಳು. ಇವುಗಳಲ್ಲಿ ಬುದ್ಧಿಯಾಟವು ಮತ್ತು ಭಾವದಾಟಗಳು ಹಾಗೂ ಶಕ್ತಿ ಪ್ರದರ್ಶನದ ಆಟಗಳು ಎಂದು ವಿಂಗಡಿಸಬಹುದು. ಇಂತಹ ಎಲ್ಲಾ ಆಟಗಳನ್ನು ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ನಾವು ಕಾಣಬಹುದು. ಯಾವುದೇ ರೀತಿಯ ಜನಪದ ಕ್ರೀಡೆಗಳು ಗ್ರಾಮೀಣರ ಬದುಕಿನೊಂದಿಗೆ ಬೆರೆತುಕೊಂಡು ಬಂದಿರುತ್ತವೆ. ಅವುಗಳು ಮನೋರಂಜನೆಗೆ ಇರಬಹುದು ಇಲ್ಲವೇ ಏಕಕಾಲಕ್ಕೆ ಬಲಸಂವರ್ಧನೆಗೂ ಇರಬಹುದು. ಈ ಎರಡಕ್ಕೂ ಇವು ಸಹಾಯಕವಾಗಿ ಕೆಲಸ ನಿರ್ವಹಿಸುತ್ತವೆ. ಹಳ್ಳಿಯ ಮಕ್ಕಳು ಚಿಕ್ಕವರಿರುವಾಗಲೇ ಕೇವಲ ಮನೋರಂಜನೆಗಾಗಿ ಆಟಗಳನ್ನು ಆಡುತ್ತಿರುತ್ತಾರೆ. ಆನಂತರ ಈ ಮಕ್ಕಳಲ್ಲಿ ಮನುಷ್ಯನ ಹುಟ್ಟು ಪ್ರವೃತ್ತಿಯಾದ ಸ್ಪರ್ಧಾ ಮನೋಭಾವನೆಯನ್ನು ಜಾಗೃತಗೊಳಿಸುತ್ತಾ ಹೋಗುತ್ತದೆ. ಪ್ರಾಯಕ್ಕೆ ಬಂದಂತೆ ಈ ಸ್ಪರ್ಧಾ ಮನೋಭಾವ ಗಟ್ಟಿಗೊಳ್ಳುತ್ತಾ ಹೋಗುತ್ತವೆ.

ಇಂತಹ ಜನಪದ ಆಟಗಳು ಕೆಲವು ನಿತ್ಯದಂತೆ ನಡೆಯುತ್ತಿದ್ದರೆ, ಇನ್ನು ಕೆಲವು ಹಬ್ಬ ಹರಿದಿನಗಳಿಗೆ ಸಂಬಂಧಿಸಿದಂತೆ ಆಯಾ ಹಬ್ಬಗಳಲ್ಲಿ, ಇನ್ನೂ ಕೆಲವು ಕೆಲ ಕಾಲದಲ್ಲಿ, ಕೆಲ ಸಮಯದಲ್ಲಿ ನಡೆಯುತ್ತವೆ. ಇಂತಹ ಆಟಗಳನ್ನು ಗಂಡಸರು, ಹೆಂಗಸರು, ಹಾಗೂ ಮಕ್ಕಳು ಕೂಡ ಆಡಿಕೊಳ್ಳುತ್ತಾ ಬಂದಿರುವುದನ್ನು ನಾವು ಕರ್ನಾಟಕದ ತುಂಬೆಲ್ಲಾ ಕಂಡು ಬರುತ್ತದೆ. ಇದಕ್ಕೆ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವೂ ಹೊರತಲ್ಲ. ಈ ಹಿನ್ನೆಲೆಯಲ್ಲಿ ಬರುವ ಈ ಸಮುದಾಯದ ಕ್ರೀಡೆಗಳನ್ನು ಕುರಿತು ವಿವರಿಸುವುದು ಇಲ್ಲಿನ ಉದ್ದೇಶವಾಗಿದೆ.

ಇಲ್ಲಿನ ಈ ಸಮುದಾಯದವರು ಆಡುವ ಆಟಗಳನ್ನು

೧. ಚಿಕ್ಕಮಕ್ಕಳು ಆಡುವ ಆಟಗಳು

೨. ಗಂಡಸರು ಆಡುವ ಆಟಗಳು

೩. ಹೆಂಗಸರು ಆಡುವ ಆಟಗಳು

೪. ಪ್ರಾಣಿ ಸಂಬಂಧಿ ಆಟಗಳು ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು.

**ಚಿಕ್ಕ ಮಕ್ಕಳು ಆಡುವ ಆಟಗಳು :**

ಮಕ್ಕಳ ಆಟಗಳು ಕೇವಲ ಮನೋರಂಜನೆಯನ್ನು ಮಾತ್ರ ಗುರಿಯಾಗಿರಿಸಿಕೊಂಡಿರುತ್ತವೆ. ಮಕ್ಕಳು ಸಂತೋಷದಿಂದ ಆಡುತ್ತಾ ಬೆಳೆಯಬೇಕೆಂಬುದೇ ಇಲ್ಲಿಯವರ ಸಾಮಾಜಿಕ ಪ್ರಜ್ಞೆಯಾಗಿರಬೇಕು. ಈ ಮಕ್ಕಳ ಆಟದಲ್ಲಿ ಸ್ಪರ್ಧೆ ಇರುವುದಿಲ್ಲವೆನಿಸಿದರೂ ಕೆಲವು ಆಟಗಳಲ್ಲಿ ಸ್ಪರ್ಧೆಯನ್ನು ಕಾಣಬಹುದು. ಹೊಳೆ, ಹಳ್ಳಗಳ ದಂಡೆಯ ಮೇಲೆ ಮತ್ತು ಯಾರದಾದರೂ ಮನೆಯನ್ನು ಕಟ್ಟಲು ಉಸುಕನ್ನು ತಂದು ಅಂಗಳದಲ್ಲಿ ಸುರಿದಿದ್ದರೆ, ಅಂತಹ ಉಸುಕಿನ ಮೇಲೆ ಕಾಲನ್ನು ಇಟ್ಟು ಗುಬ್ಬಿ ಮತ್ತು ಕಾಗೆಗಳ ಗೂಡಿನಂತೆ ಗೂಡನ್ನು ಕಟ್ಟುವ ರೀತಿಯಲ್ಲಿ, ಸಣ್ಣ ಸಣ್ಣ ಮನೆಯನ್ನು ಕಟ್ಟುವುದಾಗಿರಬಹುದು. ಅಲ್ಲಿ ಎತ್ತುಗಳನ್ನು ಮಾಡಿಕೊಂಡು ಹೊಲವನ್ನು ಉಳುವ ತೆರದಿ ಮನೆಯ ಓತ್ತಲಿನಲ್ಲಿ ಆಡುವುದು. ಇಂತಹ ಕಡೆ ಬಹುತೇಕ ಸ್ಪರ್ಧೆ ಇರುವುದಿಲ್ಲವೆನಿಸಿದರೂ, ಯಾರ ಮನೆಯು ಎಷ್ಟು ಸುಂದರವಾಗಿದೆ. ಯಾರ ಗಾಳಿಪಟ ಎಷ್ಟು ಹಾರಿರುವುದು, ಯಾರ ಕಲ್ಲಿನ ಎತ್ತುಗಳು ಸುಂದರವಾಗಿವೆ ಎನ್ನುವುದನ್ನು ಬೇರೆಯವರು ತಿಳಿಸಿ ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಾರೆ. ಈ ನಿಟ್ಟಿನಲ್ಲಿ ಇಂತಹ ಆಟಗಳನ್ನು ಬಾಹುಸಾರ ಕ್ಷತ್ರಿಯ ಸಮುದಾಯದ ಮಕ್ಕಳು ಆಡಿಕೊಂಡು ಬಂದಿರುವುದನ್ನು ಈ ಪರಿಸರದಲ್ಲಿ ಕಾಣಬಹುದು. ಅಲ್ಲದೇ ಈ ಸಮುದಾಯದ ಮಕ್ಕಳು ಬಳೆಚೂರಿನ ಆಟ, ಕುಂಟ ಜಿಲ್ಲೆಯ ಆಟ, ಕಣ್ಣ ಮುಚ್ಚಾಲೆಯಾಟ, ಕಪ್ಪೆಯಾಟ, ಗಿಡ ಮಂಗನಾಟ, ಬುಗುರಿಯಾಟ, ಗೋಲಿಗುಂಡಿನಾಟ, ಅಂಟ್ಯಾಳ ಆಟ, ಕಲ್ಲುತೂರುವ ಆಟ ಮುಂತಾದ ಸ್ಪರ್ಧಾ ರಹಿತ ಹಾಗೂ ಸ್ಪರ್ಧಾಸಹಿತ ಆಟಗಳನ್ನು ಆಡಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ನಚಿತರ ಟೊಪ್ಪಿಗೆಯಾಟ, ಲಡ್ಡು-ಲಡ್ಡು, ತಿಮ್ಮಣ್ಣ ಮುಂತಾದ ಮನೋರಂಜನೆಯ ಆಟಗಳನ್ನು ನಾವು ಕ್ಷೇತ್ರಕಾರ್ಯಕ್ಕೆ ಹೋದ ಸಮಯದಲ್ಲಿ ಕಂಡೆವು. ಅಲ್ಲದೆ ಹಗ್ಗದ ಆಟ, ಲಗೋರಿ ಆಟ, ಉಪ್ಪು ಮಾಡುವ ಆಟ, ಜೋಡಿ ಆಟ, ಈಜುವುದು ಮುಂತಾದ ಆಟಗಳನ್ನು ಈ ಪರಿಸರದ ಮಕ್ಕಳಲ್ಲಿ ಪ್ರಚಲಿತದಲ್ಲಿರುವುದು ಕಂಡುಬರುತ್ತದೆ.

**ಗಂಡು ಮಕ್ಕಳ ಆಟಗಳು :**

ಗಂಡಸರ ಆಟಗಳಲ್ಲಿ ಶಾರೀರಕ ಶ್ರಮ ಹೆಚ್ಚಿರುತ್ತದೆ. ಹಾಗೆಯೇ ಬೌದ್ಧಿಕ ಕಸರತ್ತು ಪ್ರಧಾನವಾಗಿರುತ್ತದೆ. ಗಂಡಸು ನಮ್ಮ ಜನಪದರಲ್ಲಿ ದುಡಿದು ತಂದು ಹಾಕುವುದು. ಅವನು ಬಲಾಢ್ಯವಾಗಿ ಇರಬೇಕು. ಹೀಗಾಗಿ ಜಾಣ್ಮೆ, ತಂತ್ರಗಾರಿಕೆ, ಸಾಹಸ, ಶಕ್ತಿ ಪ್ರಧಾನವಾದ ಆಟಗಳೆಲ್ಲ ಗಂಡಸರ ಆಟಗಳಾಗುತ್ತವೆ. ಗೋಲಿಯಾಟ, ಗಜ್ಜುಗದಾಟ, ಕಬ್ಬಡ್ಡಿಯಾಟ, ಕಂದುಕದಾಟ, ಗೂಳಿಯಾಟ, ಪಗಡೆಯಾಟ, ಚದುರಂಗ, ಬಿಲ್ಲುಗಾರಿಕೆ, ಗುಂಡು ಕಲ್ಲು ಎತ್ತುವುದು, ಕುಸ್ತಿ, ಕಾಲಿಗೆ ಕಲ್ಲು ಕಟ್ಟಿಕೊಂಡು ಎತ್ತುವುದು. ಉಸುಕಿನ ಚೀಲವನ್ನು ಬೆನ್ನ ಮೇಲೆ ಹೊತ್ತು ನಿರ್ದಿಷ್ಟ ಗುರಿ ಮುಟ್ಟುವುದು ಮುಂತಾದ ಕ್ರೀಡೆಗಳೆಲ್ಲ ಶಕ್ತಿ, ತಂತ್ರ, ಬುದ್ಧಿ ಪ್ರಧಾನವಾಗಿ ಕೆಲಸ ಮಾಡುವುದನ್ನು ನಾವು ಕಾಣಬಹುದು. ಇವುಗಳೆಲ್ಲವೂ ಹೊರಾಂಗಣದ ಆಟಗಳೂ ಆಗಿವೆ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರು ಈ ರೀತಿಯ ಆಟಗಳನ್ನು ಆಡಿಕೊಂಡು ಬಂದಿರುವುದನ್ನು ಕಾಣಬಹುದು. ಇವುಗಳಲ್ಲಿ ದಿನ ನಿತ್ಯದಂತೆ ಮತ್ತು ಹಬ್ಬ ಹರಿದಿನಗಳಲ್ಲಿ ಆಡಿಕೊಂಡು ಬಂದಿರುವುದು ರೂಢಿಯಾಗಿದೆ. ದಿನ ನಿತ್ಯದಲ್ಲಿ ಚಿಣ್ಣಿ ದಾಂಡುವಿನ ಆಟ, ಮರಕೋತಿ ಆಟ, ಹುಲಿಯಾಟ, ಲಗ್ಗಿಯಾಟ, ಆಡಿಕೊಂಡು ಬಂದಿದ್ದಾರೆ.

ಇನ್ನು ಪ್ರತಿದಿನ ಸಾಯಂಕಾಲದ ಸಮಯದಲ್ಲಿ ಇಲ್ಲವೇ, ರಾತ್ರಿಯ ಸಮಯದಲ್ಲಿ ಊರೊಳಗೆ ಯುವಕರನ್ನು ಸೇರಿಸಿಕೊಂಡು ವಯಸ್ಕರು ಕಬಡ್ಡಿ ಆಟವನ್ನು ಪ್ರಾರಂಭಿಸುತ್ತಾರೆ. ಇದು ಸಂಪೂರ್ಣ ಸ್ಪರ್ಧಾ ಸಹಿತವಾಗಿದ್ದು, ಸೋತವರು ಇಂತಿಷ್ಟು ಹಣವನ್ನು ಊರಿನ ಗ್ರಾಮ ದೇವತೆಯ ಹುಂಡಿಗೆ ಹಾಕಬೇಕು ಎಂದು ಷರತ್ತು ಮಾಡಿರುತ್ತಾರೆ. ಅದರಂತೆ ಸೋತವರು ಊರಿನ ದೇವತೆಯ ಹುಂಡಿಗೆ ಹಣವನ್ನು ಹಾಕುವುದು ಈ ಭಾಗದ ಕೆಲವು ಕಡೆ ಪದ್ಧತಿಯಾಗಿ ನಡೆದುಕೊಂಡು ಬಂದಿದೆ. ಹೀಗೆ ಇನ್ನು ಎಷ್ಟೋ ಆಟಗಳಲ್ಲಿ ಸೋತವರು ದೇವರಿಗೆ ಇಂತಿಷ್ಟು ಹಣವನ್ನು ಒಪ್ಪಿಸಬೇಕು ಎನ್ನುವುದರ ಹಿನ್ನೆಲೆಯಲ್ಲಿ ದೇವತಾ ಕಾರ್ಯಗಳಿಗೆ ಉಪಯೋಗವಾಗುವಂತೆ ಹಣವನ್ನು ಕೂಡಿಸಲು ಸಹಾಯಕವಾಗುವಂತೆ ಆಟಗಳನ್ನು ಆಡಿಸಿಕೊಂಡು ಬಂದಿದ್ದಾರೆ. ಇನ್ನು ಹಬ್ಬ ಹರಿದಿನಗಳಲ್ಲಿ ಗ್ರಾಮೀಣ ಜನರ ಆಟಗಳು ವಿಶೇಷವಾಗಿ ನಡೆಯುತ್ತವೆ. ಉತ್ಸವ, ಜಾತ್ರೆ, ಓಕುಳಿಯಂತಹ ಸಂದರ್ಭದಲ್ಲಿ ಈ ಸಮುದಾಯದವರು ಆಟವಾಡಲು ಮುಂದಾಗುತ್ತಾರೆ.

ಅಲ್ಲದೇ ಗಂಡಸರಲ್ಲಿ ಕ್ರೀಡೆಯಲ್ಲಿ ಭಾಗವಹಿಸಲು ಇಚ್ಛಿಸುವವರಿಗೆ ಕಣ್ಣು ಕಟ್ಟಿ ಮೂರು ಸುತ್ತು ತಿರುಗಿಸಿ ಊರಿನ ಯಾವುದೇ ಮೂಲೆಯಿಂದ ಅವರನ್ನು ಕೈಬಿಟ್ಟು ಊರಿನಲ್ಲಿರುವ ಆಂಜನೇಯನ ದೇವಸ್ಥಾನದಲ್ಲಿನ ಘಂಟೆಯನ್ನು ಬಾರಿಸುವಂತೆ ಪ್ರೇರೇಪಿಸುತ್ತಾರೆ. ಇದು ಮನೋರಂಜನೆಯನ್ನುಂಟು ಮಾಡುವ ಆಟವಾಗಿದೆ.

**ಹೆಂಗಸರು ಆಡುವ ಆಟಗಳು :**

ನಮ್ಮ ಭಾರತೀಯ ಪರಂಪರೆಯಲ್ಲಿ ಲಿಂಗ ತಾರತಮ್ಯ ಭಾವವಿರುವುದು. ಇದಕ್ಕೆ ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವೂ ಹೊರತಲ್ಲ. ನಾವು ಇದನ್ನು ಅತ್ಯಂತ ಸಹಜ ಎಂದೇ ಸ್ವೀಕರಿಸಿದ್ದೇವೆ. ಜನಪದ ಆಟಗಳಲ್ಲಿಯೂ ಸಹ ಹೆಣ್ಣು ಮಕ್ಕಳ ಆಟಗಳು, ಗಂಡಸರ ಆಟಗಳು ಎಂದು ವಿಂಗಡಿಸಿದ್ದಾರೆ. ಹೆಣ್ಣು ಮಕ್ಕಳ ಆಡುವ ಆಟಗಳನ್ನು ಗಂಡು ಮಕ್ಕಳು ಆಡಿದರೆ ಗೇಲಿ ಅಥವಾ ಟಿಂಗಲ್ ಮಾಡುವುದು. ಗಂಡು ಮಕ್ಕಳ ಆಟಗಳನ್ನು ಹೆಂಗಸರು ಆಡಿದರೆ ಗಂಡು ಬಸವಿ ಎಂದು ಕರೆಯುವುದು ಸಾಮಾನ್ಯ. ಇಲ್ಲಿ ಹೆಣ್ಣು  ಗಂಡುಗಳ ಶಾರೀರಿಕ ರಚನೆ ಮತ್ತು ದುಡಿಮೆಯ ನಿರೀಕ್ಷೆಗೆ ತಕ್ಕಂತೆ ಆಟಗಳು ಸೃಷ್ಟಿಯಾಗಿವೆ ಅಥವಾ ಬಳಕೆಗೊಂಡ ಆಟಗಳನ್ನು ಆಡಿಸಿಕೊಂಡು ಬಂದಿರುವುದು ಸರಿ ಎನಿಸುತ್ತದೆ.

ಅಂಟ್ಯಾಲ ಕಲ್ಲುಗಳನ್ನು ತೆಗೆದುಕೊಂಡು ಕೈಯಿಂದ ತೂರಿ ಹಿಡಿಯುವ ಆಟ ಬಳೆ ಚೂರಿನಾಟ, ಸರಿಬೆಸದಾಟ, ಪಗಡೆಯಾಟ, ಚಕ್ಕದ ಆಟ, ಮುಂತಾದವುಗಳನ್ನು ನಮ್ಮ ಹೆಂಗಸರು ಆಡುತ್ತಲೇ ಬಂದಿದ್ದಾರೆ.  ಆದರೆ ಪುರುಷರು ದಿಟ್ಟಿಸಿ ಆಟವಾಡಿದಂತೆ ನಮ್ಮ ಮಹಿಳೆಯರಿಗೆ ಆಟವಾಡಲು ಗೊತ್ತಿಲ್ಲವೆಂದೇ ಹೇಳಬಹುದು. ಇತ್ತಿತ್ತಲಾಗಿ ಮುಂದುವರಿಯುತ್ತಿರುವ ಈ ಸಂದರ್ಭದಲ್ಲಿ ಇಂದು ಗ್ರಾಮೀಣ ಮಹಿಳೆಯರು ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ಆದರೆ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಮಹಿಳೆಯರು ಅಷ್ಟಾಗಿ ಮುಂದುವರಿದಿಲ್ಲವೆಂದು ಹೇಳಬಹುದು. ಆದಾಗ್ಯೂ ಗ್ರಾಮೀಣ ಕ್ರೀಡೆಗಳಲ್ಲಿ ಹೆಂಗಸರು ಪ್ರತಿನಿಧಿಸುತ್ತಲೇ ಬಂದಿದ್ದಾರೆ. ಬೀಸುವ ಕುಟ್ಟುವ ಕ್ರಿಯೆಗಳು ಸಹಜ ಕ್ರಿಯೆಗಳಾಗಿದ್ದರೂ, ಅವುಗಳಲ್ಲದೇ ಕ್ರೀಡಾ ಅಥವಾ ಸ್ಪರ್ಧಾ ಮನೋಭಾವನೆಯನ್ನು ನಾವು ಈ ಭಾಗದ ಮಹಿಳೆಯರಲ್ಲಿ ಕಾಣಬಹುದು. ಅಲ್ಲದೆ ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ದೊರೆಯುವ ಕೋಹಳ್ಳಿ, ರಡ್ಡೇರಹಳ್ಳಿ, ಬೇಡರಹಟ್ಟಿ ಊರುಗಳಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದ ಮಹಿಳೆಯರು ಕುಂಬಳಕಾಯಿ ಆಟ, ಓಡಾಟ, ಕುಂಬಾರ ಆಟ, ಆಸಿ–ಬಿಸಿ ಆಟ (ಕಾಲು ತೆವಳುತ್ತಾ ಆಡುವುದು) ಈ ಆಟದಲ್ಲಿ ಸೋತವರು, ಸವತಿಯರು, ಗೆದ್ದವರು ಗೆಳತಿಯರು ಎನ್ನುವ ಮಾತಿದೆ. ಈ ಹಿನ್ನೆಲೆಯನ್ನೊಳಗೊಂಡ ಈ ಆಟವನ್ನು ರಡ್ಡೇರ ಹಟ್ಟಿಯ ವಯಸ್ಸಾದ ಮಹಿಳೆಯರು ವಿವರಿಸಿದ್ದುಂಟು. ಅಂದ ಹಾಗೆ ಈ ಆಟವು ಸಂಪೂರ್ಣ ಸ್ಪರ್ಧಾಭಾವನೆಯ ಆಟವಾಗಿದೆ. ನಂತರ ಕಣ್ಣು ಕಟ್ಟಿಕೊಂಡು ಗೆಳತಿಯರನ್ನು ಮುಟ್ಟುವುದು, ಕಣ್ಣ ಮುಚ್ಚಾಲೆ ಆಟ, ಉಪ್ಪೊಮ್ಮೆ ಉಪ್ಪ ಎಂದು ನಾಲ್ಕು ಕಂಬಗಳ ನಡುವೆ ಓಡಾಡಿಕೊಂಡು ಆಡುವ ಆಟ, ಬೋ ಬೋ, ಕುಂಟುತ್ತಾ ಮುಟ್ಟುವ ಆಟ, ಜೋಕಾಲಿ ಜೋಕುವ ಆಟ, ನಿಂಬೆಹಣ್ಣು ಚಮಚದಲ್ಲಿ ಇಟ್ಟುಕೊಂಡು ಅದು ಬೀಳದಂತೆ ನಿಗದಿತ ಗುರಿಯನ್ನು ಮುಟ್ಟಲು ಓಡುವುದು ಮುಂತಾದ ಕ್ರೀಡೆಗಳನ್ನು ನಾವು ಈ ಭಾಗದ ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಕಂಡುಬರುತ್ತದೆ.

ಇನ್ನು ಹೊಲಗದ್ದೆಗಳಲ್ಲಿಯೂ ಕೆಲಸ ಮಾಡುವ ಸಮಯದಲ್ಲಿ ಕೂಲಿಗಾಗಿಯೂ ಶ್ರಮದಾಯಕವಾದ ಆಟಗಳನ್ನು ಆಡಲು ಮುಂದಾಗುತ್ತಾರೆ. ಹೇಗೆಂದರೆ ಒಂದು ಎಕರೆ ಭೂಮಿಯಲ್ಲಿನ ಸುಲುಗಾಯ (ಹಸಿಕಡ್ಡಿಯನ್ನು) ಕೇವಲ ಎರಡು ತಾಸು-ನಾಲ್ಕು ತಾಸಿನಲ್ಲಿ ಕಿತ್ತು ಮುಗಿಸುತ್ತೇವೆ ಎನ್ನುವ ಸ್ಪರ್ಧೆ. ಇದು ಶಕ್ತಿ ಪ್ರದರ್ಶನದ ಆಟವೇ ಸರಿ. ಇದರಿಂದ ಅವರಿಗೆ ಕಡಿಮೆ ಸಮಯದಲ್ಲಿ ಬಹಳ ಹಣವನ್ನು ಸಂಪಾದಿಸಲು ಸಾಧ್ಯ. ಇಂತಹ ಇನ್ನೂ ಇತರೆ ಸಂದರ್ಭಗಳಲ್ಲಿಯೂ ನಡೆಯುತ್ತದೆ. ಗೆದ್ದವರನ್ನು ಊರಿನವರು ಹಾಡಿ ಹೊಗಳುತ್ತಾರೆ.

**ಪ್ರಾಣಿ ಸಂಬಂಧಿ ಆಟಗಳು:**

ತಮ್ಮ ಒಡನಾಟದ ಆಟಗಳನ್ನು ತಮ್ಮ ಬದುಕಿನ ಒಂದು ಭಾಗವೆಂದು ತಿಳಿದಿರುವ ಈ ಸಮುದಾಯದ ಜನರು ಈ ಪರಿಸರದಲ್ಲಿ ಸಾಕು ಪ್ರಾಣಿಗಳಮುಖಾಂತರವೂ ತಮ್ಮ ಕ್ರೀಡಾ ಮನೋಭಾವನೆಯನ್ನು ಮೆರೆಯುತ್ತಾರೆ. ಇಂತಹ ಆಟಗಳು ಬೇರೆ ಕಡೆಗಳಲ್ಲಿಯೂ ನಡೆಯುತ್ತದೆ.

ಪ್ರಾಣಿಗಳಲ್ಲಿ ಎತ್ತುಗಳಿಗೆ ಸಂಬಂಧಿಸಿದ ಕ್ರೀಡೆಗಳು ಇಲ್ಲಿ ಕಂಡುಬರುತ್ತದೆ. ಉದಾ: ಕಾರಹುಣ್ಣಿಮೆಯ ದಿನದಂದು ಎತ್ತುಗಳಿಂದ ಕರಿ ಹರಿಯುವ ಒಂದು ಪದ್ಧತಿ. ಈ ಸಂದರ್ಭದಲ್ಲಿ ಹಳ್ಳಿಗಳ ಬಹಳಷ್ಟು ಎತ್ತುಗಳನ್ನು ಊರ ಮುಂದಿನ ಅಗಸಿ ಬಾಗಿಲಿಗೆ ತಂದು ಅಲಂಕಾರಗೊಳಿಸಿ, ಒಂದು ನಿಗದಿತ ದೂರದಲ್ಲಿ ಊರಿನ ಒಂದು ಬೀದಿಯಲ್ಲಿ ಹೂ-ತೋರಣ ಕಟ್ಟಿ, ಅಲ್ಲಿ ಜನರೆಲ್ಲರೂ ಕಾದು ನಿಂತಿರುತ್ತಾರೆ. ಈ ಕಡೆ ಎತ್ತುಗಳನ್ನು ಹುರಿದುಂಬಿಸುವುದರ ಮುಖಾಂತರ ಎತ್ತುಗಳ ಮಾಲೀಕರು ಅವುಗಳ ಹಿಂದೆ ಓಡುತ್ತಾ ಬರುತ್ತಾರೆ. ಯಾರ ಎತ್ತು ಯಾವ ಬಣ್ಣದ ಎತ್ತು ಕರಿ ಹರಿಯುತ್ತದೆಯೋ ಅವರನ್ನು ಆ ಎತ್ತನ್ನು ಮೆರವಣಿಗೆಯ ಮುಖಾಂತರ ಎತ್ತನ್ನು ಪೂಜಿಸಿ ಅವರ ಮನೆಗೆ ಕರೆತರುತ್ತಾರೆ. ಅಲ್ಲದೆ ಯಾವ ಬಣ್ಣದ ಎತ್ತು ಕರಿ ಹರಿದರೆ ಮುಂಗಾರು ಬೆಳೆ ಕಪ್ಪು ಅಥವಾ ಕೆಂಪು ಎತ್ತು ಹರಿದರೆ ಹಿಂಗಾರು ಬೆಳೆಗಳು ಹುಲುಸಾಗಿ ಬೆಳೆಯುತ್ತದೆ ಎನ್ನುವ ನಂಬಿಕೆ ಇವರದು.

ಅಲ್ಲದೆ ಟಗರುಗಳ ಗುದ್ದಾಟ, ಕೋಳಿಗಳ ಜಗಳವನ್ನು ಇಲ್ಲಿ ಕಾಣಬಹುದು. ಒಟ್ಟಾರೆಯಾಗಿ ಜನಪದ ಆಟಗಳೆಲ್ಲವೂ ದೇಶಿಯ ನೆಲೆಗಳಾಗಿವೆ. ಏಕೆಂದರೆ ಬಹುತೇಕ ಆಟಗಳು ಧಾರ್ಮಿಕ ಉತ್ಸವದ ಅಂಗವಾಗಿಯೇ ಪುರಾತನ ಮತಾಚರಣೆ, ವಿವಾಹಾದಿ ವಿಧಿಕ್ರಿಯೆಗಳು, ಹಾಗೂ ಅಲೌಕಿಕ ಶಕ್ತಿಗಳ ಸಂಬಂಧವಾದ ನಂಬಿಕೆಗಳು ಹಾಗೂ ಕೃಷಿ ಸಂಬಂಧವಾದ ಆಚರಣೆಗಳೊಂದಿಗೆ ತಳಕು ಹಾಕಿಕೊಂಡಿರುವುದನ್ನು ಕರ್ನಾಟಕದ ಯಾವ ಭಾಗದಲ್ಲಿಯೇ ಆಗಲೀ ಕಂಡುಬರುತ್ತದೆ. ಇದಕ್ಕೆ ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವೂ ಹೊರತಲ್ಲ. ಉದಾ: ಓಕುಳಿಯಾಟ, ಹೋಳಿ ಹಬ್ಬದ ಜೊತೆಯಲ್ಲಿ ಬರುವಂತಹುದು. ಎತ್ತಿನ ಗಾಡಿಯಾಟ ಸಂಕ್ರಾಂತಿಯ ಹಬ್ಬದಲ್ಲಿ ಹೆಚ್ಚಾಗಿ

ಜರುಗುತ್ತದೆ. ಓಕುಳಿಯಾಟದಂತಹ ಆಟವು ಶೃಂಗಾರ ಸಂಕೇತವೇ ಆಗಿದ್ದರೂ ಶುಭದ ಸಂಕೇತವಾಗಿಯೂ ದೇವಾಲಯಗಳಲ್ಲಿ ನಡೆದುಕೊಂಡು ಬಂದಿದೆ.

**೩.೧೧ ವೈದ್ಯ ವಿದ್ಯೆ :**

ಜ್ಞಾನ ಮಾನವನಷ್ಟೇ ಪ್ರಾಚೀನವಾದದ್ದು ಮತ್ತು ಮಾನವನೊಂದಿಗೆ ಹುಟ್ಟಿ ಬಂದಿರುವಂತಹದ್ದು ಈ ವೈದ್ಯಕೀಯ ಜ್ಞಾನ ಮಾನವನ ಪ್ರಯತ್ನಗಳು ಬೆಳೆದಂತಲ್ಲಾ ಬೆಳೆಯಿತು. ಈ ಪಾರಂಪಾರಿಕ ವೈದ್ಯಕೀಯ ಜ್ಞಾನ ಒಬ್ಬ ವ್ಯಕ್ತಿಯಿಂದಾಗಲೀ ಒಂದು ಸಮೂಹದಿಂದಾಗಲೀ ಬೆಳೆದು ಬಂದಿರುವಂತಹದ್ದಲ್ಲ. ಈ ಜ್ಞಾನಶಾಖೆಯ ಹಿಂದೆ ಹಲವಾರು ಆದಿವಾಸಿ ಸಮುದಾಯಗಳ ವಿಶಿಷ್ಟವಾದ ಅನುಭವಗಳು ಇವೆ. ಜಗತ್ತಿನ ವೈದ್ಯಕೀಯ ಪರಂಪರೆ ಇರುವ ವೈದ್ಯಪದ್ಧತಿ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲೂ ಕಂಡುಬರುತ್ತದೆ. ಹಿಂದೆ ಇವರು ಹೆಚ್ಚು ಆರೋಗ್ಯವಂತರಾಗಿರಲು ಅವರು ಸೇವಿಸುತ್ತಿದ್ದ ಆಹಾರವೇ ಮೂಲ ಕಾರಣ. ಅನೇಕ ಜಾತಿಯ ಸೊಪ್ಪುಗಳು, ಹಣ್ಣು ಹಂಪಲಗಳನ್ನು, ಆಹಾರಕ್ಕಾಗಿ ಮತ್ತು ಔಷಧಿಗಳಿಗಾಗಿ ಬಳಸಲಾಗುತ್ತಿತ್ತು. ಅವರು ಬಳಸುತ್ತಿದ್ದ ಆಹಾರಗಳಲ್ಲಿ ಪೌಷ್ಟಿಕತೆಯ ಅಂಶವು ಇರುತ್ತಿತ್ತು. ಆಹಾರಕ್ಕೆ ಬಳಸುವ ಸಸ್ಯಗಳ ಬಗೆಗೆ ಸಂಪೂರ್ಣ ಜ್ಞಾನ ಇವರಿಗಿದೆ. ಮಕ್ಕಳಿಂದ ಹಿಡಿದು ಮುದುಕರವರೆಗೆ ಅವರವರ ವಯಸ್ಸಿಗನುಗುಣವಾಗಿ ಆಹಾರವನ್ನು ಸೇವಿಸುವುದು ಕಂಡುಬರುತ್ತದೆ. ಋತುಮತಿ, ಗರ್ಭಿಣಿ, ಬಾಣಂತಿ ಅವರ ಬಗೆಗೆ ಕಾಳಜಿ ಇದೆ.

ಕಾಡಿನಲ್ಲಿ ದೊರೆಯುವ ಹಣ್ಣುಗಳು, ಸೊಪ್ಪು, ಜೇನು, ನಾರು, ಬೇರು, ಮಾಂಸ ಸೇವಿಸುತ್ತಿದ್ದರು. ತಾಮ್ರ, ಹಿತ್ತಾಳೆ, ಹಾಳೆ, ಮಣ್ಣು ಮೊದಲಾದವುಗಳು ವೈದ್ಯ ಪದ್ಧತಿಗೆ ಬರುತ್ತಿದ್ದವು. ಇಂದು ಸರ್ಕಾರಿ ವೈದ್ಯ ಪದ್ಧತಿಯು ತಲೆ ಎತ್ತಿದೆ. ಆದರೂ ಬಾಹುಸಾರ ಕ್ಷತ್ರಿಯರು ನೇರವಾಗಿ ಆಸ್ಪತ್ರೆಗಳಿಗೆ ಹೋಗುವುದಿಲ್ಲ. ಪ್ರಾರಂಭದಲ್ಲಿ ತಮ್ಮ ಪಾರಂಪರಿಕ ವೈದ್ಯ ಪದ್ಧತಿಯ ಮೂಲಕ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಅದರಿಂದ ಗುಣವಾಗದಿದ್ದರೆ ಮಾತ್ರ ವೈದ್ಯರ ಬಳಿ ಹೋಗುತ್ತಾರೆ. ಕಾಡಿನಿಂದ ಸ್ಥಳಾಂತರಗೊಳಿಸುತ್ತಿರುವುದು, ಕಾಡಿನಲ್ಲಿ ಕೈಗಾರಿಕೆಗಳು, ಶಕ್ತಿ ಸ್ಥಾವರಗಳು, ಪೀಟರ್ರ ಕಾರ್ಬನ್, ಗಣಿಗಾರಿಕೆಗಳಿಂದ ಕಾಡು ನಾಶವಾಗುತ್ತದೆ. ಪರಿಸರ ನೈರ್ಮಲ್ಯ ಹಾಳಾಗುವುದಲ್ಲದೆ ಕಾಡಿನಲ್ಲಿ ದೊರೆಯುವ ಔಷಧೀಯ ಗುಣವಿರುವ ಸಸ್ಯಗಳು ಕಡಿಮೆಯಾಗುತ್ತವೆ. ಪ್ರಕೃತಿ ತನ್ನ ಸಹಜ ಸೌಂದರ್ಯವನ್ನು ಕಳೆದುಕೊಳ್ಳುತ್ತಿದೆ.

ಕಾಯಿಲೆ ಬಂದವರಿಗೆ ಹೇಳುವ ಗಾದೆ "ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತದೆಯೇ ಕಾಯ್ಲೆ?" ಎಂದು ಜನಪದ ಗಾದೆ 'ಕೋಣೆ ಮಕ್ಕಳು ಕೊಳೆತೊ, ಬೀದಿ ಮಕ್ಕಳು ಬೆಳೆದು' ಎಂಬ ನಾಣ್ಣುಡಿಯು ಪ್ರಕೃತಿಯು ಎಲ್ಲಾ ವಿದ್ಯಮಾನಗಳಿಗೆ ಮೈಯೊಡ್ಡಿ ಬೆಳೆವವರಿಗಿಂತ ನಾಜೂಕಿನ ಜೀವನ ಶೈಲಿಗೆ ಕಟ್ಟು ಬಿದ್ದವರು ನಿತ್ಯ ನೂರೊಂದು ರೋಗ ಪೀಡನೆಯಿಂದ ಬೀಳುವುದನ್ನು ನೋಡುತ್ತೇವೆ.

ಕೆಲವರು ಊರೂರು ಅಲೆಯುತ್ತಾ ಬದುಕುವವರ ಮಕ್ಕಳು ಯಾವುದೇ ಕಾಯಿಲೆ ಇಲ್ಲದೇ ಇರುತ್ತಾರೆ, ಬೆಳೆದು ದೊಡ್ಡವರಾಗುತ್ತಾರೆ. ಅದೇ ಮನೆಯಲ್ಲಿ ಯಾವುದಾದರೂ ಕೇಳಿದರೆ ನಾಜೂಕಿನಿಂದ ನೋಡಿಕೊಂಡರೂ ಯಾವುದಾದರೂ ರೋಗದಿಂದ ಬಳಲುತ್ತಿರುತ್ತಾರೆ.

ರೋಗವು ಮಾನವನಷ್ಟೆ ಪ್ರಾಚೀನವಾದುದು. ತನ್ನ ದೇಹವನ್ನು ರಕ್ಷಿಸುವ ಹಾದಿಯಲ್ಲಿ ಹಲವಾರು ರೋಗ ರುಜಿನಗಳನ್ನು ಎದುರಿಸುತ್ತ ರೋಗಗಳನ್ನು ಹತ್ತಿಕ್ಕಬೇಕೆಂಬ ಫಲಿತದಲ್ಲಿ ಮಾನವನ ಹೋರಾಟ ಪ್ರಾರಂಭವಾಗುತ್ತದೆ ಎನ್ನಬಹುದು. ಜನಪದರ ವೈದ್ಯಪದ್ಧತಿಯು ಸುಮಾರು ವರ್ಷಗಳಿಂದಲೂ ಜನಪದರ ಬೆನ್ನಿನೊಂದಿಗೆ ಬೆಸೆದುಕೊಂಡು ಬಂದಿದೆ. ಕಾಡಿನಲ್ಲಿ ವಾಸಿಸುವ ಮಾನವರಿಗೆ ಪ್ರಕೃತಿಯೇ ಆರಾಧ್ಯ ದೈವವಾಗಿತ್ತು. ಜನಪದರು ದಿನನಿತ್ಯದ ಜೀವನದಲ್ಲಿ ಇಂತಹ ಹಲವಾರು ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಆಸ್ಪತ್ರೆಗಳ ಸೌಕರ್ಯಗಳು ದೊರೆಯದಿದ್ದರೂ ಅವರ ಅಪಾರ ಅನುಭವದಿಂದ ತಮ್ಮ ಸುತ್ತಮುತ್ತಲ ಪರಿಸರದಲ್ಲಿ ಸುಲಭವಾಗಿ ಸಿಗುವಂತಹ ಔಷಧಿಗಳನ್ನು ತಯಾರಿಸಿಕೊಂಡು ಕಾಯಿಲೆಗಳನ್ನು ಗುಣಪಡಿಸಿಕೊಳ್ಳುತ್ತಿದ್ದಾರೆ.

ಉದಾಹರಣೆಗೆ ಕೆಮ್ಮು ಬಂದರೆ ಕಾಳು ಮೆಣಸನ್ನು ಪುಡಿ ಮಾಡಿ ಎರಡು ಚಮಚ ಜೇನುತುಪ್ಪ, ಅರ್ಧಚಮಚ ಕಾಳುಮೆಣಸಿನ ಮಿಶ್ರಣ ಮಾಡಿ ಬೆಳಿಗ್ಗೆ ಹಾಗೂ ರಾತ್ರಿ ಹೀಗೆ ದಿನಕ್ಕೆ ಎರಡು ಬಾರಿ ಇದನ್ನು ಸೇವಿಸಿದರೆ ಕೆಮ್ಮು ನಿಲ್ಲುತ್ತದೆ. ಮೆಣಸಿನ ಸಾರು ಮಾಡಿಕೊಂಡು ಕುಡಿದರೂ ವಾಸಿಯಾಗುತ್ತದೆ. ಬಾಯಿಯಲ್ಲಿ ಹುಣ್ಣಾದರೆ ಅದಕ್ಕೆ ಬೆಳಗಿನ ಸಮಯದಲ್ಲಿ ತುಳಸಿ ಎಲೆಯನ್ನು ಎರಡರಿಂದ ಮೂರು ಎಲೆ ದಿನಕ್ಕೆ ಒಂದು ಬಾರಿಯಂತೆ ಜಗಿದರೆ ಬಾಯಿಹುಣ್ಣುಗಳು ವಾಸಿಯಾಗುತ್ತವೆ ಎಂಬ ನಂಬಿಕೆ ಇದೆ. ತುಳಸಿ ಎಲೆಯನ್ನು ತಿಂದರೆ ವಾಸಿಯಾಗುತ್ತದೆ.

ಜನಪದ ವೈದ್ಯಕ್ಕೆ ಸಂಬಂಧಿಸಿದಂತೆ ಇವು ಗಮನಾರ್ಹವಾದುವು. ಮಕ್ಕಳಿಗೆ ಅಮ್ಮ ಆದಾಗ ದೊಡ್ಡವರಿಗೆ ದಣಿವಾದಾಗ ಗುಡಿಯಲ್ಲಿಯೇ ಅಥವಾ ಮನೆಯಲ್ಲಿಯೇ ಮಲಗಿರಬೇಕು. ಊರ ಹೊರಗಾಗಲಿ ಅಥವಾ ಆಸ್ಪತ್ರೆಗಾಗಲೀ ಕರೆದೊಯ್ಯಬಾರದು. ಬೇಗ ವಾಸಿಯಾಗುವುದಿಲ್ಲ. ೧೬ ದಿನಗಳವರೆಗೆ ಮನೆಯಲ್ಲಿ ಇದ್ದು ದಿನಾಲೂ ಬೇವಿನಸೊಪ್ಪು, ಅರಿಸಿನ, ಉಪ್ಪುಗಳನ್ನು ಮಿಶ್ರಮಾಡಿ ಮೈಗೆ ಹಚ್ಚಿಕೊಳ್ಳಬೇಕು. ಹೀಗೆ ೫ ದಿನ ಮಾಡಿ ಕೊನೆಯ ದಿನದಂದು ಅಂದರೆ ೫ ನೇ ದಿನ ಊರಮ್ಮ ದೇವರಿಗೆ ಜೋಳದ ಹಿಟ್ಟು, ೨ ಬದನೆಕಾಯಿ, ೨ ಈರುಳ್ಳಿ, ೫ ಹಸಿಮೆಣಸಿನಕಾಯಿ, ಜೊತೆಗೆ ಕಾಯಿ, ಕರ್ಪೂರ, ಬಾಳೆಹಣ್ಣು ತೆಗೆದುಕೊಂಡು ಹೋಗಬೇಕು. ಆವಾಗ ಮೈಮೇಲಿನ ಅಮ್ಮ ದಿನೇ ದಿನೇ ಕಡಿಮೆಯಾಗುತ್ತಾ ಹೋಗುತ್ತದೆ. ನಿಯಮ ಮಾಡುವುದರಿಂದಲೇ ಬೇಗ ಹೋಗುವುದಿಲ್ಲ ಇನ್ನೊಂದು ಅಮ್ಮ ಬಂದಾಗ ಮಾಂಸ ಹೆಚ್ಚು ತಿಂದರೆ ಬೇಗ ಹೋಗುತ್ತವೆ ಎಂದು ಅಜ್ಜಿ ಹೇಳುತ್ತಾಳೆ. ಅಡಿಕೆ ತಿಂದರೆ ಕಾಮಾಲೆ ರೋಗ ಬರುತ್ತದೆ. ಅತಿ ಭೇದಿಯಾದರೆ ಅದಕ್ಕೆ ಕಾಲಿನ ನರಗಳನ್ನು ಹಿಡಿದು (ಬಟ್ಟಿ) ತಿಕ್ಕಬೇಕು. ಮಕ್ಕಳು ಆಟ ಆಡದಿದ್ದರೆ, ಊಟ ತಿಂಡಿಯನ್ನು ಇದ್ದಕ್ಕಿದ್ದಂತೆ ಕಡಿಮೆ ಮಾಡುವುದು, ಹೆದರಿ

ಭಯಪಟ್ಟು ರಾತ್ರಿಯ ವೇಳೆ ಮೂತ್ರ ಮಾಡಿಕೊಳ್ಳುವುದು, ಕೆಟ್ಟ ಕನಸು ಪದೇ ಪದೇ ಕಾಣುವುದು. ಇದಕ್ಕೆ ಕಸಬಾರಿಗೆ ಅಥವಾ ಒಣ ಮೆಣಸಿನಕಾಯಿ, ಉಪ್ಪು, ಕೂದಲು ತೆಗೆದುಕೊಂಡು ಇಳೆ ತೆಗೆದರೆ ತಟ್ಟನೆ ಮಗು ಅಳುವುದನ್ನು ನಿಲ್ಲಿಸುವುದುಂಟು. ನಂತರ ಗಾಬರಿ ಅಥವಾ ಬೆಂಕಿಯ ಬೆಳಕು ಮಕ್ಕಳ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಿ ಅಳುವುದನ್ನು ನಿಲ್ಲಿಸಬಹುದು. ನಂತರ ಊಟ ಮಾಡುತ್ತವೆ. ಆಸರವಾಗಿರುವುದರಿಂದ ಈ ರೀತಿ ಮಾಡಬೇಕಾಗುತ್ತದೆ. ಮೇಲೆ ಹೇಳಿದಂತೆ ಮೂತ್ರ ಮಾಡುವುದು ಮತ್ತು ಪದೇ ಪದೇ ಕೆಟ್ಟ ಕನಸು ಬೀಳುವುದು, ಮತ್ತೆ ಜ್ವರ ಬರುವುದು ಇವುಗಳಿಗೆ ದೇವಸ್ಥಾನದ ಪೂಜಾರಿಗಳ, ಪುರೋಹಿತ ಪೂಜಾರಿಗಳ ಬಳಿ ತಾಯಿತ ಅಥವಾ ಚೀಟುಗಳನ್ನು ಮಕ್ಕಳ ಕೊರಳಿಗೆ, ಕೈಗೆ ಕಟ್ಟಿಸುವುದರಿಂದ ಇವು ಹೋಗುತ್ತವೆ. ಜ್ವರ ಬಂದಾಗ ಚುಟಿಕೆ ಹಾಕಿಸುವುದು ನಮ್ಮ ಸಂಪ್ರದಾಯ, ಮತ್ತು ಭಾನುವಾರ ಅಮಾವಾಸ್ಯೆ ಬಂದರೆ ನಮ್ಮ ತಂದೆಯವರು ಎಲ್ಲರಿಗೂ ಒಂದೊಂದು ಚುಟಿಕೆಯನ್ನು ಹಾಕುತ್ತಿದ್ದರು. ಹೀಗೆ ಜನಪದ ವೈದ್ಯದಲ್ಲಿ ನಂಬಿಕೆ ಮನಸ್ಸಿನ ಮೇಲೆ ಪರಿಣಾಮವನ್ನು ಉಂಟುಮಾಡುತ್ತದೆ. ಆ ಮೂಲಕ ತೊಂದರೆಗಳಿಗೆ ಒಳಗಾಗಿರುವವರಿಗೆ ಆತ್ಮ ವಿಶ್ವಾಸ ಮೂಡಿಸಿ ಮೊದಲಿನಂತಾಗುವುದನ್ನು ಕಾಣಬಹುದು. ಇದಲ್ಲದೆ ಇನ್ನೂ ಹಲವಾರು ರೀತಿಯ ಕಾಯಿಲೆಗಳನ್ನು ನಂಬಿಕೆ ಮತ್ತು ಆಚರಣೆಗಳ ಮೂಲಕವೇ ನಿರ್ಧರಿಸಿಕೊಳ್ಳುತ್ತಾರೆ.

ಚಿಕ್ಕಮಕ್ಕಳಿಗೆ ಅರಿಶಿಣ, ಬೆಳ್ಳುಳ್ಳಿ ಉಪಯೋಗಿಸುವುದು ಸಕ್ಕರೆ ರೋಗಕ್ಕೆ ಹಾಗಲಕಾಯಿ ರಸ, ಅತಿಸಾರಕ್ಕೆ ಹೆಸರು, ದಾಳಿಂಬೆ ಬೀಜ, ಬಿಲ್ಪತ್ರೆ, ಎಳನೀರು, ಬೆಳ್ಳುಳ್ಳಿ ಆರೋಗ್ಯಕ್ಕೆ ಉತ್ತಮವಾದುದು.

ಪರಂಗಿಹಣ್ಣು, ತುಳಸಿ ಎಲೆ ಕೆಮ್ಮು ರೋಗಕ್ಕೆ ಔಷಧಿಯಾಗಿದೆ. ಗರಿಕೆ ಆರೋಗ್ಯದ ದೃಷ್ಟಿಯಲ್ಲಿ ಮುಖ್ಯವಾಗಿದೆ. ಬಿಳುಪು ನಿಲ್ಲಿಸುವುದಕ್ಕೆ ಬಿಳಿ ದಾಸವಾಳದ ಬೇರನ್ನು ೯ ದಿನಗಳ ಕಾಲ ಹಸುವಿನ ಹಾಲಿನಲ್ಲಿ ತೇಯ್ದು ಹಾಳು ಹೊಟ್ಟೆಯಲ್ಲಿ ಕುಡಿಯಬೇಕು. ನಿಂಬೆಹುಳಿ, ಜೇನು, ಸಕ್ಕರೆಯಲ್ಲಿ ಬೆರೆಸಿ ಕುಡಿದರೆ ಕಫ ನೆಗಡಿ ನಿವಾರಣೆ.

**೩.೧೨ ಕಲೆ ಮತ್ತು ಕಲಾವಿದರು**

ನಮ್ಮ ಭಾರತವು ಹಳ್ಳಿಗಳಿಂದ ಕೂಡಿದ ದೇಶ. ಈ ಹಳ್ಳಿಗಳಲ್ಲಿ ವಾಸಿಸುವ ಜನಸಾಮಾನ್ಯರು ಮುಖ್ಯವಾಗಿ ಕೃಷಿಯನ್ನೇ ಅವಲಂಬಿಸಿರುವವರು. ಸದಾ ಸ್ವಾವಲಂಬಿಗಳಾಗಿ ತಮ್ಮ ಬದುಕನ್ನು ಹಸನುಗೊಳಿಸಿಕೊಂಡಿರುವವರು. ಅದರಲ್ಲೂ ಕರ್ನಾಟಕದ ಗ್ರಾಮೀಣ ಜನರ ಬದುಕು ಅತ್ಯಂತ ಪ್ರಾಮಾಣಿಕವಾದುದು.

ಯಾವುದೇ ಪರಿಸರದ ಜನಸಾಮಾನ್ಯರ ಬಾಯಿಂದ ಮೂಡಿಬಂದ ನವರಸಯುಕ್ತವಾದ ಧ್ವನಿಮುತ್ತುಗಳೇ ಜನಪದ ಸಾಹಿತ್ಯರೂಪದಲ್ಲಿ ಹೊರಹೊಮ್ಮಿರುತ್ತವೆ. ಜನಪದ ಸಾಹಿತ್ಯವು ಅಪಾರವಾದ ಸಾಗರವಿದ್ದಹಾಗೆ. ಈ ಬಗ್ಗೆ ಸಂಪೂರ್ಣ ವಿವರಣೆಯನ್ನು ಕೊಡುವುದು ನನ್ನಿಂದ ಆಗಲಿಕ್ಕಿಲ್ಲ. ಕಾರಣ

ಕ್ಷೇತ್ರಕಾರ್ಯವನ್ನು ಕೈಗೊಳ್ಳುವಾಗ ನಾನು ಕೆಲವು ಹಳ್ಳಿಗಳನ್ನು ಪ್ರಮುಖವಾಗಿ ಆಯ್ಕೆಮಾಡಿಕೊಂಡು ನೋಡಿದ್ದೇನೆ. ಹೊರತು ಪಡಿಸಿ ಅದೆಷ್ಟೋ ಜನಪದ ಸಾಹಿತ್ಯ ಹುದುಗಿರಬಹುದು. ದಿನನಿತ್ಯವು ನಮ್ಮ ಜೀವನದಲ್ಲಿ ಬಳಸುವ ಪದಗಳೆಲ್ಲ ಜನಪದ ಸಾಹಿತ್ಯವೇ ಆಗಿರುತ್ತದೆ. ನಮ್ಮ ಪೂರ್ವಜರು ಆಡಿದ ಮಾತುಗಳನ್ನು, ಹಾಡುಗಳನ್ನು ಕೇಳಿ ಬರವಣಿಗೆ ಬಲ್ಲವರು ಬರೆದಿಟ್ಟುಕೊಂಡು ಅದಕ್ಕೊಂದು ಸಾಹಿತ್ಯಿಕ ರೂಪುಕೊಟ್ಟು ಜನಸಾಮಾನ್ಯರ ನಾಲಿಗೆಯಿಂದ ಧ್ವನಿಯಾಗಿ ಬಂದುದನ್ನು ಜನಪದ ಸಾಹಿತ್ಯವೆಂದು ಕರೆದಿರಬೇಕು.

ಈ ಜನಪದ ಸಾಹಿತ್ಯವು ಗ್ರಾಮೀಣ ಮಹಿಳೆ ಹಾಗೂ ಪುರುಷರ ಬಾಯಿಂದಲೂ ಮೂಡಿ ಬಂದವುಗಳಾಗಿವೆ. ಕಾಳು ಹಸನು ಮಾಡುವುದರಿಂದ, ಮದುವೆ, ಮುಂಜಿ ಮುಗಿಯುವವರೆಗೂ ವಿವಿಧ ರೀತಿಯ ಹಾಡುಗಳನ್ನು ನಮ್ಮ ಗ್ರಾಮೀಣ ಮಹಿಳೆಯರು ಹಾಡುವುದನ್ನು  ಬೀಸುವ, ಕುಟ್ಟುವ ಹಾಡುಗಳಲ್ಲದೆ, ಮದುವೆಯ ಸಮಾರಂಭದಲ್ಲಿ ಒಳ್ಳುಕಲ್ಲು ಪೂಜೆ, ಬೀಸುವ ಕಲ್ಲು ಪೂಜೆ, ಹಂದರ ಹಾಕುವುದು, ಹಾಲುಗಂಬ, ಐರಾಣಿಯ ತರುವುದು, ಸುರಿಗೆ ಎರೆಯುವುದು, ನೂಲುಸುತ್ತುವುದು, ಅರಿಷಿಣಿ ಹಚ್ಚುವುದು, ಧಾರೆ ಎರೆಯುವುದು, ಅಕ್ಷತೆ ಹಾಕುವ, ಮದುಮಕ್ಕಳ ಕಾಲು ತೊಳೆಯುವಾಗ, ಸೀಮಂತ, ನಾಮಕರಣ, ಋತುಮತಿಯಾದ ಸಂದರ್ಭದ ಕಾರ್ಯಗಳಲ್ಲಿ ಮಹಿಳೆಯರು ಹಾಡು ಹಾಡುವುದನ್ನು ನಾವು ಕಾಣಬಹುದು.

ಹಾಗೆಯೇ ಹಬ್ಬ ಹರಿದಿನಗಳಲ್ಲಿ ವಿಶೇಷವಾಗಿ ಬಾಹುಸಾರ ಕ್ಷತ್ರಿಯ ಸಮುದಾಯದ ಪುರುಷರು ಕಾರ ಹುಣ್ಣಿಮೆಯ ಹಾಡು, ಹೋಳಿ ಹುಣ್ಣಿಮೆಯ ಹಾಡು, ಭಜನೆ ಹಾಡು, ಲಾವಣಿ ಪದಗಳು ಹೀಗೆ ವಿವಿಧ ಪ್ರಕಾರದ ಹಾಡುಗಳನ್ನು ಅಭಂಗಗಳನ್ನು ಹಾಡುವುದನ್ನು ಕಾಣುತ್ತೇವೆ. ಗೊಂದಲಿಗರ ಕಥೆ ಹೇಳುವ ಹಾಡುಗಳನ್ನು ಈ ಸಮುದಾಯದವರು ರೂಢಿಸಿಕೊಂಡು  ಹಾಡುತ್ತಾ ಬಂದಿದ್ದಾರೆ.

ದೈವಿ ಆರಾಧನೆಗಾಗಿ ಹುಟ್ಟಿಕೊಂಡ ಈ ಹಾಡುಕುಣಿತಗಳಲ್ಲಿ ಕೆಲವು ಕಾಲಗತಿಯಲ್ಲಿ ಮನರಂಜನೆಯ ಮಾಧ್ಯಮವಾದುವು, ಮತ್ತೆ ಕೆಲವು ಉಪಜೀವನದ ಮಾರ್ಗವಾದವು. ದೇವರ ಆರಾಧನೆಗಿರಲಿ, ದುಡಿಮೆಯ ಬೇಸರ ಪರಿಹಾರಕ್ಕಿರಲಿ, ನಮ್ಮ ಜನ ಸೃಷ್ಟಿಸಿದ ಸಾಹಿತ್ಯ ಮತ್ತು ಕಲೆಗಳ ಮೌಲ್ಯ ಜನರ ಅಸಾಧಾರಣ ಪ್ರತಿಭೆಯ ವಿರಾಟ ದರ್ಶನವೇ ಅಗುತ್ತದೆ. ಅವರ ಒಂದೊಂದು ನುಡಿಗೂ, ಒಂದೊಂದು ಕಲೆಗೂ ಅರ್ಥಪೂರ್ಣ ಹಿನ್ನೆಲೆಯಿದೆ. ಸಮಷ್ಟಿ ಕ್ಷೇಮದ ಚಿಂತನೆಯಿದೆ. 'ಚದುರರ್ ನಿಜದಿಂ ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂಬ ಕವಿರಾಜ ಮಾರ್ಗಕಾರನ ಮಾತು ಸಾಹಿತ್ಯಕ್ಕಿಂತಲೂ ಜನಪದ ಕಲಾಪ್ರಪಂಚಕ್ಕೆ ಅತ್ಯುಚಿತವಾಗಿ ಅನ್ವಯಿಸುತ್ತದೆ. ಜನಪದ ಕಲಾವಿದರು, ವ್ಯವಸ್ಥಿತವಾದ ಯಾವ ಶಾಲೆಗೆ ಹೋಗದಿದ್ದರೂ ಅವರ ಸೃಜನಸಾಮರ್ಥ್ಯ ಹತ್ತಾರು, ನಾಲೆಗಳ ಮೂಲಕ ತುಂಬು ಹೊಳೆಯಾಗಿ ಪ್ರವಹಿಸುವುದನ್ನು ಕಾಣಬಹುದು. "ಅಗತ್ಯವೇ ನಿರ್ಮಿತಿಯ ತಾಯಿ" ಎಂಬ ಆರ್ಷವಾಣಿಯನ್ನು ಜನಪದ ಕಲೆಗಳು ನೆನಪಿಗೆ ತಂದುಕೊಡುತ್ತವೆ.

ಇಂತಹ ಸೃಜನಾತ್ಮಕ ಸಾಹಿತ್ಯ ಮತ್ತು ಕಲೆಗಳ ಗತಿ ಕ್ರಮೇಣ ಏನಾಯಿತು? ಆಧುನಿಕ ನಾಗರೀಕತೆ ತಲೆಯೆತ್ತುತ್ತಿದ್ದಂತೆ ಈ ಜನಪದ ಸಾಹಿತ್ಯ ಮತ್ತು ಕಲೆಗಳಿಗೆ ಗ್ರಹಣ ಬಡಿಯತೊಡಗಿತು. ಇದನ್ನೇ ಆರಾಧಿಸಿಕೊಂಡು ಬಂದ ಜನರಿಗೆ ಸಾರ್ವಜನಿಕ ಮನ್ನಣೆ ಕಡಿಮೆಯಾಯಿತು. ನವೀನ ನಾಟಕ, ಸಂಗೀತ, ಚಲನಚಿತ್ರಗಳ ಬಿರುಗಾಳಿಯಿಂದ ಎದ್ದ ಧೂಳಿನಲ್ಲಿ ಬಹುಪಾಲು ಜನಪದ ಕಲೆಗಳು ಕೊಳೆತು ಹೋದವು. ಇತ್ತೀಚಿನ ಪರಿಸ್ಥಿತಿಯಲ್ಲಿ ಒಂದು ಆಶಾಭಾವನೆ ಮೂಡುತ್ತಿದೆ. ಬತ್ತಿ ಹೋಗುತ್ತಿದ್ದ ಜಾನಪದ ಜ್ಯೋತಿಯನ್ನು ಮತ್ತೆ ಬೆಳಗಿಸುವ ಪ್ರಯತ್ನ ಆರಂಭವಾದಂತಿದೆ. ಕಳೆದ ಮೂರು ನಾಲ್ಕು ದಶಕಗಳಿಂದ ಜನಪದ ಸಾಹಿತ್ಯ ಸಂರಕ್ಷಣೆಗೆ ಸಾಕಷ್ಟು ಜನಕೆಲಸ ಮಾಡುತ್ತಿದ್ದಾರೆ. ಈ ಕ್ಷೇತ್ರದಲ್ಲಿ ನಮ್ಮ ವಿಶ್ವವಿದ್ಯಾಲಯಗಳು ಇಟ್ಟಿರುವ ಹೆಜ್ಜೆ ಗಮನಾರ್ಹವಾದುದು. ಜನಪದ ಗೀತೆಗಳ ಒಳ್ಳೊಳ್ಳೆಯ ಸಂಗ್ರಹಗಳು, ವಿಮರ್ಶಾ ಲೇಖನಗಳು, ಕಥಾ ಸಂಗ್ರಹಗಳು ಸಾಕಷ್ಟು ಸಂಖ್ಯೆಯಲ್ಲಿ ಹೊರಬರುತ್ತಿವೆ.

ಮೊದಲ ಹೆಜ್ಜೆಯಾಗಿ ಕರ್ನಾಟಕದ ಮೂಲೆ ಮೂಲೆಯಲ್ಲಿರುವ ಜನಪದ ಕಲೆಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಜಾನಪದ ಪರಿಷತ್ತು ವ್ಯವಸ್ಥಿತ ಕಾರ್ಯಕ್ರಮವೊಂದನ್ನು ಹಾಕಿಕೊಂಡಿತು. ಇದಕ್ಕಾಗಿ ಜಾನಪದ ವಿಷಯವನ್ನೇ ವಿಶೇಷವಾಗಿ ಅಧ್ಯಯನ ಮಾಡಿ ಸ್ನಾತಕೋತ್ತರ ಪದವಿ ಪಡೆದ ಕೆಲವು ಯುವಕರನ್ನು ನೇಮಿಸಿ ಮೂರು ನಾಲ್ಕು ತಿಂಗಳ ಕಾಲ ನಡೆದ ಈ ಕ್ಷೇತ್ರಕಾರ್ಯದಲ್ಲಿ ೩೨ ಜನ ಮಾಹಿತಿ ಸಂಗ್ರಹಕಾರರನ್ನು ಗ್ರಾಮಾಂತರ ಪ್ರದೇಶದಲ್ಲಿ ಪ್ರವಾಸ ಮಾಡಿ ಸುಮಾರು ೧೦,೦೦೦ ಕ್ಕೂ ಹೆಚ್ಚು ಕಲಾತಂಡಗಳನ್ನು ಭೇಟಿ ಮಾಡಿ ೧೪೫ ಕಲೆಗಳ ಬಗ್ಗೆ ಸಾಧ್ಯವಾದಷ್ಟು ಮಾಹಿತಿ ಸಂಗ್ರಹಿಸಿದ್ದಾರೆ. ಜನಪದ ಕಲಾಪ್ರಪಂಚ ಜನಜೀವನದಷ್ಟೇ ವಿಶಾಲವಾದದ್ದು, ವ್ಯಾಪಕವಾದದ್ದು, ಪ್ರಾಚೀನವಾದದ್ದು. ಅಯಾಕಾಲದ ಮಾನವನ ಅಗತ್ಯಗಳು ಕಲೆಗಳ ಉಗಮ, ವಿಕಾಸ ವೈವಿಧ್ಯಗಳಿಗೆ ಕಾರಣವಾಗಿವೆ. ನಿಜವಾದ ಕಲೆ, ಪುಸ್ತಕ ಜ್ಞಾನದಿಂದಾಗಲಿ, ಶಾಲೆಯ ಕಲಿಕೆಯಿಂದಾಗಲಿ ಆವಿರ್ಭವಿಸುವುದಿಲ್ಲ. ಅಂತಃಸ್ಫೂರ್ತಿಯಿಂದ ಲೋಕಾನುಭವದಿಂದ ಉದಯವಾಗತಕ್ಕದ್ದು ಎಂಬುದಕ್ಕೆ ಇವು ನಿದರ್ಶನವಾಗಿವೆ.

ಈ ಹಿನ್ನೆಲೆಯಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದವರ ಪ್ರದರ್ಶನ ಕಲೆಗಳನ್ನು ಇಲ್ಲಿ ನೋಡಬಹುದು. ಇಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದವರ ಪ್ರದರ್ಶನ ಕಲೆ ಎಂದಕೊಡಲೇ ಒಂದು ಗ್ರಾಮದಲ್ಲಿ ಕೇವಲ ಒಂದು ಸಮುದಾಯದವರು ಮಾತ್ರ ತಮ್ಮ ಕಲೆಯನ್ನು ಪ್ರದರ್ಶಿಸುವುದು ದುರ್ಲಭ. ಕಾರಣ ಇವರು ಇತರೆ ಸಮುದಾಯದವರೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದು ಪರಸ್ಪರ ಅನ್ಯೋನ್ಯತೆಯಿಂದ ಸಾಮರಸ್ಯದಿಂದ ಜೀವನ ನಡೆಸಿಕೊಂಡು ಬಂದವರಾಗಿದ್ದು ಕಲಾಪ್ರದರ್ಶನದೊಳಗೆ ಒಮ್ಮೊಮ್ಮೆ ಪ್ರಮುಖ ಕಲಾವಿದನಾಗಿ ಕಂಡುಬಂದರೆ, ಅಂದರೆ ತಂಡದ ನಾಯಕನಾಗಿ ಕಂಡುಬಂದು ಮತ್ತೊಮ್ಮೆ ಒಂದು ಪ್ರದರ್ಶನ ಕಲಾತಂಡದಲ್ಲಿ ಸಂಗಡಿಗನೂ ಆಗಿರಬಹುದು. ಬಾಹುಸಾರ ಕ್ಷತ್ರಿಯ ಸಮುದಾಯದವರು ಇತರೆ ಸಮುದಾಯದವರೊಡಗೂಡಿ, ನಾಟಕ ಪ್ರದರ್ಶನ, ಕೋಲಾಟ, ಕರಡಿಮಜಲು, ಡೊಳ್ಳು ಕುಣಿತದಲ್ಲಿ ಪಾಲ್ಗೊಂಡು ಕಲೆಯನ್ನು

ಆರಾಧಿಸಿಕೊಂಡು ಬಂದಿರಬಹುದಾದ ಸಾಧ್ಯತೆಗಳು ಇಲ್ಲಿ ಹೆಚ್ಚು ಕಂಡುಬರುತ್ತವೆ. ಆದ್ದರಿಂದ ಕೇವಲ ಬಾಹುಸಾರ ಕ್ಷತ್ರಿಯ ಸಮುದಾಯದವರೊಂದೇ ಯಾವುದೇ ಕಲಾಪ್ರದರ್ಶನದಲ್ಲಿ ಇದ್ದಾರೆ ಎಂದಾಗಲಿ ಅಥವಾ ಇತರರ ಜೊತೆ ಸೇರಿರುವುದಿಲ್ಲ ಎಂದಾಗಲಿ ತಿಳಿದುಕೊಳ್ಳುವುದು ಉಚಿತವೆನಿಸುವುದಿಲ್ಲ. ಒಟ್ಟಾರೆ ಸಮುದಾಯದವರು ಇಂತಹ ಎಲ್ಲಾ ಕಲಾಪ್ರಕಾರಗಳನ್ನು ಇದುವರೆಗೂ ಹೆಚ್ಚಿನ ರೀತಿಯಲ್ಲಿ ಪ್ರದರ್ಶನ ಮಾಡಿಕೊಂಡು ಬಂದಿದ್ದಾರೆ ಎನ್ನುವುದು ವಿಶೇಷ.

ಹೀಗೆ ಪ್ರತಿಯೊಬ್ಬರಲ್ಲಿಯೂ ಒಂದೊಂದು ಕಲೆಯು ಇರುತ್ತದೆ. ಅದನ್ನು ಸೂಕ್ತ ಸಮಯದಲ್ಲಿ ಹೊರಹಾಕುವ ಪ್ರಯತ್ನ ಮಾಡಬೇಕು. ಕಲೆಯನ್ನು ಸರಿಯಾಗಿ ಬಳಸಿಕೊಂಡು ಹೊರಗಿನ ಪ್ರಪಂಚಕ್ಕೆ ಅನಾವರಣಗೊಳಿಸಿದಾಗ ಅದಕ್ಕೆ ಒಂದು ಮೆರಗು ಬರುತ್ತದೆ. ಆಗ ಆ ಕಲಾಭಿಸಕ್ತಿ ಎಂಥದ್ದು ಎಂದು ತಿಳಿಯುತ್ತದೆ. ಕಲೆಯು ಮಾನವನ ಹುಟ್ಟುಗುಣ, ಯಾವುದಾದರೊಂದು ಕಲೆಯು ಆತನಲ್ಲಿ ಮನೆಮಾಡಿರುತ್ತದೆ. ಇಂತಹ ಜನಪದ ಕಲೆಗಳನ್ನು ಅವುಗಳ ಪರಿಸರ ಸಂದರ್ಭಗಳಿಂದ ಹೊರತಾಗಿ ಅಥವಾ ಬೇರ್ಪಡಿಸಿ ನೋಡಲಾಗುವುದಿಲ್ಲ. ಕಾರಣ ಇಲ್ಲಿ ಶಿವಮೊಗ್ಗ ಜಿಲ್ಲೆಯ ಪರಿಸರದ ಒಟ್ಟಾರೆ ಪ್ರದರ್ಶನ ಕಲೆಗಳೊಂದಿಗೆ ಬಾಹುಸಾರ ಕ್ಷತ್ರಿಯ ಸಮುದಾಯವು ಹಾಸುಹೊಕ್ಕಾಗಿ ಬೆರೆತುಕೊಂಡು ಇತರರೊಡಗೂಡಿ ಪ್ರದರ್ಶಿಸುತ್ತಾ ಬಂದಿದ್ದಾರೆ.*

**ಭಜನೆ**

ದೈವಾರಾಧನೆಯಲ್ಲಿ ಭಜನೆಗೆ ಮಹತ್ವವಾದ ಸ್ಥಾನವಿದೆ. ದೇವರನ್ನು ಕುರಿತು ಒಂಟಿಯಾಗಿಯೋ ಗುಂಪಿನಲ್ಲೋ ಭಕ್ತಿಯಿಂದ ಸ್ತುತಿಸುವ ಕ್ರಮಕ್ಕೆ 'ಭಜನೆ' ಎನ್ನುತ್ತಾರೆ. ಕರ್ನಾಟಕದ ಬಹುತೇಕ ಹಳ್ಳಿಗಳಲ್ಲಿ ಭಜನಾಮಂಡಳಿಗಳಿವೆ. ಭಜನೆಯಲ್ಲಿ ಮಕ್ಕಳಿಂದ ಮುದುಕರವರೆಗೆ ಎಲ್ಲಾ ವಯಸ್ಸಿನವರೂ ಸೇರಿಕೊಳ್ಳಬಹುದು. ಹಾರ್ಮೋನಿಯಂ, ತಾಳ, ತಬಲ, ದಮ್ಮಡಿ, ಏಕತಾರಿ, ಮುಂತಾದ ವಾದ್ಯಗಳ ಹಿನ್ನೆಲೆಯಲ್ಲಿ ದೇವರಸ್ತುತಿ, ತತ್ವಶೀಲತೆ, ವಚನ ಮೊದಲಾದವನ್ನು ಹಾಡುತ್ತಾರೆ. ಭಜನೆ ಪ್ರಾರಂಭಿಸುವಾಗ ಮತ್ತು ಪ್ರತಿಯೊಂದು ಹಾಡು ಪದ ಮುಗಿದ ಕೂಡಲೇ ಶಿವಭಜನೆಯಲ್ಲಾದರೆ 'ಜಯಾಜಯ ನಮಃ ಪಾರ್ವತೀ ಪತೇ' ಎಂದು ಮುಖಂಡನಾದವನು ಹೇಳಿದರೆ ಉಳಿದವರು 'ಹರಹರ ಮಹಾದೇವ' ಎಂದು ಒಟ್ಟಿಗೆ ಹೇಳುತ್ತಾರೆ.

ಶಿವಮೊಗ್ಗ ನಗರದಲ್ಲಿ ಮತ್ತು ಶಿವಮೊಗ್ಗ ತಾಲ್ಲೂಕಿನಲ್ಲಿ ಅನೇಕ ಭಜನಾ ಮಂಡಳಿಗಳನ್ನು ನಾವು ನೋಡುತ್ತೇವೆ. ಭಜನಾ ಮಂಡಳಿಗಳು ಭಜನೆಯ ಮುಖಾಂತರ ಶಿವಮೊಗ್ಗ ನಗರದ ಜನರಿಗೆ ಆಧ್ಯಾತ್ಮಿಕ ರುಚಿಯನ್ನು ತೋರಿಸುತ್ತಾ ಮನರಂಜನೆಯನ್ನು ಒದಗಿಸುತ್ತಾ ಸಾಗುತ್ತಿದ್ದಾರೆ.

ಅಡಿಟಿಪ್ಪಣಿ : ಕರ್ನಾಟಕದ ಜನಪದ ಕಲೆಗಳು : ಗೊ.ರು.ಚನ್ನಬಸಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**ಭಜನೆ :– ಶಿವಮೊಗ್ಗ ಬಾಹುಸಾರ ಕ್ಷತ್ರಿಯ ಸಮಾಜದ ಭಜನಾ ಮಂಡಳಿ**

ಶಿವಮೊಗ್ಗೆಯಲ್ಲಿ ಪಂಢರಪುರದ ಸಂಪ್ರದಾಯದಂತೆ ಮರಾಠಿ ಭಜನೆಯನ್ನು ಸುಮಾರು ೮೫ ವರ್ಷಗಳಿಗೂ ಹಿಂದೆ ಆರ್.ಟಿ. ರಾಮಪ್ಪ ರಂಗಧೋಳ್ ಇವರು ತಮ್ಮ ಸ್ನೇಹಿತರೊಂದಿಗೆ ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೆ ಪ್ರತಿ ವಾರ ಭಜನೆಗಳು (ಮೊದಲು ಶುಕ್ರವಾರ ರಾತ್ರಿ, ನಂತರ ಭಾನುವಾರ ಸಂಜೆ) ಶ್ರೀ ತುಳಜಾಭವಾನಿ ಮಂದಿರದಲ್ಲಿ ನಡೆಯುತ್ತಿತ್ತು. ಅಲ್ಲದೇ ಸಂತ ಜ್ಞಾನೇಶ್ವರ ಮಹಾರಾಜರ ಪುಣ್ಯತಿಥಿ ಪ್ರಯುಕ್ತ ಕಾರ್ತೀಕ ಬಹುಳದಲ್ಲಿ ೧೨ ದಿನ "ಜ್ಞಾನೇಶ್ವರಿ ಗ್ರಂಥದ ಸಾಮೂಹಿಕ ಪಾರಾಯಣ", ಕೊನೆಯಲ್ಲಿ ಉತ್ಸವವನ್ನು ಏರ್ಪಡಿಸುತ್ತಾರೆ. ಬಾಹುಸಾರ ಕ್ಷತ್ರಿಯ ಸಮಾಜ ಮತ್ತು ಭಜನಾ ಮಂಡಳಿ ವತಿಯಿಂದ ಪ್ರತಿವರ್ಷ ಶ್ರೀರಾಮನವಮಿ ಮತ್ತು ದಶಮಿಗಳಲ್ಲಿ ಅದ್ದೂರಿಯಾಗಿ ದಿಂಡಿ ಉತ್ಸವವನ್ನು ನಡೆಸಲಾಗುತ್ತಿದೆ. ಸ್ಥಳೀಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವರು. ಪ್ರತಿವರ್ಷದ ಡಿಸೆಂಬರ್ ಕೊನೆಯಲ್ಲಿ ಭಾನುವಾರದಂದು ಶಿವಮೊಗ್ಗೆಯ ಸಮೀಪ ಪಿಳ್ಳಂಗೆರೆಗೆ ಪಾದಯಾತ್ರೆಯಿಂದ ಹೋಗಿ ಶ್ರೀ ರಂಗನಾಥ ಸ್ವಾಮಿ ಮಂದಿರದಲ್ಲಿ ಭಜನೆ ಕೀರ್ತನೆಗಳನ್ನು ನಡೆಸಲಾಗುತ್ತಿದೆ. ಅಲ್ಲದೇ ಪರಸ್ಥಳಗಳಲ್ಲಿ ನಡೆಯುವ ದಿಂಡಿ ಉತ್ಸವಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಶಿವಮೊಗ್ಗೆಯ ಬಾಹುಸಾರ ಕ್ಷತ್ರಿಯ ಸಮುದಾಯದವರ ಭಜನಾ ಮಂಡಳಿಯವರು ಸಕ್ರಿಯವಾಗಿ ಭಾಗವಹಿಸುವರು.

**ಭಾವಸಾರ ಕ್ಷತ್ರಿಯ ಭಜನಾ ಮಂಡಳಿ, ತುಳಜಾ ಭವಾನಿ ರಸ್ತೆ, ಶಿವಮೊಗ್ಗ**

| ಕ್ರಸಂ | ಹೆಸರು | | ವೃತ್ತಿ |
|---|---|---|---|
| ೧ | ಆರ್. ಹನುಮಂತರಾವ್ | – | ಸಹಕಾರ ಸಂಘದ ನಿವೃತ್ತ ಕಾರ್ಯದರ್ಶಿ |
| ೨ | ಆರ್. ತುಕಾರಾಮರಾವ್ | – | ತಬಲಾ ಕಲಾವಿದರು ಮತ್ತು ಟೈಲರ್ |
| ೩ | ರಾಮರಾವ್ ರಂಗಧೋಳ್ | – | ರಿದಂ ಪ್ಯಾಡ್ ತಬಲಾ ಕಲಾಕಾರರು ಮತ್ತು ಟೈಲರ್ |
| ೪ | ವಿಠಲರಾವ್ ರಂಗಧೋಳ್ (ತುಕಾರಾಮರಾವ್ ಮಗ) | – | ಎಂ.ಬಿ.ಎ. ವಿದ್ಯಾಭ್ಯಾಸವನ್ನು ಇತ್ತೀಚೆಗೆ ಮುಗಿಸಿದ್ದಾರೆ |
| ೫ | ಹೆಚ್.ಕೆ. ರಂಗನಾಥ್ | – | ನಿವೃತ್ತ ನೌಕರರು. ಎಂ.ಪಿ.ಎಂ. ಭದ್ರಾವತಿ |
| ೬ | ಆರ್.ಟಿ. ರಂಗನಾಥ್ ಬಿನ್ ಆರ್.ಟಿ. ತುಳಜಪ್ಪ | – | ಜಮೀನ್ದಾರರು |
| ೭ | ಪಾಂಡುರಂಗರಾವ್ ಟಿ.ಎನ್ | – | ಜವಳಿ ವ್ಯಾಪಾರಿಗಳು |
| ೮ | ಎಂ. ಎಸ್. ನಿಂಗೋಜಿರಾವ್ | – | ಟೈಲರ್ |
| ೯ | ಜಿ.ಎನ್. ಶಿವಾನಂದ | – | ಟೈಲರ್ |
| ೧೦ | ಜಿ.ಎಸ್. ಮಂಜುನಾಥರಾವ್ | – | ಟೈಲರ್ |

| ೧೧ | ನವಲೆ ನಾಗರಾಜ | – | ನಿವೃತ್ತ ಸರ್ಕಾರಿ ನೌಕರರು |
|---|---|---|---|
| ೧೨ | ಎಲ್. ನಾಗರಾಜರಾವ್ | – | ಪೈಂಟರ್ |
| ೧೩ | ಕೆ.ಗಣಪತಿರಾವ್ | – | ಟೈಲರ್ |
| ೧೪ | ಶ್ರೀನಿವಾಸರಾವ್ ಭೊಂಗಾಳೆ | – | ನಿವೃತ್ತ ಸರ್ಕಾರಿ ನೌಕರರು |
| ೧೫ | ಎ.ಎಸ್. ಜಗದೀಶ್ | – | ಜವಳಿ ವ್ಯಾಪಾರಿಗಳು |
| ೧೬ | ಎಂ.ಎಸ್. ಗಣೇಶರಾವ್ | – | ಜವಳಿ ವ್ಯಾಪಾರಿಗಳು |
| ೧೭ | ಮಾಂಡ್ರೆ ಗಣೇಶರಾವ್ | – | ಖಾಸಗಿ ನೌಕರಿ |
| ೧೮ | ಕೇಶವಮೂರ್ತಿ ಗೋಂದ್ಕರ್ | – | ನಿವೃತ್ತ ಸೈನಿಕರು |
| ೧೯ | ಎಂ. ಆರ್. ಗೋಪಾಲರಾವ್ | – | ಜವಳಿ ವ್ಯಾಪಾರಿಗಳು |
| ೨೦ | ಗಿರೀಶ್ ಕುಂಟೆ | – | ಟೈಲರ್ |
| ೨೧ | ಟಿ.ಎ.ಜೈ ಶಂಕರ್ | – | ವ್ಯಾಪಾರಿಗಳು |
| ೨೨ | ಎನ್. ಆರ್. ರಾಘವೇಂದ್ರ | – | ಟೈಲರ್ |
| ೨೩ | ತೇಲ್ಕರ್ ಮಲ್ಲಿಕಾರ್ಜುನರಾವ್ | – | ಮೆಕಾನಿಕ್ |
| ೨೪ | ತೇಲ್ಕರ್ ಲೋಕೇಶರಾವ್ | – | ಮೆಕಾನಿಕ್ |
| ೨೫ | ಟಿಕಾರೆ ರಾಘವೇಂದ್ರ | – | ಟೈಲರ್ |
| ೨೬ | ಎಂ.ಎನ್. ಸುಬ್ರಮಣ್ಯರಾವ್ | – | ವಾಚ್,ಮೊಬೈಲ್ ವ್ಯಾಪಾರಿಗಳು |
| ೨೭ | ಕೆ.ಆರ್. ಜಯಪ್ರಕಾಶ್ | – | ವ್ಯಾಪಾರಿಗಳು |
| ೨೮ | ವಿಜಯಕುಮಾರ ರಂಗಧೋಳ್ | – | ಸಂಗೀತ ಕಲಾವಿದರು |
| ೨೯ | ಎ. ಮಂಜುನಾಥರಾವ್ ಮಾಳದಕರ | – | ಮೆಕಾನಿಕ್ |
| ೩೦ | ಪಿ.ಗಣೇಶರಾವ್ | – | ಹೊಲಿಗೆ ಮಿಷನರಿ ರಿಪೇರಿಗಾರರು |
| ೩೧ | ನವಲೆ ಪುಂಡಲೀಕರಾವ್ | – | ಟೈಲರ್ |
| ೩೨ | ದಾಮೋದರ ಜಿ.ಎ. | – | ಟೈಲರ್ |
| ೩೩ | ಈಶ್ವರಪ್ಪ ಆರ್. | – | ನಿವೃತ್ತ ಖಾಸಗಿ ನೌಕರರು |
| ೩೪ | ಪಿ.ಎಲ್. ಸತ್ಯನಾರಾಯಣರಾವ್ | – | ನಿವೃತ್ತ ಸರ್ಕಾರಿ ನೌಕರರು |
| ೩೫ | ರಾಜೇಶ ಕಟಾರೆ | – | ಸೈಕಲ್ ವ್ಯಾಪಾರಿಗಳು |
| ೩೬ | ಪ್ರೇಮಾಬಾಯಿ | – | ರೆಡಿಮೇಡ್ ವ್ಯಾಪಾರಿಗಳು |

ಸಾಹಿತ್ಯ, ಸಂಗೀತ, ಕಲೆಗಳು ವ್ಯಕ್ತಿಯೊಬ್ಬನ ನಿರ್ಮಿತಿಗಳೇ ಆಗಿದ್ದು ರಚನಾಕಾರನಿಗೆ ಮತ್ತು ಸಹೃದಯರಿಗೆ ತತ್‌ಕ್ಷಣದಲ್ಲಿ ಆನಂದ, ಸಂತೋಷ, ರಸಾನಂದಗಳನ್ನುಂಟು ಮಾಡುತ್ತವೆ. ಅಲ್ಲದೆ ಇವು ಬ್ರಹ್ಮಾನಂದ ಸ್ವರೂಪದವುಗಳಾಗಿ ಮೋಕ್ಷವನ್ನು ಗುರಿಯಾಗಿಸಿಕೊಂಡಿರುತ್ತಾರೆ. ಜನಪದರು ಈ ಕಲೆಗಳನ್ನು ಎಂದಿನಿಂದ ಕರಗತ ಮಾಡಿಕೊಂಡರು ಎಂಬುದಕ್ಕೆ ಗ್ರಂಥಸ್ಥ ಆಧಾರಗಳಿಲ್ಲ. ಹಾಗೆ ಹುಡುಕುವುದು ತಪ್ಪು. ಆದರೆ ಅವರ ಬದುಕೇ ಇದಕ್ಕೆ ಆಧಾರವಾಗಿ ನಿಲ್ಲುತ್ತದೆ.

ಆದಿ ಮಾನವನಿಗೆ ಬೇಟೆ ಸಿಕ್ಕಾಗಿನ ಸಂತೋಷ ಮತ್ತು ಅದನ್ನು ಸುಡುವಾಗ ಬೆಂಕಿಯ ಸುತ್ತ ಎಲ್ಲರೂ ಚಪ್ಪಾಳೆಯನ್ನು ತಟ್ಟುತ್ತಾ ನಲಿದಾಡುವಾಗಿನ ಆನಂದವೇ ಕಲೆಯಾಗಿ ಅರಳಿದೆ ಎಂಬುದು ಎಲ್ಲರೂ ಒಪ್ಪತಕ್ಕ ಸಂಗತಿಯೇ ಆಗಿದೆ. ಗಾಳಿ, ಮಳೆ, ಸಿಡಿಲುಗಳ ಭಯದಿಂದ ಆರಾಧನೆ, ಪೂಜೆ, ಅರ್ಪಣೆಗಳಿಂದಲೂ ಈ ಕಲೆಗಳು ಜನ್ಮ ತಾಳಿವೆ ಎಂಬುದರಲ್ಲಿ ಎರಡು ಮಾತಿಲ್ಲ. ಸಂತೋಷ ಮತ್ತು ಕಷ್ಟ ಪರಿಹಾರಕ್ಕಾಗಿ ಜನ್ಮ ತಾಳಿದ ಜನಪದ ಕಲೆ ಶಿಷ್ಟ ಜನಪದ ಕಲೆಗಿಂತ ಪ್ರಾಚೀನವಾದುದು.

ಬಾಹುಸಾರ ಕ್ಷತ್ರಿಯ ಸಮುದಾಯದ ಕಲಾಕಾರರು ವ್ಯಕ್ತಿಗತ ಆಸಕ್ತಿ ಹವ್ಯಾಸಗಳಿಂದ ಜನಪದ ಕಲೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡು ಪ್ರಸಿದ್ಧಿ, ಪ್ರಶಸ್ತಿ ಉತ್ತಮ ಅವಕಾಶಗಳನ್ನು ಪಡೆದುಕೊಂಡಿದ್ದಾರೆ ಎಂಬುದು ಈ ಪ್ರಬಂಧಕ್ಕಾಗಿ ಕೈಗೊಂಡ ಕ್ಷೇತ್ರಕಾರ್ಯದಿಂದಾಗಿ ಮನದಟ್ಟಾದ ಅಂಶವಾಗಿದೆ.

ಕರ್ನಾಟಕದಲ್ಲಿ ಲಿಂಗಾಯತ, ಕುರುಬ, ದಲಿತ ಸಮುದಾಯದಷ್ಟು ಸಂಖ್ಯಾಬಲದ ಬಾಹುಸಾರ ಕ್ಷತ್ರಿಯ ಸಮುದಾಯವಿಲ್ಲ. ಅದೇ ರೀತಿಯಾಗಿ ಶಿವಮೊಗ್ಗ ಜಿಲ್ಲೆಯ ಭದ್ರಾವತಿ, ಸಾಗರ, ಶಿಕಾರಿಪುರ, ಸೊರಬ, ತೀರ್ಥಹಳ್ಳಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದು, ಇತರೆಡೆ ಕಡಿಮೆ ಪ್ರಮಾಣದಲ್ಲಿ ಇದ್ದಾರೆ.

ಆಧುನಿಕ ಸಂಶೋಧನೆಗಳಿಂದ, ವ್ಯಾವಹಾರಿಕವಾದ ಒತ್ತಡದ ಇಂದಿನ ಜೀವನ ಶೈಲಿಯಲ್ಲಿ ಜನಪದ ಕಲೆ, ಸಾಹಿತ್ಯ ನಶಿಸಿ ಹೋಗುತ್ತಿರುವ ಸಂದರ್ಭದಲ್ಲಿ ಸಂಘ–ಸಂಸ್ಥೆಗಳು, ವಿಶ್ವವಿದ್ಯಾಲಯಗಳು ಅದನ್ನು ಉಳಿಸಿಕೊಳ್ಳಲು ಹರಸಾಹಸ ಪಡುತ್ತಿರುವಂತೆಯೇ, ಕಲಾಕಾರರೂ ಸಹ ತಮ್ಮ ಕಲೆಯನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿದ್ದಾರೆ ಎಂಬುದು ಸಮಾಧಾನಕರವಾದ ಸಂಗತಿಯಾಗಿದೆ. ಇಂತಹ ಕಲಾಕಾರರ ಪಟ್ಟಿಯಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದ ಕಲಾಕಾರರ ಹೆಸರುಗಳು ಅಗ್ರಸ್ಥಾನದಲ್ಲಿ ನಿಲ್ಲುತ್ತದೆ.

ಶಿಷ್ಟ ಕಲೆಗಳಿಗೆ ಎಣಿಕೆಯ ಮಿತಿ ಇರುವಂತೆ ಜನಪದ ಕಲೆಗಳಿಗೆ ಮಿತಿ ಎಂಬುದೇ ಇಲ್ಲ. ಅದು ಸಾಗರವಿದ್ದಂತೆ. ಹೆಕ್ಕಿದಷ್ಟು ಸಿಗುವ ಆಳವನ್ನು ಹೊಂದಿದ್ದು, ಬಹುಮಟ್ಟಿನ ಕಲೆಗಳಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದವರು ಕಂಡುಬರುತ್ತಾರೆ.

**ತಬಲಾ ವಾದನದಿಂದ ಮನಸೂರೆಗೊಳ್ಳುವ ತುಕಾರಂ**

ಮಾಧವಗುಡಿ ಪಂ. ರಾಮರಾವ್ ನಾಯಕ್, ಶ್ಯಾಮಲಾ ಜಿ. ಭಾವೆ, ಗಣಪತಿ ಭಟ್, ಪರಮೇಶ್ವರ ಹೆಗ್ಡೆ, ವಿನಾಯಕ ತೊರವೆ, ಶೇಷಾದ್ರಿ ಗವಾಯಿ, ಶುಭಾ ಮುದ್ಗಲ್, ಸಾರಥಿ ಚಟರ್ಜಿ, ವಿಭಾವರಿ ಬಾಂದ್‌ಕರ್, ಇಂದೂಧರ ನಿರೋಡಿ, ಮುಂತಾದ ಹಿಂದೂಸ್ಥಾನಿ ಅತಿರಥ ಮಹಾರಥ ವಿದ್ವಾಂಸರಿಗೆ ತಬಲಾ ಸಾಥ್ ನೀಡಿ ಅವರೆಲ್ಲರಿಂದ ಶಹಭಾಸ್‌ಗಿರಿ ಪಡೆದಿರುವ ಈ ಕಲಾವಿದ ಅಹಂಕಾರದಿಂದ ಬೀಗುವುದಿಲ್ಲ. ಬದಲಾಗಿ ಇಂತಹ ದಿಗ್ಗಜರ ಜೊತೆ ಕಲಾಸೇವೆ ಸಲ್ಲಿಸಿದ ಅವಕಾಶ ದೊರೆಯಿತಲ್ಲಾ ಎಂದು ಸಂತೋಷಿಸುತ್ತಾರೆ. ಅಲ್ಲದೆ ಅನೇಕ ಸ್ಥಳೀಯ ಮತ್ತು ರಾಷ್ಟ್ರಮಟ್ಟದ ಸುಗಮ ಸಂಗೀತ ಕಲಾವಿದರ ಗಾಯನ ಕಾರ್ಯಕ್ರಮದಲ್ಲಿಯೂ ತಬಲಾಸಾಥ್ ನೀಡಿ ಮೆಚ್ಚುಗೆಯನ್ನು ಗಳಿಸಿದ್ದಾರೆ. ದಿ. ಜಿ.ವಿ.ಅತ್ರಿ, ನಗರ ಶ್ರೀನಿವಾಸ ಉಡುಪ, ಹೆಚ್.ಆರ್. ಲೀಲಾವತಿ, ಪುತ್ತೂರ ನರಸಿಂಹ ನಾಯಕ್ ಅವರಿಗೆಲ್ಲರಿಗೂ ತುಕಾರಾಂ ಎಂದರೆ ಪ್ರೀತಿ ಮತ್ತು ಅಭಿಮಾನ. ಆಕಾಶವಾಣಿಯಲ್ಲಿ ಮತ್ತು ದೂರದರ್ಶನದಲ್ಲಿ ಹಲವಾರು ಕಾರ್ಯಕ್ರಮಗಳನ್ನು ನೀಡಿ ನಾಡಿನ ಎಲ್ಲ ಸಂಗೀತ ಪ್ರಿಯರ ಮೆಚ್ಚಿಗೆ ಪಡೆದಿದ್ದಾರೆ.

ತುಕಾರಾಂ ಅವರಿಗೆ ಕಾರ್ಯಕ್ರಮ ಸಣ್ಣದೇ ಇರಲಿ, ದೊಡ್ಡದೇ ಇರಲಿ ಅದು ಗೌಣ. ಒಟ್ಟಿನಲ್ಲಿ ಕಾರ್ಯಕ್ರಮಕ್ಕೆ ಕರೆಬಂದರೆ, ತೆರಳಿ ಎಲ್ಲ ಕಲಾಭಿಮಾನಿಗಳಿಗೆ ಸಂತೋಷ ನೀಡುವುದು ಇವರು ಅನುಸರಿಸಿಕೊಂಡು ಬಂದ ಕ್ರಮ. ಕಲ್ಕತ್ತದಲ್ಲಿ ಜರುಗಿದ ಪುರಂದರ ಆರಾಧನಾ ಮಹೋತ್ಸವದಲ್ಲಿ ಭಾಗವಹಿಸಿ ಮೆಚ್ಚುಗೆ ಗಳಿಸಿದ್ದಾರೆ. ಅಲ್ಲದೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಏರ್ಪಡಿಸಿದ ಸಂಗೀತೋತ್ಸವದಲ್ಲಿ, ಮೈಸೂರು ದಸರಾ ಅರಮನೆ ಕಾರ್ಯಕ್ರಮದಲ್ಲಿ, ಇಕ್ಕೇರಿಯಲ್ಲಿ ನಡೆದ ರಾಷ್ಟ್ರೀಯ ಸಂಗೀತ ನೃತ್ಯೋತ್ಸವದಲ್ಲಿ ಭಾಗವಹಿಸಿ ಅಪಾರ ಅಭಿಮಾನಿಗಳನ್ನು ಸಂಪಾದಿಸಿದ್ದಾರೆ. ಕರ್ನಾಟಕ ಸಂಗೀತ, ನೃತ್ಯ ಅಕಾಡಮಿ ಇವರ ಕಲಾಸೇವೆಯನ್ನು ಮೆಚ್ಚಿ ಅಭಿನಂದನಾ ಪತ್ರವನ್ನು ನೀಡಿದೆ. ಆಕಾಶವಾಣಿಯಲ್ಲಿ 'ಬಿ–ಹೈ' ಕಲಾವಿದರಾಗಿರುವ ತುಕಾರಾಂ ಅನೇಕ ಸಂಗೀತ ಮತ್ತು ವಾದ್ಯಗಳ ಸ್ಪರ್ಧೆಗಳಲ್ಲಿ ತೀರ್ಪುಗಾರರಾಗಿ ಭಾಗವಹಿಸಿದ್ದಾರೆ. ಅಖಿಲ ಭಾರತೀಯ ಗಂಧರ್ವ ಮಹಾವಿದ್ಯಾಲಯದಲ್ಲಿ ವಿಶಾರದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಾರೆ.

ಇಷ್ಟೆಲ್ಲಾ ಪ್ರತಿಭೆಯಿರುವ ತುಕಾರಾಂರಿಗೆ ಹಲವಾರು ಸಂಘಸಂಸ್ಥೆಗಳು ಕರೆದು ಗೌರವಿಸಿವೆಯಾದರೂ ಸರ್ಕಾರದ ಕಡೆಯಿಂದ ಒಂದು ಗೌರವವೂ ಸಿಗದೇ ಇರುವುದು ವಿಷಾದದ ಸಂಗತಿ. ಒಮ್ಮೆ ಸಾರ್ವಜನಿಕ ಸಮಾರಂಭವೊಂದರಲ್ಲಿ ರಾಜಕಾರಣಿಯೋರ್ವರು ತುಕಾರಾಂರ ಕಲಾ ಪ್ರೌಢಿಮೆಯನ್ನು ಹಾಡಿ ಹೊಗಳಿ, ರಾಜ್ಯೋತ್ಸವ ಪ್ರಶಸ್ತಿ ಕೊಡಿಸುವ ಭರವಸೆ ನೀಡಿ ಸಭಿಕರಿಂದ ಚಪ್ಪಾಳೆ ಗಿಟ್ಟಿಸಿಕೊಂಡರು. ಆದರೆ ತುಕಾರಾಂ ಅವರ ಮನೆಗೆ ಹೋದಾಗ ಸರಿಯಾಗಿ ಮಾತನಾಡಿಸದೇ ಇದ್ದುದನ್ನು ಕಂಡು ಅಲ್ಲಿಯೇ ತಮ್ಮ ಅರ್ಜಿಯನ್ನು ಹರಿದುಹಾಕಿ ಇನ್ನು ಮುಂದೆ ವಶೀಲಿಯ ಈ

ಪ್ರಶಸ್ತಿಗಿಂತ ಕಲಾಭಿಮಾನಿಗಳ ಮೆಚ್ಚುಗೆಯೇ ಶ್ರೇಷ್ಠ ಎಂದು ತೀರ್ಮಾನಿಸಿದರು. ಇದೀಗ ತಮ್ಮ ಮನೆಯ ಮೇಲ್ಭಾಗದಲ್ಲಿ ಒಂದು ರೆಕಾರ್ಡಿಂಗ್ ಸ್ಟುಡಿಯೋವನ್ನು ಸ್ಥಾಪಿಸಿ ಧ್ವನಿಮುದ್ರಿಕೆಗಳನ್ನು ಹೊರತಂದಿದ್ದಾರೆ. ಅವುಗಳಲ್ಲಿ ಐದು ಧ್ವನಿಮುದ್ರಿಕೆಗಳಲ್ಲಿ ಹೊರತಂದ ಮರಾಠಿ ಅಭಂಗಗಳು ತುಂಬ ಜನಪ್ರಿಯವಾಗಿವೆ. ಪತ್ನಿ ಕಲಾವತಿ ತನ್ನ ಕಲೆಗೆ ಪ್ರೋತ್ಸಾಹ ನೀಡುತ್ತಿರುವುದನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ತುಕಾರಾಂ ತನ್ನ ಒಬ್ಬನೇ ಮಗನನ್ನು ಎಂ.ಬಿ.ಎ. ಗೆ ಸೇರಿಸಿದ್ದಾರೆ. ಇವರ ಮಗ ವಿಠ್ಠಲರಾವ್ ತನ್ನ ವಿದ್ಯಾಭ್ಯಾಸದ ಜೊತೆಗೆ ಸಂಗೀತದಲ್ಲಿಯೂ ಆಸಕ್ತಿ ಹೊಂದಿದ್ದು ತನ್ನ ತಂದೆಯ ಸ್ಟುಡಿಯೋದ ಜವಾಬ್ದಾರಿಯನ್ನು ಹೊತ್ತಿದ್ದಾರೆ. ಸಂಗೀತ ಕಾರ್ಯಕ್ರಮವಿಲ್ಲದಿದ್ದಾಗ ಟೈಲರಿಂಗನ್ನು ಉದ್ಯೋಗವಾಗಿ ಮುಂದುವರೆಸಿಕೊಂಡು ಹೋಗುತ್ತಿರುವ ತುಕಾರಾಂ ರಂಗಧೋಳ್ ಅವರಿಗೆ ಭವಿಷ್ಯದಲ್ಲಿಯಾದರೂ ಸೂಕ್ತ ಗೌರವ ಮನ್ನಣೆಗಳು ದೊರೆಯಲಿ ಎಂಬುದೇ ಅವರ ಅಭಿಮಾನಿಗಳ ಅಭಿಲಾಷೆಯಾಗಿದೆ.

**೩.೧೩ ಧರ್ಮ**

**ಧರ್ಮದ ಅರ್ಥ ಹಾಗೂ ವ್ಯಾಖ್ಯಾನ :**

ಎಲ್ಲಾ ಮಾನವ ಸಮಾಜದ ಧರ್ಮಗಳನ್ನು ಪಾಲಿಸುತ್ತಿರುವುದು ಸರ್ವೇ ಸಾಮಾನ್ಯ. ಧರ್ಮರಹಿತ ಸಮಾಜ ಸಮಾಜವೆಂದೆನಿಸುವುದಿಲ್ಲ. ಧರ್ಮವಿಲ್ಲದ ಸಮಾಜ ತನ್ನ ಅಸ್ತಿತ್ವವನ್ನು ನೆಲೆಯನ್ನು ಬೇಗನೇ ಕಳೆದುಕೊಳ್ಳುತ್ತದೆ. ಒಂದು ಸಮಾಜವನ್ನು ಸುಸ್ಥಿತಿಯಲ್ಲಿಡಲು ಧರ್ಮ ಅತ್ಯವಶ್ಯಕ, ಧರ್ಮ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಗುವುದರ ಜೊತೆಗೆ ಸಮಾಜದ ಮೇಲೆ ವಿಶೇಷವಾದ ನಿಯಂತ್ರಣವನ್ನು ಹೊಂದಲು ಸಹಾಯ ಮಾಡುತ್ತದೆ. ಎಲ್ಲ ಸಮಾಜಗಳು 'ಧರ್ಮ' ಕ್ಕೆ ಅನುಗುಣವಾಗಿವೆ. ಬಹಳಷ್ಟು ಜನರಿಗೆ ಧರ್ಮವು ಕೇವಲ ಒಂದು ನಂಬುಗೆಯಾದರೆ, ಕೆಲವರಿಗೆ ಸಮಾಜವನ್ನು ಶಾಸ್ತ್ರೀಯವಾಗಿ, ಅಭ್ಯಸಿಸಬಲ್ಲ ಅಧ್ಯಯನ ವಸ್ತುವಾಗಿದೆ. ಪುರಾತನ ಕಾಲದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಮಾನವನು ಧರ್ಮದ ಆಚರಣೆಯಲ್ಲಿ ಬಂದಿರುವುದು ಕಂಡು ಬರುತ್ತದೆ. ಆದರೆ ಮಾನವ ಶಾಸ್ತ್ರಜ್ಞರು ಧರ್ಮವನ್ನು ಅಪ್ರೋಚ್ (Approach) ಮಾರ್ಗವನ್ನು ಅನುಸರಿಸಿ ಅಧ್ಯಯನ ಮಾಡಿರುವರು. Relegion is a Approach study. (ಧರ್ಮವು ಪ್ರಕೃತ್ಯತೀತ ಅಧ್ಯಯನವಾಗಿದೆ). ಸಮಾಜಶಾಸ್ತ್ರಜ್ಞರು ಧರ್ಮವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿರುವರು. Relegion is a scientific study (ಧರ್ಮವು ವೈಜ್ಞಾನಿಕ ಅಧ್ಯಯನವಾಗಿದೆ).

**ವ್ಯಾಖ್ಯಾನ :**

ಇ.ಬಿ.ಟೈಲರ್ ' (೧೮೭೧) ಎಂಬ ಮಾನವ ಶಾಸ್ತ್ರಜ್ಞನು ಮಾನವನ ಅಲೌಕಿಕ ಶಕ್ತಿಯಲ್ಲಿ ನಂಬಿಕೆಯೇ ಧರ್ಮವೆಂದು ವ್ಯಾಖ್ಯಾನಿಸುತ್ತಾರೆ. "Religion is belief in spiritual being" ( William A. Lessa and Evon. Z Vogt: 1965:10) 'ಫ್ರೇಜರ್' (೧೯೩೫) ಎಂಬ ಮಾನವ

ಶಾಸ್ತ್ರಜ್ಞನು "ನಿಸರ್ಗ ಹಾಗೂ ಮಾನವ ಜೀವನದ ಆಗುಹೋಗುಗಳನ್ನು ನಿರ್ದೇಶಿಸಲು ಹಾಗೂ ನಿಯಂತ್ರಿಸಲು ಮಾನವ ಶಕ್ತಿಗಿಂತ ಶ್ರೇಷ್ಠವಾದ ಶಕ್ತಿಯೊಂದು ಇರುತ್ತದೆ" ಎಂಬ ನಂಬಿಕೆಗೆ ಧರ್ಮವೆಂದು ವ್ಯಾಖ್ಯಾನಿಸುತ್ತಾನೆ.

He found that religions a belief, superior to men, which are belived to direct to control the course of nature and human life. (Susan Budd : 1973 : 3-11) "ಇ ಡರ್ಖೀಮ" (೧೯೫೭) ಎಂಬ ಶಾಸ್ತ್ರಜ್ಞನು 'ಪ್ರತ್ಯೇಕವಾಗಿರಿಸಿದ ಹಾಗೂ ನಿಷೇಧಿಸಲ್ಪಟ್ಟಿರುವ ಪವಿತ್ರ ವಸ್ತುಗಳಿಗೆ ಸಂಬಂಧಿಸಿದಂತೆ ಮಾನವನ ನಂಬುಗೆಗಳು ಹಾಗೂ ಆಚರಣೆಗಳ ಒಟ್ಟು ವ್ಯವಸ್ಥೆಯೇ ಧರ್ಮವಾಗಿದೆ.

(William A lessa and Evon Z. Vogt, 1965;59) Melford spire (1968:96) Defination 'religion' as institution consisting of culturally patterned interaction with culturally postulated superhuman beings" (Michael Banton: 1968-96),

ಜೇಮ್ಸನ್ ಹಾಸ್ಪಂಗ್ಸ್ (೧೯೨೧) ಎಂಬ ಶಾಸ್ತ್ರಜ್ಞನು "ನಂಬಿಕೆಗಳು, ವ್ಯವಹಾರಿಕಗಳು, ಚಿತ್ತ ವೃತ್ತಿಗಳು, ಮನಸ್ಸಿನ ಭಾವಸ್ಥಿತಿಗಳು, ಮನೋಭಾವನೆಗಳು" ಮುಂತಾದವುಗಳನ್ನು ಮಾನವನು ನಂಬಿರುವುದೇ ಧರ್ಮವೆಂದು ವ್ಯಾಖ್ಯಾನಿಸುತ್ತಾರೆ. Belief, practices, feelings, moods, attitudes etc.," (Kadetotad : 1977 : 9) ಮಲಿನೋವ್ಸ್ಕಿ, (೧೯೪೪) ಎಂಬ ಮಾನವ ಶಾಸ್ತ್ರಜ್ಞನು "ಮಾನವನ ಜೀವನದಲ್ಲಿ ಬಂದೊದಗುವ ಅನಿರೀಕ್ಷಿತ ಘಟನೆಗಳನ್ನು ಪರಿಹರಿಸಿಕೊಳ್ಳುವುದೇ ಧರ್ಮ" ಎಂದು ಕರೆಯುತ್ತಾರೆ.

(William A. Lessa and Evon, z Vogt : 102-103) ಎಂಬ ಶಾಸ್ತ್ರಜ್ಞನು ಮಾನವನ ಮಾನಸಿಕ ತುಮುಲಗಳನ್ನು ಸಮಾಧಾನ ಸ್ಥಿತಿಯಲ್ಲಿ ತರುವುದೂ, ಅವನ ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸುವುದೂ ಮುಂತಾದವು ಅವನನ್ನು ಕಾರ್ಯತತ್ಪರನಾಗುವಂತೆ ಮಾಡುವುದೇ "ಧರ್ಮ" ಎಂದು ಕರೆಯುತ್ತಾರೆ (ಐನಾಪೂರ : ೧೯೭೦ : ೧೫೮) ಸಮಾಜಶಾಸ್ತ್ರಜ್ಞರು ಕೂಡ ಧರ್ಮದ ಬಗ್ಗೆ ತಮ್ಮದೇ ಆದ ವ್ಯಾಖ್ಯಾನಗಳನ್ನು ಕೊಟ್ಟಿದ್ದಾರೆ.

Maciver and page ಎಂಬುವವರು "ಧರ್ಮವು ನಾವು ಅರ್ಥ ಮಾಡಿಕೊಂಡಿರುವಂತೆ ಮಾನವ ಮಾನವರೊಳಗಿನ ಸಂಬಂಧವಾಗಿರದೇ ಮಾನವ ಮತ್ತು ಹಲವು ಅದ್ಭುತ ಶಕ್ತಿಗಳ ನಡುವಿನ ಸಂಬಂಧವೂ ಆಗಿದೆ". Religion as we understand the term implies are relationship

to merely between man and man. But also between man and some higher powers.

ಮ್ಯಾಕ್ಸ್ ಮುಲ್ಲರ್ (೧೯೭೭) ಎಂಬುವವರು "ಅನಂತವಾದ ದಿವ್ಯ ಶಕ್ತಿಯನ್ನು ಗ್ರಹಿಸಲು ಮಾನವನಿಗೆ ಸಹಾಯಕವಾಗುವ ಆತನ ಪ್ರವೃತ್ತಿ ಅಥವಾ ಮನಃ ಶಕ್ತಿಯೇ ಧರ್ಮವಾಗಿದೆ. Religion is a mental faculty or diposition which enables man to aprehand the infinite". (ಸುಳ್ಳದ : ೧೯೯೭ : ೧೪,೧೫,೧೬), ಹೀಗೆ ಧರ್ಮದ ಬಗ್ಗೆ ಹಲವಾರು ವಿದ್ವಾಂಸರು ತಮ್ಮದೇ ಆದ ಅರ್ಥ ಹಾಗೂ ವ್ಯಾಖ್ಯಾನಗಳನ್ನು ಕೊಟ್ಟಿದ್ದಾರೆ. ಒಟ್ಟಾರೆ ಇವೆಲ್ಲವನ್ನೂ ಪರಿಶೀಲಿಸಿದಾಗ "ಧರ್ಮವು ಧಾರ್ಮಿಕ ಹಾಗೂ ಸಾಮಾಜಿಕ ಜೀವನಕ್ಕೆ ಒಂದು ವ್ಯವಸ್ಥಿತ ಜೀವನಕ್ರಮವನ್ನು ನೀಡಿ ಸಾಮಾಜಿಕ ಸಂಸ್ಥೆಯಾಗಿ ಬೆಳೆದಿದೆಯೆಂದು ಹೇಳಬಹುದು". ಧರ್ಮದ ಈ ಎಲ್ಲಾ ವ್ಯಾಖ್ಯೆಗಳನ್ನು, ಅರ್ಥಗಳನ್ನು ನೋಡಿದಾಗ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವೂ ಸಹ ಇದರಿಂದ ಹೊರತಾಗಿಲ್ಲವೆಂದೆನಿಸುತ್ತದೆ. ಏಕೆಂದರೆ ಈ ಸಮುದಾಯವೂ ಕೂಡಾ ದೇವರು, ಧರ್ಮ, ಸ್ವರ್ಗ, ನರಕ, ಪಾಪ, ಪುಣ್ಯಗಳನ್ನು ಅತಿಯಾಗಿ ನಂಬಿರುವ ಸಮುದಾಯವಾಗಿರುವುದು ಎಂದು ತಿಳಿದು ಬರುತ್ತದೆ. ಈ ಸಮುದಾಯದ ಜನರು ತಮ್ಮ ದೈನಂದಿನ ಕೆಲಸಕಾರ್ಯಗಳನ್ನು ಮಾಡುವಾಗ ದೇವರನ್ನು ನೆನೆಯದೆ ಇರುವುದಿಲ್ಲ ಮತ್ತು ಯಾವ ಕೆಲಸ ಮಾಡಿದರೆ ತಮಗೆ ಮೋಕ್ಷ ಸಿದ್ಧಿಸುತ್ತದೆ ಎಂಬುದಾಗಿಯೂ ಸಹ ಗೊತ್ತಿದ್ದು, ವಿಶೇಷವಾದ ಸಂದರ್ಭಗಳಾದ ಮದುವೆ, ಮನೆ ಕಟ್ಟುವುದು, ಹೊಸದಾಗಿ ಜೀಗತನ ಪ್ರಾರಂಭಿಸುವುದಕ್ಕಿಂತ ಮುಂಚೆ ತಮ್ಮ ಆರಾಧ್ಯ ದೇವರಲ್ಲಿ ಹೋಗಿ ತಮ್ಮ ಅನಿಸಿಕೆಗಳಿಗನುಸಾರವಾಗಿ ಪೂಜೆ ಮಾಡಿ ದೇವರ ವರವನ್ನು ಪಡೆಯುವ ರೂಢಿ ಇಂದಿಗೂ ಈ ಸಮುದಾಯದಲ್ಲಿ ಕಂಡು ಬರುತ್ತದೆ.

ಸಮುದಾಯದ ಜನರಲ್ಲಿ ಒಳ್ಳೆಯದು, ಕೆಟ್ಟದ್ದು, ಇವುಗಳನ್ನು ಬೇರ್ಪಡಿಸಿ ನೋಡುವ ಕಲೆಯೂ ಅವರಿಗೆ ಕರಗತವಾಗಿದೆ. ತಾವಾಗಲೀ ತಮ್ಮ ಜನಾಂಗವಾಗಲೀ ಅಧರ್ಮದಿಂದ ನಡೆದುಕೊಳ್ಳಲು ಬಯಸುವುದಿಲ್ಲ. ಅಷ್ಟೇ ಅಲ್ಲದೇ, ಹಿಂದೂ ಧರ್ಮದ ಪರಮ ಆರಾಧಕರಾದ ತಾವು ಮಾಡುವ ಕೆಲಸ ಧರ್ಮಬದ್ಧವಾಗಿರಬೇಕೆಂದು ಬಯಸುತ್ತಾರೆ. ಹೀಗೆ ಮಾಡುವುದರಿಂದ ಮುಂದಿನ ಜನ್ಮದಲ್ಲಿ ಮತ್ತೆ ಮನುಷ್ಯನಾಗಿ ಹುಟ್ಟಬಹುದು ಎಂಬ ಪುನರ್ ಜನ್ಮದ ಭಾವನೆ ವ್ಯಕ್ತಪಡಿಸುತ್ತಾರೆ. ಆಚಾರ ಅನಾಚಾರಗಳನ್ನು ಚೆನ್ನಾಗಿ ಬಲ್ಲ ಇವರು ಉಳಿದ ಹಿಂದೂ ಜಾತಿಗಳಂತೆ ತಮ್ಮಲ್ಲಿಯೂ ಸಹ ಧಾರ್ಮಿಕ ಸಂಘಟನೆ, ದೇವರು ಧರ್ಮ, ಎಂಬ ವಿಶಾಲ ಮನೋಭಾವನೆ ಬೆಳೆಸಿಕೊಂಡಿರುವುದರ ಜೊತೆಗೆ ಅನಾಚಾರಿಗಳನ್ನು ಅಧರ್ಮಿಗಳನ್ನು ಸಹಿಸುವುದಿಲ್ಲ. ಈ ಸಮುದಾಯದಲ್ಲಿ ನಡೆಯುವ ಪೂಜೆ, ಪುನಸ್ಕಾರ, ಹಬ್ಬ ಹರಿದಿನಗಳನ್ನು ನೋಡಿದಾಗ ಇವರಲ್ಲಿರುವ ಭಯ, ಭಕ್ತಿ, ಶ್ರದ್ಧೆ, ನಡೆನುಡಿ ವಿನಯ ದೇವರು ಧರ್ಮದಲ್ಲಿ ಅಚಲವಾದ ನಂಬಿಕೆಗಳನ್ನು ನೋಡಬಹುದು. ಈ ಧರ್ಮದ ಸಕಲ ಜೀವಿಗಳಲ್ಲಿ

ಒಳ್ಳೆಯ ನಡತೆ ಮತ್ತು ಸಂಸ್ಕಾರವನ್ನು ಕಲಿಸುವ ಏಕೈಕ ಮಾರ್ಗ ಎಂದು ಭಾವಿಸಿ ಅದರಂತೆ ನಡೆದುಕೊಳ್ಳುತ್ತಾರೆ. ಬಾಹುಸಾರ ಕ್ಷತ್ರಿಯ ಸಮುದಾಯವು ಮೊದಮೊದಲು ಮಾತೃದೇವತೆಯ ಆರಾಧಕರಾಗಿದ್ದರು. ಕಾಲಾಂತರದಲ್ಲಿ ನಡೆದ ಬೆಳವಣಿಗೆಯ ಹಿನ್ನೆಲೆಯಲ್ಲಿ ಇವರು ಪುರುಷ ದೇವತೆಗಳ ಆರಾಧಕರಾಗಿದ್ದಾರೆ.

**ಮಾತೃದೇವತೆಯ ಆರಾಧನಾಂಶಗಳು**

ಇಂದಿನ ಭಾರತೀಯ ಸಂಸ್ಕೃತಿಯೆಂದರೆ ಮುಂಡ-ದ್ರಾವಿಡ-ಆರ್ಯ ಸಂಸ್ಕೃತಿಗಳ ಕಲಸುಮೇಲೊಗರವಾದ ಮಿಶ್ರ ಸಂಕೀರ್ಣ ಸಂಸ್ಕೃತಿಯೆನ್ನಬಹುದು. ಈ ಸಂಸ್ಕೃತಿಯನ್ನು ಪ್ರತಿನಿಧಿಸುವ ಅನಂತ ರೂಪ-ನಾಮಗಳಿಂದ ಕೂಡಿದ ಇಂದಿನ ದೇವ-ದೇವತೆಗಳ ಕಲ್ಪನೆಗೆ ಪುರಾಣೇತಿಹಾಸಗಳು ಆಧಾರವಾಗಿವೆ. ಈ ಪುರಾಣೇತಿಹಾಸಗಳು ಅಪೌರುಷೇಯವೆಂದು ಹೇಳಿಕೊಂಡರೂ ಸಹ ನಾಗರಿಕ ಮಾನವನ ಸೃಷ್ಟಿಗಳೆಂಬುದು ಸರ್ವ ವಿಧಿತ. ಮುಂಡರು ಪ್ರಕೃತಿ ಪ್ರಿಯರು ಮತ್ತು ಆರಾಧಕರು. ಅವರು ಪ್ರತಿಯೊಂದನ್ನೂ ಪ್ರಕೃತಿಜನ್ಯವಾಗಿಯೇ ರೂಢಿಸಿಕೊಂಡಿದ್ದಾರೆ. ತಮಗೆ ಜನ್ಮಕೊಟ್ಟು ಲಾಲಿಸಿ, ಪಾಲಿಸಿ, ಪೋಷಿಸಿದ 'ತಾಯಿ' ಯನ್ನೇ ದೇವರೆಂದು ಮೊದಲು ಗುರುತಿಸಿದರು. ಇದಕ್ಕೆ ಕಾರಣ ಆದಿಮಾನವ ಆಹಾರನ್ವೇಷಿಯಾಗಿ ಬಹುಕಾಲ ಮನೆಯಿಂದ ಹೊರಗುಳಿದು, ಅನೇಕ ವೇಳೆ ಕ್ರೂರ ಮೃಗಗಳ ಬಾಯಿಗೆ ಸಿಕ್ಕಿ ಬಲಿಯಾಗಿ ಮನೆ ಸೇರದೆ ಮಾಯವಾಗಿ ಮನೆಯಲ್ಲಿದ್ದ ಮಗುವಿನ ಮೇಲೆ ಯಾವುದೇ ನೇರ ಪ್ರಭಾವ ಬೀರಲು ಸಾಧ್ಯವಾಗದೇ ಹೋದುದೇ ಆಗಿದೆ. ತಾಯಿ ಮಗುವನ್ನು ರಕ್ಷಿಸಿ, ಪೋಷಿಸಿ, ಸದಾಕಾಲ ತನ್ನ ತೊಡೆಯ ಮೇಲಾಡಿಸಿ, ಮೊಲೆಯುಣಿಸಿ, ಅಪ್ಪಿ, ಮುದ್ದಾಡಿ ವಾತ್ಸಲ್ಯದ ಅಮೃತವನ್ನು ಉಣಿಸಿದ್ದರಿಂದ 'ಮಗು' ತಾಯಿಯ ನೇರ ಪ್ರಭಾವಕ್ಕೆ ಸಿಗುವಂತಾಯಿತು. ಎಳೆಯ ವಯಸ್ಸಿನಲ್ಲಾದ ಈ ಪ್ರಭಾವದಿಂದ ಅಂದಿನ ಬೆಳೆದ ಯುವಕರಲ್ಲಿ 'ತಾಯಿ'ಯ ಬಗ್ಗೆ ವಿಶೇಷ ಗೌರವಾದರಗಳು ಮೂಡಿ ನಿಂತವು. ತಾನು ತಂದೆಯಂತೆ ಆಹಾರನ್ವೇಷಿಯಾಗಿ ಕುರಿಗಾಹಿ, ದನಗಾಹಿಯಾಗಿ ಹೊರಗೆ ಹೋದಾಗ ತನಗೆದುರಾದ ಪ್ರಾಕೃತಿಕ ಶಕ್ತಿಗಳು, ತನಗಿಂತ ಬಲಿಷ್ಠವಾದವುಗಳೆಂಬುದನ್ನು ಗುರುತಿಸಿ, ಅವುಗಳಿಗೆ ತಾಯಿಯ ಸ್ಥಾನವನ್ನು ನೀಡಿದನು. ಭಯಭಕ್ತಿಗಳಿಂದ ಪೂಜಿಸಿದನು . ಇದು ಆದಿಮಾನವ ದೇವ-ದೇವತೆಗಳ ಅವಿರ್ಭಾವಕ್ಕೆ ಮುಖ್ಯಕಾರಣ. ಈ ಕಲ್ಪನೆಯಲ್ಲಿ ಅತಿ ಪ್ರಾಚೀನವಾದ ದೇವತಾ ರೂಪ ಹೆಣ್ಣಿನದು. ಗಂಡು ದೇವತೆಗಳ ಅವಿರ್ಭಾವ ವೇದಕಾಲಗಳಿಂದೀಚಿನದು. ಅಂದರೆ 'ಮಾತೃದೇವತೆ' ಯ ಕಲ್ಪನೆ ಪ್ರಾಗೈತಿಹಾಸಿಕ ಯುಗದಿಂದ ಲಭಿಸಿರುವಂತಹುದು.

ಗ್ರಾಮದೇವತೆಗಳ ಕಲ್ಪನೆ ಮತ್ತು ಬಲಿಯಾಚಾರ ದ್ರಾವಿಡರ ಕಲ್ಪನೆಯೆನ್ನುವುದುಂಟು. ಒಂದು ಕುಟುಂಬವೇ ಒಂದು ಗ್ರಾಮ ಘಟಕವಾಗಿದ್ದ ಮುಂಡ ಸಂಸ್ಕೃತಿಯ ಪ್ರಾಥಮಿಕ ಹಂತದಿಂದ ಬೆಳೆದು ಹಲವು ಹತ್ತು ಕುಟುಂಬಗಳು ಒಂದು ಗ್ರಾಮವಾದ ಬೆಳವಣಿಗೆಯಿಂದ ಒಂದು ದೇವತೆ

ಎನ್ನಿಸಿಕೊಂಡವಳು, ಆ ಗ್ರಾಮದ ದೇವತೆಯಾದಳು. ಆ ಕುಲದ ದೇವತೆಯಾದಳು. ಸಾಮಾಜಿಕ ವ್ಯವಸ್ಥೆ ಹೆಚ್ಚು ಪ್ರಭಾವವನ್ನು ಬೀರಲಾರಂಭಿಸಿದಾಗ ಸಣ್ಣ ಸಣ್ಣ ಪ್ರಾಂತ್ಯಗಳನ್ನು ರೂಢಿಸಿಕೊಂಡು ಆರ್ಯರ ಆಕ್ರಮಣದಿಂದ ಘರ್ಷಣೆಗಳಾಗಿ ಆಯಾ ಗುಂಪುಗಳ, ಗ್ರಾಮಗಳ ಭೌಗೋಳಿಕ ಗಡಿಗಳನ್ನು ನಿರ್ಧರಿಸಿಕೊಂಡಾಗ ಆ ಗಡಿಗಳನ್ನು ಕಾಯುವ ಗಡಿ ದೇವತೆಗಳಾದರು. ಹೀಗೆ ಬೆಳೆದಿರುವ ಗ್ರಾಮದೇವತೆಗಳಿಗೆ ಮುಂಡ ಸಂಸ್ಕೃತಿಯ ಮಾತೃದೇವತೆಯ ಕಲ್ಪನೆಯೇ ಮೂಲಾಧಾರವಾದುದು.

ಜಾನಪದರ ಮಾತೃದೇವಿಯ ಕಲ್ಪನೆಗೂ, ನಾವು ಆರಾಧಿಸುವ ಪೂಜಾ ವಿಧಾನಗಳಲ್ಲಿಯೂ ಶಿಷ್ಟ ಸ್ತ್ರೀದೇವತೆಯಾದ ದೇವಿ ಪೂಜೆಗೂ ಬಹಳಷ್ಟು ಸಮಾನಿಕೆಯುಂಟು. ತಾಂತ್ರಿಕರು ದೇವಿ, ಕಾಳೀ, ಚಂಡಿ, ಚಾಮುಂಡಿ, ದುರ್ಗೆ, ಮಹಾಕಾಳಿ, ಭದ್ರಕಾಳಿ, ಮೊದಲಾದ ಹೆಸರುಗಳಿಂದ ಈಕೆಯನ್ನು ಪೂಜಿಸುತ್ತಾರೆ. ತಂತ್ರಸಾರದಲ್ಲಿ 'ದೇವಿ ಪೂಜೆ 'ಪರಮೋತ್ಕೃಷ್ಟವಾದುದೆಂದು ಹೇಳಿದೆ. ದೇವಿ ಪೂಜೆಯಲ್ಲಿಯೂ ಕುಮಾರಿಪೂಜೆ ವಿಶೇಷವಾದ ಮಾನ್ಯತೆಯನ್ನು ಪಡೆದುಕೊಂಡಿದೆ. ತಾಂತ್ರಿಕರು ಕುಮಾರಿಪೂಜೆಯಾಗದ ಹೊರತು ಯಾವ ದೇವತೆಯ ಪೂಜೆಯೂ ಸಂಪೂರ್ಣವಾಗುವುದಿಲ್ಲವೆಂದು ನಂಬುತ್ತಾರೆ. ಕುಮಾರಿ ಸರ್ವದೇವತಾಸಮನ್ವಯ ಸ್ವರೂಪದವಳು. ಇವಳನ್ನು ಪೂಜಿಸುವವರ ಸಕಲ ಪಾಪಗಳೂ ಪರಿಹಾರವಾಗಿ ಅಖಂಡ ಸುಖಸೌಭಾಗ್ಯಗಳು ಲಭಿಸುವುವು ಎಂಬುದು ಸಾಮಾನ್ಯ ನಂಬಿಕೆ. ಇವಳ ಆರಾಧಕರಿಗೆ ಜಾತಿ ಕುಲಭೇದಗಳಿಲ್ಲ. ಕುಮಾರಿಯನ್ನು ಧೂಪದೀಪಾದಿಗಳಿಂದ ಪೂಜಿಸಿ ನೈವೇದ್ಯದಿಂದ ತೃಪ್ತಿಪಡಿಸುವ ಭಕ್ತನು ಮೂರು ಲೋಕಗಳನ್ನು ತೃಪ್ತಿಪಡಿಸಿದಂತೆ ಎಂದು ಹೇಳುತ್ತಾರೆ. ದೇವಿಯ ಸ್ವರೂಪ ಉಗ್ರವಾಗಿದ್ದರೆ ಕುಮಾರಿಯ ರೂಪ ಸೌಮ್ಯದಿಂದ ಕೂಡಿ ಆಕರ್ಷಕವಾಗಿರುತ್ತದೆ. ಕಾಳೀಕೋತ್ಪತ್ತಿಯನ್ನು ಕುರಿತು ಮಾರ್ಕಂಡೇಯ ಪುರಾಣದಲ್ಲಿ ಸಾಕಷ್ಟು ದೀರ್ಘವಾದ ವಿವರಣೆಯಿದೆ. ಇವಳು ಆದಿ ಪರಾಶಕ್ತಿಯ ಕೋಪಿಷ್ಠ ಭ್ರೂಮಧ್ಯದಿಂದ ಉದಯಿಸಿದಳೆಂದು ಹೇಳಿದೆ. ಖಡ್ಗ ಪಾಶಾಂಕುಶಧಾರಣಳೂ, ವ್ಯಾಘ್ರ ಚರ್ಮಾಂಭರಧಾರಿಣಿಯೂ ಮಾನವ ಕಪಾಲಹರ ಭೂಷಿತಳೂ ಭಯಂಕರ ವಚನಳೂ ಅದ ಈಕೆಯ ದರ್ಶನವೂ ಜನಸಾಮಾನ್ಯರಿಗೆ ಕಷ್ಟಸಾಧ್ಯ. ಕೋಪಾವಿಷ್ಟಳಾದ ಈಕೆಯ ಕಣ್ಣುಗಳು ಸದಾ ಅರುಣಾರುಣವಾಗಿಯೇ ಇರುತ್ತವೆ. ವಿಕಾರವಾದ ಉದ್ದನಾಲಿಗೆಯನ್ನು ಆಕಡೆ ಈಕಡೆ ಆಡಿಸುತ್ತಿರುತ್ತಾಳೆ. ಇವಳ ಗರ್ಜನೆ ದಶದಿಕ್ಕುಗಳಲ್ಲಿ ಪ್ರತಿಧ್ವನಿಸುತ್ತದೆ. ಇವಳನ್ನು ಸುಂದರಿಯನ್ನಾಗಿ, ಶಾಂತಳನ್ನಾಗಿ ವಿಷ್ಣು ಧರ್ಮೋತ್ತರ ಖಂಡದಲ್ಲಿ ಪ್ರಶಂಸಿಸಿದ್ದಾರೆ.

ಭಾರತದ ಪ್ರತಿ ಗ್ರಾಮದಲ್ಲಿ ನೆಲೆಸಿರುವ ಜಾನಪದರಿಂದ ರೂಢಿಗತವಾಗಿರುವ ಗ್ರಾಮದೇವತೆಗಳ ಲಕ್ಷಣಗಳನ್ನು ವೈಟ್ ಹೆಡ್ ರವರು ಕೆಳಗಂಡಂತೆ ಸಂಗ್ರಹಿಸಿದ್ದಾರೆ.

೧. ಇವಳು ಭಯಂಕರ ಸ್ವರೂಪದವಳು ಚತುರ್ಭುಜಗಳಿಂದ ಚಿತ್ರಿಸಲ್ಪಟ್ಟ ಯಮಶೂಲ, ಕಪಾಲ, ಗದೆ, ಖಡ್ಗ ಹಸ್ತಳಾಗಿ ಉದ್ದನೆಯ ನಾಲಿಗೆಯುಳ್ಳವಳಾಗಿ ವಿಕಟವಾದ ಹಲ್ಲುಗಳಿಂದ ಕೂಡಿ,

ವಿಶಾಲನೇತ್ರಳಾಗಿ ಕರಾಳವದನಳಾಗಿ ನೋಡಿದವರಿಗೆ ತಕ್ಷಣ ಭಯವನ್ನುಂಟು ಮಾಡುವಂತಿರುತ್ತಾಳೆ.

೨. ಬಲಿಪ್ರಿಯಳು, ನರಬಲಿಯನ್ನಿಷ್ಟಪಡುವವಳು ರಕ್ತ, ಮದ್ಯ ಪಾನಾಸಕ್ತಳು ಮಾಂಸಹಾರ ಪ್ರಿಯಳು.

೩. ಕೇಡನ್ನುಂಟುಮಾಡುವಳೆಂಬ ಭಯದಿಂದಲೇ ಪೂಜಿಸಲ್ಪಡುವವಳು, ಭಕ್ತಿ ಗೌಣವಾಗಿದ್ದರೆ ಭಯ ಪ್ರಧಾನವಾಗಿರುತ್ತದೆ.

೪. ತನ್ನನ್ನು ಮರೆತವರಿಗೆ, ಅಲಕ್ಷಿಸಿದವರಿಗೆ ಕಷ್ಟಕೊಟ್ಟು, ರೋಗರುಜಿನಗಳನ್ನುಂಟುಮಾಡುವುದು ಈಕೆಗೆ ಬಹು ಪ್ರಿಯವಾದ ಕೆಲಸ.

೫. ನಂಬಿದ ಭಕ್ತರಿಗೆ ಜನ್ಮನೀಡಿದ ತಾಯಿಯಂತೆ ಮಮತೆಯುಳ್ಳ ಜಗನ್ಮಾತೆಯೂ ಜಗದ್ರಕ್ಷಕಳೂ ಆಗುತ್ತಾಳೆ.

೬. ಸಾಂಕ್ರಾಮಿಕ ರೋಗಗಳನ್ನು ಹರಡುವವಳು, ನಿಯಂತ್ರಿಸುವಳೂ ಇವಳೇ, ಜನರನ್ನು ಜಾನುವಾರುಗಳನ್ನು ಗ್ರಹ ಬಾಧೆ, ರೋಗರುಜಿನ, ಶತ್ರುಗಳ ಬಾಧೆಯಿಂದ ಕಾಪಾಡುತ್ತಾಳೆ, ಗ್ರಾಮಗಳನ್ನು ರಕ್ಷಿಸುತ್ತಾಳೆ, ಕೆರೆಕಟ್ಟೆಬಾವಿ ಬೆಳೆಯನ್ನು ರಕ್ಷಿಸುತ್ತಾಳೆ.

೭. ಗ್ರಾಮದ ಹೊರಗೆ ಬೇವಿನ ಮರದ ಕೆಳಗೆ, ಹಳೆಯ ಹುತ್ತಗಳಲ್ಲಿ ಕೆರೆಕಟ್ಟೆಗಳ ಮಧ್ಯೆ ವಾಸಿಸುತ್ತಾಳೆ*.

ಮೇಲೆ ಕಾಣಿಸಿರುವ ಗ್ರಾಮದೇವತೆಗಳ ಲಕ್ಷಣಗಳು ಶಿಷ್ಟ ಆರ್ಯ ದೇವತೆಗಳ ಲಕ್ಷಣಗಳಿಗೆ ವಿರೋಧವಾಗಿಯೂ ತಾಂತ್ರಿಕರ ದೇವಿ ಲಕ್ಷಣಗಳೊಡನೆ ಸಾಮ್ಯವಾಗಿಯೂ ಕಾಣಿಸುತ್ತವೆ. ತಾಂತ್ರಿಕರ ಪ್ರಜಾವಿಧಾನ ಮತ್ತು ಆಚಾರಗಳು ಜಾನಪದ ಮಾತೃದೇವತಾರಾಧನೆಯಿಂದ ರೂಢಿಸಲ್ಪಟ್ಟಿದೆ. ತಾಂತ್ರಿಕರ ಮದಿರಾಪಾನ ಪ್ರಾಮುಖ್ಯತೆ ದೇವಿಯ ಆರಾಧನೆಯ ಸಂದರ್ಭದಲ್ಲಿ ಮತ್ತೇರಿ ವಿಶೇಷವಾದ ಉತ್ಸಾಹವನ್ನು ಆಕೆಯನ್ನು ಸ್ತುತಿಸುವುದಕ್ಕಾಗಿ ತಾಂತ್ರಿಕರು ಬಳಕೆಗೆ ತಂದಂತೆ ಟೈಲರ್ ತಮ್ಮ Primitive Culture ನಲ್ಲಿ ಬರೆಯುತ್ತಾರೆ. ಮಧ್ಯಮಾಂಸಗಳು ಜಾನಪದ-ತಾಂತ್ರಿಕರ ಪೂಜಾವಿಧಾನದ ಪ್ರಧಾನ ವಸ್ತುಗಳಾದವು. ಅವೇ ದೇವಿಗೆ ನೈವೇದ್ಯ-ಪ್ರಸಾದಗಳಾದವು.

ಎಲ್ಲಮ್ಮ-ಮಾರಮ್ಮ ಪಂಚಮರೆಂಬುದಕ್ಕೆ ಮಾರಮ್ಮನ ಕತೆಗಳಲ್ಲಿ ಕಾಣುವ ಕೆಲವು ಅಂಶಗಳೂ ಸಬಲವಾದ ಕಾರಣಗಳಾಗುತ್ತವೆ. ಡಾ॥ ಅರವಿಂದ ಮಾಲಗತ್ತಿಯವರು 'ಮಾರಿಕಾಂಬೆ ಶಕ್ತಿಸ್ವರೂಪದ ಬೆಳವಣಿಗೆ ಮತ್ತು ಜಿಜ್ಞಾಸೆ' ಎಂಬ ಲೇಖನದ ಅನುಬಂಧ[3] "ಶಿರಸಿ ಮಾರಿಕಾಂಬ ಮತ್ತು ಕೋಣ" ಎಂಬ ಕಥೆಯೊಂದರಲ್ಲಿ ಉದಾಹರಿಸಿದ್ದಾರೆ.

*ಅಡಿಟಿಪ್ಪಣಿ: **Village goddess of South India, H.White Head**

ಎಲ್ಲಮ್ಮ-ಮಾರಮ್ಮ ಪಂಚಮರೆಂಬುದಕ್ಕೆ ಮಾರಮ್ಮನ ಕತೆಗಳಲ್ಲಿ ಕಾಣುವ ಕೆಲವು ಅಂಶಗಳೂ ಸಬಲವಾದ ಕಾರಣಗಳಾಗುತ್ತವೆ. ಡಾ॥ ಅರವಿಂದ ಮಾಲಗತ್ತಿಯವರು 'ಮಾರಿಕಾಂಬೆ ಶಕ್ತಿಸ್ವರೂಪದ ಬೆಳವಣಿಗೆ ಮತ್ತು ಜಿಜ್ಞಾಸೆ' ಎಂಬ ಲೇಖನದ ಅನುಬಂಧ* "ಶಿರಸಿ ಮಾರಿಕಾಂಬ ಮತ್ತು ಕೋಣ" ಎಂಬ ಕಥೆಯೊಂದರಲ್ಲಿ ಉದಾಹರಿಸಿದ್ದಾರೆ. ಮಾರಮ್ಮನ ಪೂರ್ವಾಶ್ರಮ, ಮದುವೆಗಳನ್ನು ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ವಿವೇಚಿಸಲು ಶ್ರೀಯುತರು ಪ್ರಯತ್ನಿಸಿರುವುದು ಶ್ಲಾಘನೀಯ. ಮೇಲ್ಜಾತಿಯೆಂದು ಪ್ರಖ್ಯಾತನಾದ ಬ್ರಾಹ್ಮಣ ಹುಡುಗಿಯೊಬ್ಬಳು ಮಾದಿಗನನ್ನು ಮದುವೆಯಾದಳೆಂದೋ? ಕೋಣನೊಂದಿಗೆ ಮದುವೆಯಾದಳೆಂದೋ ? ಹೇಳಿದರೆ ಹೇಗೆ ನಂಬುವುದು? ಮಾರಮ್ಮನ ಕಥೆಯಲ್ಲಿ ಕಾಣುವ ಈ ಅಂತರ್ಜಾತಿ ವಿವಾಹ ಇದಕ್ಕಿಂತ ಹೆಚ್ಚಿನದೇನನ್ನಾದರು ಹೇಳಬಯಸುತ್ತದೆಯೆ? ಊರ ಜಾತ್ರೆ – ಮಾರಮ್ಮ – ಎಲ್ಲಮ್ಮನ ಹಬ್ಬಗಳಲ್ಲಿ ಹೋತ / ಕೋಣಗಳನ್ನು ಬಲಿಗೊಡುವುದಕ್ಕೆ ಬೇರೆ ಏನಾದರೂ ಕಾರಣವಿರಬಹುದೆ? ಬರಿಯ ಬಲಿಯ ತಂತ್ರಕ್ಕಾಗಷ್ಟೆ ಈ ಆಚಾರಗಳು ರೂಢಿಗೆ ಬಂದಿರುವುದು ಸಹಜವೆನ್ನಿಸುವುದಿಲ್ಲ. ಕೆಳವರ್ಗದವರು ಮೇಲ್ಜಾತಿಯವರ ತಂಗಳನ್ನಕ್ಕಾಗಿ ಜೀತದಾಳುಗಳಾಗಿ ದುಡಿದದ್ದು, ದುಡಿಯುತ್ತಿರುವುದು ಮಾನವ ಇತಿಹಾಸದ ಅವಿಭಾಜ್ಯ ಅಂಗವಾಗಿ ಉಳಿದಿದೆ. ಮಾದಿಗರ ಅನಾಥ ಹುಡುಗನೊಬ್ಬ ಜೀತದಾಳಾಗಿ ದುಡಿಯುತ್ತ ದಷ್ಟಪುಷ್ಟನಾಗಿ ಬೆಳೆದಿದ್ದು, ಬಡ ಬ್ರಾಹ್ಮಣನೊಬ್ಬನು ಅವನ ದೃಢಕಾಯತೆಗೆ, ನಡೆನುಡಿಗಳಿಗೆ ಮಾರುಹೋಗಿ, ಮದುವೆ ವಯಸ್ಸು ಮೀರಿದ್ದ ದ್ಯಾವಮ್ಮನೆಂಬ ತನ್ನ ಒಬ್ಬಳೇ ಮಗಳನ್ನು ಅವನಿಗೆ ಕೊಟ್ಟು ವಿವಾಹ ಮಾಡಿದನೆ? ಬ್ರಾಹ್ಮಣ ಸತ್ತನಂತರ ಇವರ ಮಗ ತಂದೆತಾಯಿಗಳ ಪೂರ್ವಾಶ್ರಮಗಳನ್ನು ಬಯಲು ಮಾಡಿದನೆ? ಹಾಗೆ ಮಗ ತಂದೆಯ ಜಾತಿಯನ್ನು ಬಯಲುಮಾಡಿದ್ದರಿಂದ ಜಾತಿಯನ್ನು ತಿಳಿಯದೆ ಮದುವೆಯಾಗಿದ್ದ ತಾಯಿ, ಗಂಡನನ್ನು ಕೊಲ್ಲಲು ಪ್ರಯತ್ನಪಟ್ಟಳೆ? ಆ ಪ್ರಯತ್ನದಿಂದ ತಪ್ಪಿಸಿಕೊಳ್ಳಲು ಗಂಡ ಕೋಣನ ಹೊಟ್ಟೆಯನ್ನು ಪ್ರವೇಶಿಸಿದನೆ? ಕೋಣನನ್ನೆ ಅವಳು ಕೊಂದಳೆ? – ಈ ಪ್ರಶ್ನೆಗಳು ಕೆಳವರ್ಗದವರು ಪೂಜಿಸುವ ಎಲ್ಲಮ್ಮ – ಮಾರಮ್ಮಗಳಿಗೆ ಸಂಬಂಧಿಸಿದವುಗಳಾಗಿವೆ.

ಪುರಾಣೇತಿಹಾಸ ವೇದೋಪನಿಷತ್ತುಗಳನ್ನು ಸೃಷ್ಟಿಸಿದ ಓದಿದ ಮೇಲ್ವಾತಿಯವರಿಗೆ ಸಲ್ಲುವಂತಹದು. ಅವರು ತಮಗೆ ಇಷ್ಟಬಂದಂತೆ ಜಾನಪದೀಯ ಆಚಾರ-ವಿಚಾರ, ರೀತಿ-ನೀತಿಗಳನ್ನು ನಂಬಿಕೆ, ಸಂಪ್ರದಾಯ ಸಂಸ್ಕೃತಿಗಳನ್ನಾಗಿ ಮಾರ್ಪಡಿಸಿಕೊಳ್ಳುವ ಅವಕಾಶಗಳು ಕೈಗೂಡಿದಂತಾದವು. ಶೂದ್ರಾತಿಶೂದ್ರ ದಲಿತರಿಗೆ ಓದುವ ಅವಕಾಶವೆಲ್ಲಿತ್ತು? ಹಿಂದೆ ಮಂತ್ರೋಚ್ಚಾರಣೆಯನ್ನು ಕೇಳಿದರೆ, ಸಾಕು ಕಿವಿಯಲ್ಲಿ ಕಾದ ಸೀಸದ ರಸವನ್ನು ಸುರಿಯುತ್ತಿದ್ದರಂತೆ! ಅಪ್ಪಿತಪ್ಪಿ ಕೇಳಿಸಿಕೊಂಡು ಮಂತ್ರವನ್ನು ಉಚ್ಚರಿಸಿದರೆ ನಾಲಿಗೆಯ ಮೇಲೆ ಬಂಗಾರದ ಮುದ್ರೆಯನ್ನು ಒತ್ತುತ್ತಿದ್ದರಂತೆ.

*ಅಡಿಟಿಪ್ಪಣೆ : ಡಾ॥ ಅರವಿಂದ ಮಾಲಗಿತ್ತಿ ಜಾನಪದ ಜಗತ್ತು, 'ಮಾರಮ್ಮ' ವಿಶೇಷ ಸಂಚಿಕೆ, ಪುಟ.೧೧

ಅದಕ್ಕೂ ಮೊದಲು ನಾಲಿಗೆಯನ್ನು ಕತ್ತರಿಸುತ್ತಿದ್ದರಂತೆ! ತಮ್ಮ ಶಕ್ತಿಯನ್ನು ಪ್ರದರ್ಶಿಸಿಕೊಳ್ಳಲು ಹೀಗೆ ಕಿವಿಯಲ್ಲಿ ಸೀಸ ಸುರಿಯುವುದು – ನಾಲಿಗೆಗಳನ್ನು ಕತ್ತರಿಸುವುದು ಸಾಮಾಜಿಕ ಒಪ್ಪಂದದ ಕಟ್ಟುಕಟ್ಟಳೆಗಳಾಗಿ ನ್ಯಾಯ ನಿರ್ಣಾಯಿಕ ನಿಯಮಗಳಾಗಿ ಅದೆಷ್ಟು ಕಾಲ ಬೆಳೆದುಬಂದಿರಬೇಕು! ಹೀಗಾಗಿ ಕುಲಹೀನ ಗಂಡು ಕುಲೀನ ಹೆಣ್ಣನ್ನು ಮದುವೆಯಾದರೆ ಅಥವಾ ವೃತ್ತಿಯನ್ನು ಬದಲಾಯಿಸಿದರೆ ದುರ್ಮರಣವೇ ಗತಿಯೆಂಬುದಕ್ಕೆ ಎಲ್ಲಮ್ಮ – ಮಾರಮ್ಮಗಳ ಕಥೆ ಸಾಕ್ಷಿಯಂತಿದೆ. ಬ್ರಾಹ್ಮಣಳಾದ ಮಾರಮ್ಮನ ಜನರಿಗೆ (ಬ್ರಾಹ್ಮಣರಿಗೆ) ಈ ಅಂತರ್ಜಾತಿ ವಿವಾಹ ಆ ಕಾಲದಲ್ಲಿ ಸಾಕಷ್ಟು ತೀವ್ರವಾಗಿಯೇ ಹೊಟ್ಟೆ ತೊಳೆಸಿರಬೇಕು, ನೆತ್ತಿ ಸುಟ್ಟಿರಬೇಕು ಅಗ ಮಾರಮ್ಮನನ್ನು ಮದುವೆಯಾದ ಆ ಮಾದಿಗನ ಕೊಲೆಯಾಗಿರಬೇಕು. ಬಹುಶಃ ಇದು ಮೂಲದಲ್ಲಿ ಹೀಗೆ ನಡೆದಿರಬೇಕು. ಆ ಕಾರಣದಿಂದಲೇ ಹೊಲೆಯ ಮಾದಿಗರನ್ನು ಮುಟ್ಟಬಾರದು, ನೆರಳು ಬೀಳಬಾರದು ಮೊದಲಾದ ನಿಷೇಧಗಳನ್ನು ಬ್ರಾಹ್ಮಣರು ಬಲವಂತವಾಗಿ ಹೇರಿರಬೇಕು. ತಮಗಾದ ಅಪಮಾನವನ್ನು ಮುಚ್ಚಿಕೊಳ್ಳುವ ಸಲುವಾಗಿ ಸತ್ಯಘಟನೆಯನ್ನು ತಿರುಚಿ ಮಾರಮ್ಮನೇ ಗಂಡನನ್ನು ಕೊಂದಳು ಎಂದು ಮಾರ್ಪಡಿಸಿ, ಹಾಗೆ ಉಗ್ರರೂಪ ತಾಳಿದ ಮಾರಮ್ಮನ ಶಾಂತಿಗಾಗಿ ಕೋಣನನ್ನು ಬಲಿಕೊಡಬೇಕೆಂಬ ಸಂಪ್ರದಾಯವನ್ನು ಆಚರಣೆಗೆ ತಂದಿರಬೇಕು. ವೇದಕಾಲದ ಗೋಮಾಂಸ ಭಕ್ಷಕರಾದ ಬ್ರಾಹ್ಮಣರು ತಮ್ಮ ಆಚಾರಗಳನ್ನು ಉಗ್ರದೇವಿಯಾದ ಎಲ್ಲಮ್ಮ ಮಾರಮ್ಮಗಳ ಬಲಿರೂಪದಲ್ಲಿ ಮುಂದುವರಿಯುವಂತೆ ಮಾಡಿರಲೂಬಹುದು.

ಪುರಾಣೋಕ್ತ ರೇಣುಕೆಯ ಕಥೆ ಕೃತ ಯುಗದಷ್ಟು ಪ್ರಾಚೀನವಾದುದು. ತ್ರೇತಾಯುಗದಲ್ಲಿ ಸೀತೆಯಾಗಿ, ದ್ವಾಪರ ಯುಗದಲ್ಲಿ ದ್ರೌಪದಿಯಾಗಿ, ಕಲಿಯುಗದಲ್ಲಿ ಎಲ್ಲಮ್ಮನಾಗಿ ಮೆರೆದವಳು. ಇವಳ ಕಥೆ ರಾಮಾಯಣದ ಬಾಲಕಾಂಡದಲ್ಲಿ ಉಲ್ಲೇಖಿತವಾಗಿದೆ. ವಾಯು, ಮತ್ಸ್ಯ, ಮಾರ್ಕಂಡೇಯ, ಬ್ರಹ್ಮಾಂಡ ಮತ್ತು ಸ್ಕಂದ ಪುರಾಣಗಳಲ್ಲಿ ತ್ರಿಪುರ ರಹಸ್ಯಾ, ಹರಿವಂಶ ಭಾಗವತಗಳಲ್ಲಿಯೂ ಬಂದಿದೆ. ಮಹಾಭಾರತದ ಆದಿ, ಸಭಾ, ಅನುಶಾಸನ, ವನ ಪರ್ವಗಳಲ್ಲಿ ಬಂದಿದೆ. ಇವುಗಳು ಕಥಾ ಸಾರಾಂಶವನ್ನು ಆಕರ–೧ ಮತ್ತು ೨ ಎಂದೂ, ಜೈನ ಧರ್ಮದ ಗುಣಭದ್ರನ ಮಹಾಪುರಾಣದ ಉತ್ತರ ಭಾಗದಲ್ಲಿ ಬರುವ ಕಥೆಯನ್ನು ಆಕರ ಮೂರು ಎಂದೂ ಹೆಸರಿಸಲಾಗಿದೆ. ಆಕರ ಒಂದು ಮತ್ತು ಎರಡರಲ್ಲಿ ವಿಷ್ಣು ಮತ್ತು ಶಿವ – ಶಕ್ತಿಯರ ಪ್ರಭಾವ ಕಂಡು ಬಂದರೆ ಆಕರ ಮೂರರಲ್ಲಿ ಜೈನಧರ್ಮದ ಪ್ರಭಾವವಿರುವುದನ್ನು ಗಮನಿಸಬಹುದು. ಪುರಾಣಾಧಾರಿತ ಆಧುನಿಕ ಕಾವ್ಯಗಳನ್ನು ಆಕರ ನಾಲ್ಕು ಎಂದು ಹೆಸರಿಸಿದೆ.

ಪುರಾಣೋಕ್ತ ರೇಣುಕೆಯ ಕಥೆ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿನಲ್ಲಿ ವೈದಿಕ, ಶೈವ, ಶಾಕ್ತ, ಧಾರ್ಮಿಕ ಹಿನ್ನೆಲೆಯಲ್ಲಿ ಬೆಸೆಯಲ್ಪಟ್ಟಿದೆ. ಇದು ಸಮಾಜದ ಮೇಲು ಕೀಳುಗಳ ಸಂಘರ್ಷವನ್ನು ಪ್ರತಿನಿಧಿಸಿದರೂ ಸಹ ಉಚ್ಚ ವರ್ಗದ ಮೇಲ್ಮೈಯನ್ನು ಸ್ಪಷ್ಟವಾಗಿ ಎತ್ತಿ ತೋರಿಸುತ್ತದೆ. ರೇಣುಕೆ

ಕ್ಷತ್ರಿಯಳಾಗಿ ಬ್ರಾಹ್ಮಣ ಜಮದಗ್ನಿಯನ್ನು ಮದುವೆಯಾಗುವುದು. ಅವಳ ಶೀಲ ಶಂಕಿಸಿ ಶಾಪ ಕೊಡುವುದು ಮತ್ತು ಕೊನೆಗೆ ಕೊಲ್ಲುವುದು ಬ್ರಾಹ್ಮಣ ಕ್ಷತ್ರಿಯ ಸಂಘರ್ಷವೆಂದೂ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ ರೇಣುಕೆಯ ಸ್ಥಾನದಲ್ಲಿ ಅಪ್ಪಿತಪ್ಪಿ ಒಮ್ಮೆಯಾದರೂ ಎಲ್ಲಮ್ಮನ ಹೆಸರು ಹೇಳದಿರುವುದು ರೇಣುಕೆಗೆ ಆರ್ಯ ಪ್ರಾತಿನಿಧ್ಯವನ್ನು ವಹಿಸಿ ಎಲ್ಲಮ್ಮನಿಗೆ ಮುಂಡ–ದ್ರಾವಿಡರ ಪ್ರಾತಿನಿಧ್ಯ ನೀಡಲು ಇಷ್ಟಪಡದೆ ಕ್ಷತ್ರಿಯ–ಬ್ರಾಹ್ಮಣ ಎಂಬ ವೈದಿಕ ಚೌಕಟ್ಟಿನಲ್ಲಿಯೇ ನಿಲ್ಲಿಸಿಕೊಂಡಿದ್ದಾರೆ. ಜೈನ ಧರ್ಮದ ರೇಣುಕೆಯ ಕಥೆ ಲೌಕದ ದೃಷ್ಟಿಯಿಂದ ಕೂಡಿ ಹೆಚ್ಚು ಜನಪರವಾಗಿರುವುದು ಕಂಡುಬರುತ್ತದೆ. ಆದ್ದರಿಂದ ಪುರಾಣೋಕ್ತ ಕಥಾ ಆಕರಗಳಲ್ಲಿ ಇದಕ್ಕೆ ಪ್ರತ್ಯೇಕವಾದ ಸ್ಥಾನವನ್ನು ನೀಡಲಾಗಿದೆ.

ಇಕ್ಷ್ವಾಕು ವಂಶದ ರಾಜನಾದ ರೇಣುಕರಾಜ ಕಾಶ್ಮೀರವನ್ನಾಳುತ್ತಿದ್ದನು. ಇವನಿಗೆ ಪ್ರಸೇನಜಿತ ಎಂಬ ಪರ್ಯಾಯ ಹೆಸರು ಮಹಾಭಾರತದಲ್ಲಿದೆ. ವಾಯುಪುರಾಣದಲ್ಲಿ ಸುವೇಣ ಮುನಿಯೆಂದು ಹೆಸರಿಸಲಾಗಿದೆ. ಪ್ರಸೇನಜಿತನ ಸಾಕುಮಗಳು ರೇಣುಕೆ, ಏಕವೀರಾ, ಜಗದಂಬ, ಆದಿಶಕ್ತಿ – ಎಂಬ ಹೆಸರುಗಳೂ ಇವೆ. ಮಹಾಭಾರತದಲ್ಲಿ ಕಮಲದಲ್ಲಿ ಹುಟ್ಟಿದ ಅಯೋನಿಜೆ ಎಂದು ಹೇಳಿದ್ದರೆ, ವಾಯು ಪುರಾಣದಲ್ಲಿ ಯಜ್ಞ ಕುಂಡದಲ್ಲಿ ಮೂಡಿ ಬಂದಿವಳೆಂದಿದೆ. ಅಲ್ಲದೆ ಇವಳಿಗೆ ಕಾಮಾಲಿ ಎಂಬ ಹೆಸರೂ ಇದೆ. ಉಗ್ರ ತಪೋನಿಷ್ಠನಾದ ಭೃಗುವಂಶದ ಜಮದಗ್ನಿಯ ಜೊತೆ ಮದುವೆಯಾಗುತ್ತದೆ. ಜಮದಗ್ನಿ ಮಹಾ ಮುಂಗೋಪಿ. ಅವನ ದೈನಂದಿನ ಚಟುವಟಿಕೆಗಳು ಶಿಸ್ತು ಮತ್ತು ಕಟ್ಟುನಿಟ್ಟಾದ ನಿಯಮಗಳಿಂದ ಕೂಡಿದ್ದವು. ರೇಣುಕೆ ಅವನೊಂದಿಗೆ ಹೊಂದಿಕೊಂಡು ಪತಿಯೇ ದೇವರೆಂಬ ಭಾವನೆಯಿಂದ ಅವನ ಸೇವೆ ಮಾಡುತ್ತಾ ಆದರ್ಶ ಪತಿವ್ರತಾ ಶಿರೋಮಣಿಯಾಗಿದ್ದಳು. ಕಾಲಾನುಕ್ರಮದಲ್ಲಿ ಇವರಿಗೆ ರಾಮಣ್ವಂತ, ಸುವೇಣ, ವಸು, ವಿಶ್ವಾವಸು ಮತ್ತು ಪರಶುರಾಮ ಎಂಬ ಐದು ಜನ ಮಕ್ಕಳಾದರು. ಕೊನೆಯವನಾದ ಪರಶುರಾಮನದು ವಿಷ್ಣುವಿನ ಆರನೆಯ ಅವತಾರವೆನ್ನುತ್ತಾರೆ.

ಜಮದಗ್ನಿಯ ವ್ರತಾನುಷ್ಠಾನಕ್ಕೆ ಪ್ರತಿದಿನ ನದಿಯಿಂದ ನೀರು ತರುವುದು ರೇಣುಕೆಯ ಮೊದಲ ಕೆಲಸವಾಗಿತ್ತು. ಅವಳ ಪಾತಿವ್ರತ್ಯದ ಮಹಿಮೆಯಿಂದ ಮರಳಿನ ಗಡಿಗೆಯಲ್ಲಿ ಹಾವಿನ ಸಿಂಬೆಯ ಮೇಲೆ ನೀರು ತರುತ್ತಿದ್ದಳು. ಒಂದು ದಿನ ಅವಳು ಗಂಗಾನದಿಗೆ ಎಂದಿನಂತೆ ನೀರು ತರಲು ಹೋದಾಗ ಚಿತ್ರರಥನೆಂಬ ಗಂಧರ್ವ ರಾಜನು ತನ್ನ ಮಡದಿಯೊಂದಿಗೆ ಜಲಕ್ರೀಡೆಯಾಡುತ್ತಿದ್ದನು. ಈ ದೃಶ್ಯವನ್ನು ನೋಡಿ ರೇಣುಕೆಯ ಮನಸ್ಸು ಕ್ಷಣಕಾಲ ವಿಚಲವಾಯಿತು. ಮರಳಿನ ಮಡಿಕೆ ಒಡೆದು ಹೋಯಿತು, ಸಿಂಬೆಯಾಗಿದ್ದ ಹಾವು ಹರಿದು ಹೋಯಿತು. ವ್ರತಾನುಷ್ಠಾನದ ಸಮಯ ಮೀರಿ ತಡವಾಗಿ ಆಶ್ರಮಕ್ಕೆ ಬಂದಳು. ದಿವ್ಯಜ್ಞಾನಿಯಾದ ಜಮದಗ್ನಿಗೆ ಎಲ್ಲವೂ ಅರಿವಿಗೆ ಬಂತು. ವ್ರತಭ್ರಷ್ಟಳು ಮಾನಸಿಕ ವ್ಯಭಿಚಾರಿಣಿಯೂ ಆದ ಮಡದಿಯನ್ನು ಕೊಲ್ಲುವಂತೆ ಕೋಪಾವಿಷ್ಟನಾದ ಜಮದಗ್ನಿ ಮಕ್ಕಳಿಗೆ ಆಜ್ಞಾಪಿಸಿದನು. ಆಶ್ರಮದಲ್ಲಿದ್ದ ನಾಲ್ಕು ಜನ ಹಿರಿಯರು ಮಾತೃವಾತ್ಸಲ್ಯದಿಂದ ನಿರಾಕರಿಸುತ್ತಾರೆ.

ಋಷಿಯ ಕೋಪಾಗ್ನಿ ಅವರನ್ನು ಸುಟ್ಟು ಭಸ್ಮ ಮಾಡುತ್ತದೆ. ದರ್ಭೆ ತರಲು ಹೋಗಿದ್ದ ಪರಶುರಾಮ ತಡವಾಗಿ ಆಶ್ರಮಕ್ಕೆ ಬರುತ್ತಾನೆ. ವಿಷಯ ಗ್ರಹಿಸುವ ಮೊದಲೆ ತಂದೆ ಮಗನಿಗೆ ತಾಯಿಯ ತಲೆಯನ್ನು ಕಡಿಯುವಂತೆ ಆಜ್ಞಾಪಿಸುತ್ತಾನೆ. ಪಿತೃ ವಾಕ್ಯ ಪರಿಪಾಲಕನಾದ ಪರಶುರಾಮ ಹಿಂದು ಮುಂದು ನೋಡದೆ ಕ್ಷಣ ಮಾತ್ರದಲ್ಲಿ ತಾಯಿಯ ತಲೆಯನ್ನು ಗಂಡುಗೊಡಲಿಯಿಂದ ತುಂಡರಿಸುತ್ತಾನೆ. ತನ್ನ ಇಷ್ಟಾರ್ಥವನ್ನು ಈಡೇರಿಸಿದ ಪರಶುರಾಮನನ್ನು ನೋಡಿ ಸಂತೃಪ್ತನಾಗಿ ಬೇಕಾದ ವರಗಳನ್ನು ಕೇಳುವಂತೆ ಹರಸುತ್ತಾನೆ. ಋಷಿಯ ಅನುಗ್ರಹದಿಂದ ತಾಯಿಯನ್ನೂ, ಅಣ್ಣಂದಿರನ್ನೂ ಬದುಕಿಸಿಕೊಳ್ಳುತ್ತಾನೆ.

**ಮೈಲಾರಲಿಂಗನ ಕಾರ್ಣೀಕಗಳು***

ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಕೆಲವೊಂದು ಮನೆತನದವರು ಮೈಲಾರ ಲಿಂಗನನ್ನು ಆರಾಧ್ಯದೈವವನ್ನಾಗಿ ಸ್ವೀಕರಿಸುವುದುಂಟು. ಇವರು ಭಾನುವಾರದಂದು ವಾರದ ಮಡಿ ಮೈಲಿಗೆಯ ವಾರವೆಂದು ಆಚರಿಸುತ್ತಾರೆ. ಗಂಡುಮಕ್ಕಳ ಮದುವೆ ಸಂಬಂಧಗಳಲ್ಲಿ ಮೈಲಾರ ಲಿಂಗನಿಗೆ ವಿಶೇಷವಾದ ಪೂಜೆ ಪುನಸ್ಕಾರಗಳನ್ನು ಸಲ್ಲಿಸುವುದುಂಟು. ವರ್ಷದ ಇಡಿ ಭವಿಷ್ಯವನ್ನು ಈ ಕಾರ್ಣೀಕಗಳಿಂದ ಗುರುತಿಸುವ ಸಂಪ್ರದಾಯ ಈ ಸಮುದಾಯದವರಲ್ಲಿದೆ.

೧೯೦೦ ಮುತ್ತಿನ ಮಳೆ ಸುರಿದಿತಲೇ ಬಹುಪರಾಕ್

೧೯೦೧ ಹುಟ್ಟಿದ ಕಂದ ಕಷ್ಟಪಟ್ಟು ಸುಖಪಡಿತಲೇ ಪರಾಕ್

೧೯೦೨ ಅಂಬಲಿ ಹಳಸಿತಲೇ ಪರಾಕ್

೧೯೦೩ ಭೂಲೋಕಕ್ಕೆ ಮಬ್ಬುಗತ್ತಲೇ ಬಹು ಪರಾಕ್

೧೯೦೪ ಸಂಪಲೇ ಬಹು ಪರಾಕ್

೧೯೦೫ ಅಕಾಶಕ್ಕೆ ಶಿಡ್ಲು ಬಡಿತಲೇ ಬಹು ಪರಾಕ್

೧೯೦೭ ಸವನಿದಯಲೇ ಬಹು ಪರಾಕ್

೧೯೦೮ ಮರ್ತ್ಯಕ್ಕೆ ಮಬ್ಬುಗತ್ತಲೇ ಬಹು ಪರಾಕ್

೧೯೦೯ ಸಂತೃಪ್ತಿ ಆದಿತಲೇ ಬಹು ಪರಾಕ್

೧೯೧೦ ಕಲಕು ಮಲಕು ಆದಿತಲೇ ಬಹು ಪರಾಕ್

೧೯೧೧ ಮಳೇ ಬೆಳೆ ಸಂಪಲೇ ಬಹು ಪರಾಕ್

೧೯೧೨ ಶಿಶುವಿಗೆ ಕಸಿವಾಲಾವಾದಿತಲೇ ಬಹು ಪರಾಕ್

೧೯೧೩ ಸಣ್ಣದ್ದೊಂದು ದಿನ ಬಂತಲೇ ಬಹು ಪರಾಕ್

೧೯೧೭ ಸಂತೃ ಪ್ತಿಯಲೇ ಪರಾಕ್

೧೯೧೬ ಸವರೀದಯಲೇ ಬಹು ಪರಾಕ್

೧೯೨೦ ಬೆಳೆ ಚಂದು ಮಳೆ ಮಂದಲೇ ಬಹು ಪರಾಕ್

೧೯೨೫ ಕಷ್ಟ ಬಂದು ಸುಖ ಬಂತಲೇ ಪರಾಕ್

೧೯೩೧ ಸಂತೃಪ್ತ ಪರಾಕ್

೧೯೩೬ ಕಪ್ಪತ್ ಗುಡ್ಡಕ್ಕೆ ಕಟ್ಟು ಇರವಿ ಮುಕ್ಕರಿದವಲೇ ಪರಾಕ್

೧೯೪೬ ಮುತ್ತಿನ ಮಾಲಿ ಚೂರಾಯಿತಲೇ ಪರಾಕ್

೧೯೪೯ ಮುತ್ತು ಒಡೆದು ಮಾಲಿ ಆತಲೇ ಪರಾಕ್

೧೯೫೬ ಮುತ್ತಿನ ರಾಶಿ ದುಂಡಾಗುತಲೇ ಪರಾಕ್

೧೯೭೦ ಹುಟ್ಟಿದ ಕೂಸು ಕಷ್ಟಪಟ್ಟತಲೇ ಪರಾಕ್

೧೯೬೧ ಸಂಕಷ್ಟ ನಿವಾರಣೆಯಲೇ ಪರಾಕ್

೧೯೬೨ ಮುತ್ತು ಮೂರು ಭಾಗ ಆತಲೇ ಪರಾಕ್

೧೯೬೪ ಸರಪಳಿ ಹರಿದು ಚೂರಾತಲೇ ಪರಾಕ್

೧೯೬೫ ಸಣ್ಣದಿನ ಬಂದಿತಲೇ ಪರಾಕ್

೧೯೭೦ ಸಂಕಷ್ಟ ನಿವಾರಣೆ ಆಯಿತಲೇ ಪರಾಕ್

೧೯೭೩ ಶಿಶುವಿಗೆ ಕಸಿವಾಲ ಆದಿತಲೇ ಪರಾಕ್

೧೯೭೪ ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್

೧೯೮೫ ಇಬ್ಬನಿ ಕರಗಿತಲೇ ಪರಾಕ್

೧೯೭೬ ಸಮನಿಧಿ ಸಂಪಲೇ ಪರಾಕ್

೧೯೯೨ ಆಕಾಶದ ಗುಂಡು ತೂಗಿತಲೇ ಪರಾಕ್

೧೯೯೩ ಹುಟ್ಟಿದ ಕೂಸಿನ ಮೇಲೆ ಬಂಗಾರದ ಗಿಣಿ ಕೂದ್ರತಲೇ ಪರಾಕ್

೧೯೯೫ ಆಕಾಶಕ್ಕೆ ಗುಂಡು ತೂರಿತಲೇ ಪರಾಕ್

**ಮಠಮಾನ್ಯಗಳ ಪರಂಪರೆ**

ಬಾವಸಾರ ಕ್ಷತ್ರಿಯ ಸಮುದಾಯದ ಸಾಂಸ್ಕೃತಿಕ ಪರಿಚಯದಲ್ಲಿ ಮಠಮಾನ್ಯಗಳ ಪರಂಪರೆಯೂ ಇದೆ.

೧. ತುಳಜಾಪುರದಲ್ಲಿ ಭಾವಸಾರ ಕ್ಷತ್ರಿಯ ಗುರುಗಳ ಮಠವಿದೆ. ಆ ಮಠಕ್ಕೆ ಶಿವಾರಣ್ಯಮಠವೆಂದು ಕರೆಯುತ್ತಿದ್ದರು. ಹಿಂದೆ ಇಲ್ಲಿ ಗೊಂದಾರಣ್ಯ ಗುರುಗಳಿದ್ದರು.

೨. ಕರ್ಜಗಿ ಮಠದಲ್ಲಿ ಭೂತೇಶ್ವರ ಮಹಾರಾಜರು ಗುರುಗಳಾಗಿದ್ದರು.

೩. ಧಾಮಣಗಾವ್ ಮಠದಲ್ಲಿ ಬೋಧಲೆ ಮಹಾರಾಜರಿದ್ದರು.

ಈ ಮಠಗಳು ಬಾಹುಸಾರ ಕ್ಷತ್ರಿಯ ಸಮುದಾಯದ ಧರ್ಮಪ್ರಚಾರ ಕೇಂದ್ರಗಳಾಗಿದ್ದವು.

*ಅಡಿಟಪ್ಪಣಿ: ಮೈಲಾರಲಿಂಗನ ಕಾವ್ಯ ಸಂಪಾದಕರು ಡಾ॥ ಮಂಜುನಾಥ ಬೇವಿನಕಟ್ಟಿ, ಪುಟ ಸಂ. ೪೩೦–೪೩೩

ಧರ್ಮವು ಅತ್ಯಂತ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಈ ಧರ್ಮ, ಯುಗಧರ್ಮಕ್ಕನುಗುಣವಾಗಿ ಹೊಸ ರೂಪವನ್ನು, ಹೊಸತತ್ವವನ್ನು ಹೊಂದಿ ತನ್ನ ಇರುವಿಕೆಯನ್ನು ಸ್ಥಿರಪಡಿಸಿಕೊಂಡಿದೆ. ಶಿವಮೊಗ್ಗದ ಬಾಹುಸಾರ ಕ್ಷತ್ರಿಯ ಸಮುದಾಯವು ಬೇರೆ ಬೇರೆ ಜಾತಿಯ ಧರ್ಮವನ್ನು ಅಳವಡಿಸಿಕೊಂಡಿದೆ. ಆದ್ದರಿಂದ ಇವರು ಅನೇಕ ದೇವ-ದೇವತೆಗಳನ್ನು ಪೂಜಿಸುತ್ತಾರೆ. ಎಲ್ಲಮ್ಮ, ಮೈಲಾರಲಿಂಗ, ಶನೇಶ್ವರ, ಮಾರಮ್ಮ, ವಿಘ್ನೇಶ್ವರ, ಆಂಜನೇಯ ಮುಂತಾದ ದೇವರಲ್ಲಿ ಅಪಾರ ಭಕ್ತಿ. ತಿರುಪತಿ ವೆಂಕಟರಮಣ, ವೇಣುಗೋಪಾಲ, ಶ್ರೀ ಶೈಲ, ಚಾಮುಂಡಿ ಬೆಟ್ಟ ಮುಂತಾದ ದೇವರುಗಳಿಗೆ ಯಾತ್ರೆ ಹೋಗುವುದೂ ಉಂಟು. ಎಲ್ಲಮ್ಮ, ಮಾರಮ್ಮ, ಮಾತೆಂಗಮ್ಮ, ಹುಲಿಗೆಮ್ಮ, ಇತ್ಯಾದಿ ಶಕ್ತಿ ದೇವತೆಗಳ ಉಪಾಸನೆಯನ್ನು ಇವರು ಮಾಡುತ್ತಾರೆ.

ಕೆಲವು ದೇವ, ದೇವತೆಗಳಿಗೆ ಕುರಿ, ಕೋಳಿಗಳನ್ನು ಬಲಿಕೊಟ್ಟು ಅವುಗಳನ್ನು ಶಾಂತ ಪಡಿಸಿ ಮಾಂಸ ಭಕ್ಷಣ ಮಾಡುತ್ತಾರೆ. ಕೆಲವು ಗುಡಿಗಳಿಗೆ ವಿಶಿಷ್ಟ ಪೂಜೆ ಸಲ್ಲಿಸುತ್ತಾರೆ. ಕೆಲವು ಹಿಂದೂಗಳ ಹಬ್ಬ-ಹರಿದಿನಗಳನ್ನು ಇವರೂ ಆಚರಿಸುತ್ತಾರೆ. ಒಂದು ವೇಳೆ ಮನೆದೇವರುಗಳಿದ್ದರೆ ಆ ದಿವಸಗಳಲ್ಲಿ ಅವರ ಪೂಜೆಯನ್ನು ಮಾಡುತ್ತಾರೆ. ಕೆಲವರು ಮಾಟ ಮಂತ್ರ, ಮುಂತಾದ ಮೂಢನಂಬಿಕೆಗಳನ್ನು ನಂಬುತ್ತಾರೆ. ಈ ರೀತಿಯಾದ ಬಾಹುಸಾರ ಕ್ಷತ್ರಿಯ ಸಮಾಜದವರು ಧರ್ಮ, ಧರ್ಮಾಚರಣೆಯನ್ನು ಆಚರಿಸುತ್ತಾರೆ.ಇದರಷ್ಟೇ ಧಾರ್ಮಿಕತೆಗೂ ಮಹತ್ವವನ್ನು ಕೊಡುತ್ತಾರೆ.

ಬಾಹುಸಾರ ಕ್ಷತ್ರಿಯ ಸಮುದಾಯದವರು ಯಾವುದೇ ಧಾರ್ಮಿಕವಾದ ಆಚರಣೆ ಇದ್ದರೆ ಎಲ್ಲರೂ ಕೂಡಿ ಆಚರಿಸುತ್ತಾರೆ. ಎಲ್ಲರೂ ಒಂದೇ ಎಂಬ ಭಾವನೆಯಿಂದ ಗ್ರಾಮದಲ್ಲಿ ಹಬ್ಬ-ಹರಿದಿನಗಳು, ಜಾತ್ರೆ-ಉತ್ಸವ ಗಳಂತಹ ಕಾರ್ಯಗಳನ್ನು ಕೂಡಿಯೇ ಆಚರಿಸುತ್ತಾರೆ. ಕೆಲವು ಧಾರ್ಮಿಕ ವಿಧಿಯನ್ನು ಆಚರಿಸುವುದಿದ್ದರೆ ಪ್ರತಿ ಕುಟುಂಬ ಮತ್ತು ಪ್ರತಿ ವ್ಯಕ್ತಿಯೂ ಮಡಿ-ಮೈಲಿಗೆ ನಿಯಮಗಳನ್ನು ಪಾಲಿಸುವರು. ಯಾವುದೇ ಕುಟುಂಬದಲ್ಲಿ ಮರಣ, ಜನನ ಸಂಭವಿಸಿದರೂ ಎಲ್ಲರೂ ಕೂಡಿಯೇ ಆಚರಿಸುತ್ತಾರೆ.

ಕೆಲವು ಕೊಲೆ, ಸುಲಿಗೆ, ಕಟ್ಲೆ, (ಕಾನೂನು) ಅತ್ಯಾಚಾರ ಮುಂತಾದ ಹೀನ ಕೃತ್ಯಗಳು ಜರುಗಿದರೆ ತಮ್ಮ ಸಮಾಜದ ಹಿರಿಯರು ಹಾಗೂ ಎಲ್ಲರೂ ಒಟ್ಟಿಗೆ ಸೇರಿ ಬಗೆಹರಿಸಿಕೊಳ್ಳುತ್ತಾರೆ. ಹೀಗೆ ಧಾರ್ಮಿಕವಾಗಿ ಯಾವುದೇ ಕಾರ್ಯಗಳನ್ನು ಇಡೀ ಊರಿಗೆ ಊರೇ ಒಂದು ಗುಂಪು ಅಥವಾ ಒಂದು ಸಮಾಜ ಎನ್ನುವ ಭಾವನೆಯನ್ನು ಆಚರಿಸುತ್ತಾರೆ. ಹೀಗಾಗಿ ಈ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಮೇಲೆ ಧರ್ಮ ಸಾಕಷ್ಟು ಪರಿಣಾಮ ಮತ್ತು ಪ್ರಭಾವ ಬೀರಿದೆ.

# ಅಧ್ಯಾಯ ೪

## ಬಾಹುಸಾರ ಕ್ಷತ್ರಿಯ ಸಮುದಾಯದ ಆಚರಣಾಲೋಕ

೪.೧ ವಾರ್ಷಿಕಾವರ್ತನದ ಆಚರಣೆಗಳು

೪.೨ ಜೀವನಾವರ್ತನದ ಆಚರಣೆಗಳು

೪.೩ ನಂಬಿಕೆ, ವಿಧಿ – ನಿಷೇಧಗಳು

೪.೪ ಹರಕೆಗಳು

# ಅಧ್ಯಾಯ ೪

## ಬಾಹುಸಾರ ಕ್ಷತ್ರಿಯ ಸಮುದಾಯದ ಆಚರಣಾಲೋಕ

ಅತ್ಯಂತ ಪ್ರಾಚೀನ ಕಾಲದಿಂದಲೂ ಹಬ್ಬ ಹರಿದಿನಗಳನ್ನು ಎಲ್ಲಾ ಸಮುದಾಯದವರು ವಿವಿಧ ಬಗೆಯಲ್ಲಿ ಅಚರಿಸುವಂತೆ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರೂ ಕೂಡಾ ಆಚರಿಸುತ್ತಾ ಬಂದಿರುವುದು ಸರ್ವೇಸಾಮಾನ್ಯವಾಗಿದೆ. ಕಾಲ ಕಾಲಕ್ಕೆ ತಕ್ಕಂತೆ ಹಬ್ಬಗಳು ಅನೇಕ ಬದಲಾವಣೆಗಳಿಂದ ಸಾಗಿ ಬಂದಿದೆ. ಮೊದಮೊದಲು ಪ್ರಕೃತಿಯ ಶಿಶುವಾಗಿದ್ದ ಮನುಷ್ಯನು ಪ್ರಕೃತಿಯ ವಿಶಿಷ್ಟ ಶಕ್ತಿಗಳಾದ ಪಂಚಭೂತಗಳನ್ನು ತನ್ನ ರಕ್ಷಣೆಗಾಗಿ ಭಯ, ಭಕ್ತಿಯಿಂದ ಕೊಂಡಾಡಿದನು. ಅಲ್ಲದೇ ಪ್ರಕೃತಿಯ ದುಷ್ಟಶಕ್ತಿಗಳೂ ವಿಸಂಗತ ರೂಪಗಳೂ ಆದಿ ಮಾರಿ, ಮಸಣಿ, ಭೂತ-ಜೇತಾಳಗಳನ್ನು ತನ್ನ ರಕ್ಷಣೆಗಾಗಿ ಬೇಡಿದನು. ಇದಕ್ಕಾಗಿ 'ಬಲಿ' ಯನ್ನರ್ಪಿಸಿದನು. ಉರಗ, ಖಡ್ಗ, ಮೃಗಾದಿಗಳಿಂದ ಪಾರಾಗಲು ಪ್ರಯತ್ನ ಮಾಡಿದನು. ಕಾಲ ಕ್ರಮೇಣ ಮನುಷ್ಯನ ಬುದ್ಧಿ-ಭಾವನೆಗಳು ಹಾಗೂ ವಿಶಿಷ್ಟ ಶಕ್ತಿಗಳು ಅವನ ಚೇತನವನ್ನು ಅರಳಿಸಿದಂತೆ ಅನೇಕ ಮಾರ್ಪಾಡುಗಳಾದವು.

ಅ ಮಾರ್ಪಾಡುಗಳೇ ಇವತ್ತಿನ ಹಬ್ಬ ಹರಿದಿನಗಳಾಗಿ ನಡೆದುಕೊಂಡು ಬಂದಿವೆ. ಕೃಷಿ ಪ್ರಧಾನ ನೆಲೆಯಾಗಿರುವ ಶಿವಮೊಗ್ಗ ಜಿಲ್ಲೆಯಲ್ಲಿ ಆಚರಿಸಲ್ಪಡುವ ಬಹುತೇಕ ಹಬ್ಬಗಳು ಕೃಷಿಗೆ ಸಂಬಂಧಪಟ್ಟವುಗಳಾಗಿವೆ. ಅದರಲ್ಲಿ ಕಾರಹುಣ್ಣಿಮೆ, ಜೋಕುಮಾರನ ಹುಣ್ಣಿಮೆ, ಹಟ್ಟಿಹಬ್ಬ, ಸಂಕ್ರಾಂತಿ, ಎಳ್ಳಮವಾಸ್ಯೆ, ರಾಶಿಹಬ್ಬ, ಖಣದ ಹಬ್ಬ, ಯುಗಾದಿಹಬ್ಬ, ಪಂಚಮಿ ಹಬ್ಬ ಮುಂತಾದವುಗಳನ್ನು ಕೃಷಿ ಸಾಲಿಗೆ ಸೇರಿಸಬಹುದು. ಪ್ರಕೃತಿಯನ್ನು ದೇವರೆಂದೇ ಆರಾಧಿಸುವ ಬಾಹುಸಾರ ಕ್ಷತ್ರಿಯ ಸಮುದಾಯದವರು ಬೇರೆ ಬೇರೆ ಸಂದರ್ಭಗಳಲ್ಲಿ ಈ ಹಬ್ಬಗಳನ್ನು ಆಚರಿಸುವರು. ಹಬ್ಬಗಳು ಭಾರತೀಯ ಸಂಸ್ಕೃತಿಯಲ್ಲಿ ಯಾವ ಕಾಲದಲ್ಲಿ ಯಾವ ಗಳಿಗೆಯಲ್ಲಿ ಅಂದರೆ ಹಗಲು, ಇರುಳು, ದಿನ, ವಾರ, ತಿಥಿ, ತಿಂಗಳು, ವರ್ಷಗಳಲ್ಲಿ ಧರ್ಮದ ಅನುಸಾರವಾಗಿ ಆಚರಿಸಲ್ಪಡುತ್ತವೆ. ಇದು ಭಾರತೀಯ ಸಮುದಾಯಕ್ಕೆ ಅನ್ವಯವಾಗುವಂತೆ ಬಾಹುಸಾರ ಕ್ಷತ್ರಿಯ ಸಮುದಾಯಕ್ಕೆ ಸಹ ಇದು ಅನ್ವಯವಾಗುತ್ತದೆ. ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ತಮ್ಮ ವೈಯಕ್ತಿಕ (individuals) ದಿನನಿತ್ಯ ಹಬ್ಬ-ಹರಿದಿನಗಳನ್ನು ಆಚರಿಸುವುದು ಕಂಡು ಬರುತ್ತದೆ. ಉದಾ : ಸೋಮವಾರದಿಂದ ಹಿಡಿದು ಸೋಮವಾರದವರೆಗೆ ತಮ್ಮ ಮನೆಯ ದೇವರುಗಳು ಮತ್ತು ಇನ್ನುಳಿದ ದೇವರುಗಳನ್ನು ಪೂಜಿಸುವುದು. ಹೆಚ್ಚಾಗಿ ಈ ಜನ ಆಂಜನೇಯ, ಎಲ್ಲಮ್ಮ, ತಿರುಪತಿ, ಅಂಬಾಭವಾನಿ, ತಿಮ್ಮಪ್ಪ, ಶ್ರೀ ಶೈಲ ಮಲ್ಲಿಕಾರ್ಜುನ, ಮೈಲಾರ ಲಿಂಗ ಮುಂತಾದ ದೇವರುಗಳಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟು ಪೂಜಿಸುತ್ತಾರೆ. ಇವರಲ್ಲಿ ಇನ್ನುಳಿದ ಹಬ್ಬಗಳನ್ನು ಅಚರಿಸುವಲ್ಲಿ ಉಳಿದವರಿಗಿಂತ ಹೆಚ್ಚಿನ ಭಿನ್ನತೆ ಕಾಣಸಿಗುವುದಿಲ್ಲ. ಕೆಲವೊಂದು ಹಬ್ಬ ಹರಿದಿನಗಳು ವ್ಯಕ್ತಿಯ ಆರ್ಥಿಕ ಸ್ಥಿತಿಗತಿಗಳಿಗೆ ಅನುಗುಣವಾಗಿ ಆಚರಿಸಲ್ಪಡುವುದರಿಂದ ಆರ್ಥಿಕವಾಗಿ ಹಿಂದುಳಿದ ಬಾಹುಸಾರ ಕ್ಷತ್ರಿಯರು ತಮ್ಮ ದಿನ ನಿತ್ಯ ಆಚರಿಸುವ

ಧಾರ್ಮಿಕ ಹಬ್ಬಗಳನ್ನು ಆಚರಿಸುವುದಿಲ್ಲ. ತಮಗೆ ಕೆಲವು ಮುಖ್ಯವಾದ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಇದಕ್ಕಿಂತ ಕೇವಲ ಬಡವರು ಹಬ್ಬ ಹರಿದಿನಗಳನ್ನು ತಮ್ಮ ಆರ್ಥಿಕ ಸ್ಥಿತಿಗತಿಗೆ ತಕ್ಕಂತೆ ಆಚರಿಸುತ್ತಾರೆ. ಆದರೆ ಧರ್ಮದ ಅನುಸಾರ ತಿಳಿಯಬಲ್ಲ ಕುಟುಂಬಗಳು ಕಟ್ಟೆಚ್ಚರದಿಂದ (Srictly) ಹಬ್ಬಗಳನ್ನು ಆಚರಿಸುತ್ತಾರೆ. ಧಾರ್ಮಿಕದಿಂದ ಇರುವಂತ ವ್ಯಕ್ತಿಗಳು ದಿನನಿತ್ಯ ಪೂಜೆ ಪುನಸ್ಕಾರಗಳನ್ನು ಮಾಡುವರು. ಇದರ ಒಳಗೆ ಸಾಮಾನ್ಯ ಜನರು (common people) ದಿನನಿತ್ಯ ಪೂಜೆ ಪುನಸ್ಕಾರಗಳನ್ನು ಮಾಡುವುದಿಲ್ಲ. ಒಂದು ವೇಳೆ ಊರುಗಳಲ್ಲಿ ಎಲ್ಲರೂ ಕೂಡಿ ಆಚರಿಸುವಂತಹ ಹಬ್ಬಗಳು ಬಂದರೆ ಜಾತಿ ಮತ ಬೇಧವಿಲ್ಲದೇ ಎಲ್ಲರೂ ಕೂಡಿ ಹಬ್ಬವನ್ನು ಆಚರಿಸುತ್ತಾರೆ. ಇಲ್ಲದಿದ್ದರೆ ತಮ್ಮ ತಮ್ಮ ವೈಯಕ್ತಿಕವಾಗಿ ಹಬ್ಬಗಳನ್ನು ಆಚರಿಸುತ್ತಾರೆ.

ಕೆಲವು ಹಬ್ಬಗಳಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದವರು ಬೇರೆ ಬೇರೆ ಊರುಗಳಿಗೆ ಹೋಗಿದ್ದರೆ ಅವರು ತಮ್ಮ ಊರುಗಳಿಗೆ ಮರಳಿ ಬಂದು, ರಕ್ತ ಸಂಬಂಧಿಕರು, ಬೀಗರು, ಬಂಧುತ್ವ ಹೊಂದಿದವರು ಮತ್ತು ಅಕ್ಕ, ತಂಗಿಯರನ್ನು ಬರಮಾಡಿಕೊಂಡು ಹಬ್ಬಗಳನ್ನು ಅಚರಿಸುತ್ತಾರೆ. ಇದು ವಿಶೇಷವಾಗಿ ಯುಗಾದಿ ಪಾಡ್ಯ, ದೀಪಾವಳಿ ಅದಕ್ಕಿಂತ ಮಹತ್ವದ ಹಬ್ಬ ನಾಗರ ಪಂಚಮಿಗೆ ವಿಶೇಷವಾಗಿ ಸ್ತ್ರೀಯರು ಕೂಡಿ ಆಡಿ ನಲಿದಾಡುವ ಹಬ್ಬಕ್ಕೆ ವಿಶೇಷ ಆಮಂತ್ರಣದ ಮುಖಾಂತರ ಬರಮಾಡಿಕೊಂಡು ಅತ್ಯಂತ ಹರ್ಷೋದ್ಗಾರಗಳಿಂದ ಆಚರಿಸುತ್ತಾರೆ. ಇದೇ ಸಮಯದಲ್ಲಿ ತಮ್ಮ ಮನೆಯ ಬಂಧು ಬಳಗದವರು ಕೂಡಿ ತಮ್ಮ ಮನೆಯ ದೇವರಿಗೆ ಅಥವಾ ಕುಲ, ಗೋತ್ರ, ಹೊಂದಿದ ದೇವರಿಗೆ (ಕುಲದೇವತಾ ಕುಲದೇವರಿಗೆ) ಹೋಗಿ ಬರುತ್ತಾರೆ. ನಾಗರಪಂಚಮಿಯ ಹಬ್ಬದಲ್ಲಿ ಎಲ್ಲರೂ ಕೂಡಿ ನಾಗದೇವರಿಗೆ ಹಾಲು ಎರೆಯುತ್ತಾರೆ. ವಿಶೇಷವಾಗಿ ಈ ಹಬ್ಬವನ್ನು ಮನೆಯ ಹೆಣ್ಣುಮಕ್ಕಳು ಕೂಡಿ ಆಚರಿಸುತ್ತಾರೆ.

ಹೋಳಿ ಹಬ್ಬದಲ್ಲಿ ಈ ಸಮುದಾಯದ ಎಲ್ಲರೂ ಪಾಲ್ಗೊಳ್ಳುತ್ತಾರೆ ಮತ್ತು ವಿಶೇಷವಾಗಿ ದಸರಾ ಮತ್ತು ಸಂಕ್ರಾಂತಿ ಹಬ್ಬಗಳಲ್ಲಿ ಈ ಸಮುದಾಯದವರು ಒಬ್ಬರಿಗೊಬ್ಬರು ಕುಸಿರೆಳ್ಳುಗಳನ್ನು ಕೊಟ್ಟು ತಮ್ಮ ದೇಹಗಳನ್ನು ಮುಟ್ಟಿ ಅಥವಾ ತಮ್ಮ ತಮ್ಮ ಕೈಗಳನ್ನು ಕೊಟ್ಟು ಸತ್ಕರಿಸುತ್ತಾರೆ. ಇದನ್ನು ಎಲ್ಲಾ ಜಾತಿಯವರು ಆಚರಿಸುತ್ತಾರೆ. ಕೆಲವರು ಗಣೇಶ ಹಬ್ಬವನ್ನು ಆಚರಿಸುವುದು ಶಿವಮೊಗ್ಗ ಜಿಲ್ಲೆಯಲ್ಲಿ ಕಂಡು ಬರುತ್ತದೆ. ಮತ್ತೆ ಕೆಲವರು ದಸರಾ, ದೀಪಾವಳಿ, ಹೋಳಿ ಹಬ್ಬ ಮುಂತಾದ ಹಬ್ಬಗಳಲ್ಲಿ ವಿಶೇಷವಾಗಿ ಬೇಟೆಗೆ ಹೋಗುತ್ತಾರೆ. ವಿಶೇಷವಾಗಿ ಅಂದು ಕುಂಬಾರನ ಮನೆಯಿಂದ ಹೊಸದಾದ ಮಡಿಕೆಯನ್ನು ತಂದು (ಎರಡು ಪರಿಯಾನ ಒಂದು ಮಗಿ) ಅದರಲ್ಲಿ ಐದು ಅರಳಿಯ (ಹತ್ತಿಯಿಂದ) ಬತ್ತಿಯನ್ನು ಮಾಡಿ ಈ ಮಡಿಕೆಯಲ್ಲಿ ಹಾಕಿ ದೀಪವನ್ನು ಹಚ್ಚುತ್ತಾರೆ. ವಿಶೇಷವಾಗಿ ಅಂದು ಮನೆಯನ್ನು ಸ್ವಚ್ಛಗೊಳಿಸಿ ದೀಪ ಇಡುವ ಸ್ಥಳ (ಜಗಲಿ) ವನ್ನು ಸುಣ್ಣಬಣ್ಣ ದಿಂದ ಶೃಂಗರಿಸಿ ಎಣ್ಣೆಯ ದೀಪವನ್ನು ಹಚ್ಚುತ್ತಾರೆ. ಇದರ ಮೇಲೆ ನಾನಾ ತರಹದ ಸಿಹಿ ಅಡಿಗೆಯನ್ನು ಮಾಡಿ ಒಂದು ಬಿದಿರಿನಿಂದ (ಬೊಂಬು) ತಯಾರಿಸಿದ ಚಟ್ಟನ್ನು ದೇವರ ಜಗಲಿಯ ಮೇಲೆ ಕಟ್ಟುತ್ತಾರೆ. ಇದಕ್ಕೆ ಸಿಹಿ ಅಡಿಗೆಯನ್ನು

ಮಾಡಿ ಬಿದಿರಿನ ಚಟ್ಟಕ್ಕೆ ದಾರದ ಮೂಲಕ ಜೋತು ಬಿಡುತ್ತಾರೆ (ಇಳಿ ಬಿಡುತ್ತಾರೆ). ವಿಶೇಷವಾಗಿ ಈ ದೀಪವನ್ನು ೨,೫,೯,೧೦ ದಿವಸಗಳವರೆಗೆ ದೀಪವನ್ನು ಆರದ ಹಾಗೆ ನೋಡಿಕೊಳ್ಳುತ್ತಾರೆ. ಇದು ಅವರವರ ಅಂತಸ್ತಿನ ಗೌರವದ ಪ್ರಕಾರ ಆಚರಿಸುತ್ತಾರೆ.

ಇಂಥ ಹಬ್ಬಗಳು ಮಾನವನ ಸಂಬಂಧ ಹೊಂದಿದ ಮತ್ತು ಹೆಣೆದ ಹಬ್ಬಗಳು ಆಗಿವೆ. ಆದ್ದರಿಂದ ಮಾನವ ತನ್ನ ದಿನನಿತ್ಯ ಹಬ್ಬ-ಹರಿದಿನಗಳನ್ನು ಆಚರಿಸುವುದು ಕಂಡುಬರುತ್ತದೆ. ಇದು ಅತಿ ಮಹತ್ವದ (Supernatural) ಸಮಾಜದ ಒಂದು ನಡತೆಯನ್ನು ತೋರಿಸಿಕೊಡುತ್ತದೆ.

ಹಿಂದೂ ಪಂಚಾಂಗದ (Calander) ಮಾಹಿತಿಯ ಪ್ರಕಾರ ೧೨ ಚಂದ್ರಮಾನ ತಿಂಗಳು ಎಂದು ಭಾಗ ಮಾಡಲಾಗಿದೆ. ಇದರ ಹೆಚ್ಚಿನ ವಿವರಣೆಯ ಪ್ರಕಾರ ಪ್ರತಿತಿಂಗಳು ವಿಭಾಗಗಳಾಗಿ, ಇದರ ಒಳಗೆ ಮತ್ತೆ ಎರಡು ಭಾಗ ಮಾಡಲಾಗಿದೆ. ಒಂದು ಶುಕ್ಲಪಕ್ಷ ಮತ್ತು ಇನ್ನೊಂದು ಕೃಷ್ಣ ಪಕ್ಷ. ಇದಕ್ಕೆ ಅರ್ಧ ಬೆಳಕು ಮತ್ತು ಅರ್ಧ ಕತ್ತಲು ಎಂದು. ಅರ್ಧ ಬೆಳಕು ಮೂಡುವುದಕ್ಕೆ ಹೊಸ ಚಂದ್ರ, ಅರ್ಧ ಕತ್ತಲು ಮೂಡುವುದಕ್ಕೆ ಪೂರ್ಣ ಚಂದ್ರ ಎಂದು. ಆದ್ದರಿಂದ ಸಂದರ್ಭಾನುಸಾರವಾಗಿ ಹಬ್ಬವನ್ನು ಹೊಸ ಚಂದ್ರ ಮೂಡುವ ಸಮಯಕ್ಕೆ ಮತ್ತು ಸಂಪೂರ್ಣ ಚಂದ್ರ ಮೂಡಿದ ಸಮಯಕ್ಕೆ ಹಬ್ಬವನ್ನು ಆಚರಿಸಲಾಗುತ್ತದೆ. ಒಂದೊಂದು ಪಕ್ಷ ಎರಡು ವಾರಗಳು ಮತ್ತು ಒಂದೊಂದು ವಾರ ತಿರುಗಿ (ಸುತ್ತು) ಏಳು ದಿನಗಳಿಗೆ ಬರುತ್ತದೆ. ಮುಂದಕ್ಕೆ ಹೋದಂತೆ ಚಂದ್ರನು ಪೂರ್ಣವಾಗಿ ಮತ್ತು ಇದು ಚಂದ್ರನ ಹೊಸ ದಿನವೆನ್ನಲಾಗಿದೆ. ಆದ್ದರಿಂದ ಇಂತಹ ದಿವಸಗಳಲ್ಲಿ ಹಬ್ಬಗಳನ್ನು ಚಂದ್ರ ಮತ್ತು ಸೂರ್ಯಗಳ ಗ್ರಹಣ (Eclipse) ಇರುವುದಕ್ಕೆ ಧಾರ್ಮಿಕವಾಗಿ ನಡೆದುಕೊಳ್ಳಲಾಗಿದೆ. ಇದಕ್ಕೆ ಶುಭಮಂಗಳಕರ ಮತ್ತು ಅದ್ಭುತ ಶಕ್ತಿಯಿದೆ ಎಂದು ನಂಬಲಾಗುತ್ತದೆ. ಆದ್ದರಿಂದ ಬಾಹುಸಾರ ಕ್ಷತ್ರಿಯ ಸಮುದಾಯದವರು ಹಬ್ಬಗಳನ್ನು ಎರಡು ತರವಾಗಿ ಆಚರಿಸುತ್ತಾರೆ. ಒಂದು ವಿಶ್ವೋತ್ಪತ್ತಿ ಶಾಸ್ತ್ರವಾಗಿ (Cosmological), ಇನ್ನೊಂದು ಸಮಾಜ ಶಾಸ್ತ್ರಕ್ಕೆ ಅನುಗುಣವಾಗಿ (Sociological ) ಉದಾ: ಯುಗಾದಿ, ದೀಪಾವಳಿ, ಮಕರಸಂಕ್ರಾಂತಿ ಮತ್ತು ಹೋಳಿ ಇವುಗಳನ್ನು ತಿಳಿದವರು ಆಚರಿಸುತ್ತಾರೆ.

**೪.೧ ವಾರ್ಷಿಕಾವರ್ತನದ ಆಚರಣೆಗಳು:**

ಆಚರಣೆ ಎಂದರೆ ಆಚರಿಸುವುದು ಅನುಸರಿಸುವುದು, ಸಂಪ್ರದಾಯದಂತೆ ನಡೆಯುವುದು ಎಂದು ಅರ್ಥೈಸಬಹುದು. ಮನುಷ್ಯನ ಅಗೋಚರವಾದ ದೈವಶಕ್ತಿಗಳ ಪ್ರೀತ್ಯರ್ಥವಾಗಿ ನಡೆಸುವ ಮತಾಚಾರಗಳು ಮತ್ತು ಕರ್ಮ ವಿಧಿಗಳನ್ನು ಆಚರಣೆಗಳೆಂದು ಕರೆಯುವರು. ಇವು ತಲ ತಲಾಂತರದಿಂದ ಸಮಾಜದ ಅಂಗೀಕಾರವನ್ನು ಪಡೆದು ಬಳಕೆಯಲ್ಲಿರುವಂತಹ ಮಾಟ-ಮಂತ್ರ ಮತ್ತು ಧಾರ್ಮಿಕ ವಿಧಿ-ವಿಧಾನಗಳನ್ನು ಜನಪದ ಆಚರಣೆಗಳೆನ್ನಬಹುದು. ನಂಬಿಕೆ ಮತ್ತು ಆಚರಣೆಗಳು ಧರ್ಮದ ಎರಡು ಅಂಗಗಳಾಗಿವೆ. ನಂಬಿಕೆಯು ಒಂದು ಮಾನಸಿಕ ಕಲ್ಪನೆ. ಅದರ ಕ್ರಿಯಾತ್ಮಕ ರೂಪವೇ ಆಚರಣೆ.

ನಿರ್ದಿಷ್ಟ ಸಮಾಜದಲ್ಲಿ ನಿರ್ದಿಷ್ಟ ಸಮುಯದಲ್ಲಿ, ಒಂದು ಜಾತಿ ಮತ್ತು ಉಪಜಾತಗಳಲ್ಲಿ ಬಳಕೆಯಲ್ಲಿರುವ ಆಚರಣೆಗಳ ಹುಟ್ಟಿಗೆ ಪ್ರಬಲ ಕಾರಣಗಳು ಇರಲೇಬೇಕು. ಅದು ಆರ್ಥಿಕ, ಸಾಮಾಜಿಕ, ಭಾವನಾತ್ಮಕ ಹೀಗೆ ಏನಾದರೂ ಆಗಿರಬಹುದು. ಒಬ್ಬ ವ್ಯಕ್ತಿ ಇಷ್ಟ ಪಟ್ಟು ಒಂದು ಆಚರಣೆಯನ್ನು ಮಾಡಲು ಸಾಧ್ಯವಿಲ್ಲ. ಒಂದು ಜನಾಂಗದ ಜೀವನ ವಿಧಾನದ ಬೇಕು, ಬೇಡಿಕೆಗಳ ಅಂಗವಾಗಿ ಆಚರಣೆ ರೂಪು ಪಡೆಯುತ್ತದೆ. ಪ್ರಕೃತಿಯಲ್ಲಿ ಮಾನವನ ದೇಹದಲ್ಲಿ ಉಂಟಾಗುವ ಬದಲಾವಣೆಗಳನ್ನು ಆಚರಣೆಗಳ ಮೂಲಕ ಗುರುತಿಸಬಹುದು. ಮಾನವನ ಬದುಕಿಗೆ ಮತ್ತು ಅವನ ಭಾವನಾ ಪ್ರಪಂಚಕ್ಕೆ ಸಂಬಂಧಿಸಿದ ಆಚರಣೆಗಳು ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಆಚರಣೆಗಳು, ನೈಸರ್ಗಿಕ ಕ್ರಿಯೆಗಳಿಗೆ ಸಂಬಂಧಿಸಿ ಆಚರಣೆಗಳು, ಸಾಮಾಜಿಕ ರಚನೆಗಳಿಗೆ ಸಂಬಂಧಿಸಿದ ಆಚರಣೆಗಳೆಂದು ಇವನ್ನು ಸ್ಥೂಲವಾಗಿ ವಿಂಗಡಿಸಬಹುದು.

ದೈವಕ್ಕೆ ಸಂಬಂಧಿಸಿದ ಆಚರಣೆಗಳನ್ನು ಜನಪದರು ದಿನಕ್ಕೊಂದು ಸಾರಿ, ವಾರಕ್ಕೊಂದು ಸಾರಿ, ತಿಂಗಳಿಗೊಂದು ಸಾರಿ, ಒಂದು ದೇವತೆಯ ಆರಾಧನೆಯ ಹಿನ್ನೆಲೆಯಲ್ಲಿ ಆಚರಿಸುತ್ತಾರೆ. ಹೀಗೆ ಸಕಲ ಪೂರ್ವ ಸಿದ್ಧತೆಗಳೊಂದಿಗೆ ಆಗುವ ಹಬ್ಬ, ಹರಿದಿನ, ತಿಥಿ–ಮತಿಗಳು ಅನೇಕ ಆಚರಣೆಗಳ ಮೊತ್ತವಾಗಿದೆ.

ಆಚರಣೆಗಳನ್ನು, ದೈನಿಕಾವರ್ತನದ ಆಚರಣೆಗಳು, ವಾರ್ಷಿಕಾವರ್ತನದ ಆಚರಣೆಗಳು, ಜೀವನಾವರ್ತನದ ಆಚರಣೆಗಳು ಎಂದು ಮೂರು ರೀತಿಯಲ್ಲಿ ವಿಂಗಡಿಸಬಹುದು.

ಬಾಹುಸಾರ ಕ್ಷತ್ರಿಯ ಸಮುದಾಯದವರು ಪ್ರದೇಶಾನುಗುಣವಾಗಿ ದೇವರುಗಳನ್ನು ಪೂಜಿಸುತ್ತಾರೆ. ಎಲ್ಲ ದೇವರುಗಳು ಇವರಿಗೆ ಪೂಜನೀಯವಾಗಿವೆ. ಕಂಡ ಕಂಡ ಕಲ್ಲಿಗೆ ಕೈ ಮುಗಿಯುವ ಇವರಿಗೆ ಮನೆ ದೇವತೆಗಳು, ಸ್ಥಳೀಯ ದೇವತೆಗಳು, ನಾಡದೇವತೆಗಳು ಒಂದೇ ಕಂಡುಬರುತ್ತವೆ. ತಮ್ಮ ಹಿರಿಯರು ಮೂಲ ನೆಲೆಯಿಂದ ಹೊರಟಾಗ ಅವರ ಜೊತೆಯಲ್ಲಿ ಬಂದ ದೇವತೆಗಳ ಬಗೆಗೆ ತಿಳಿದು ಬಂದಿಲ್ಲ. ಕೆಲವರು ವೆಂಕಟೇಶ್ವರ, ಸುಬ್ರಹ್ಮಣ್ಯ ಮೂಲ ದೇವರು ಎಂದು ತಿಳಿಸಲಾಗುತ್ತದೆ. ಇಂದಿನ ದಿನಗಳಲ್ಲಿ ಈ ಸಮುದಾಯದವರು ವೆಂಕಟೇಶ್ವರ, ಹನುಮಂತ, ಈರಣ್ಣ ದೇವರನ್ನು ಆರಾಧಿಸುವುದು ಹೆಚ್ಚಾಗಿ ಕಂಡುಬರುವುದುಂಟು. ಹೆಚ್ಚಿನವರು ತಿರುಪತಿಯನ್ನು ಧಾರ್ಮಿಕ ಕೇಂದ್ರವನ್ನಾಗಿ ಮಾಡಿಕೊಂಡಿದ್ದಾರೆ. ನಂಜಿಕೆಗೆ ದಾಸರಾದ ಇವರಿಗೆ ದೇವರ ಬಗೆಗೆ ವಿಶೇಷವಾದ ನಂಬಿಕೆ ಭಯಭಕ್ತಿಯನ್ನು ಕಾಣಬಹುದು. ವಾರದಲ್ಲಿ ಒಂದು ದಿನವನ್ನು ವಾರದ ದಿನವೆಂದು ಆಚರಿಸುತ್ತಾರೆ. ಕೆಲವರು ಶುಕ್ರವಾರ, ಮಂಗಳವಾರ, ಕೆಲವರು ಸೋಮವಾರ ಮಾಡಿದರೆ ಇತ್ತೀಚೆಗೆ ಕೆಲವರು ಗುರುವಾರವನ್ನು ಆಚರಿಸುತ್ತಾರೆ ಅಂದರೆ ಇವರು ಪ್ರತಿನಿತ್ಯವೂ ದೇವರಿಗೆ ಪೂಜೆ ಮಾಡುತ್ತಿರಲಿಲ್ಲವೆಂದಲ್ಲ. ಏಕೆಂದರೆ ಬಾಹುಸಾರ ಕ್ಷತ್ರಿಯರು ದರ್ಜಿಗಳಾಗಿ ಕೆಲಸದಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಅವರಿಗೆ ಸಮಯ ದೊರೆಯುವುದಿಲ್ಲ ಎಂದು ಕೆಲವರು ಹೇಳುತ್ತಾರೆ.

ಇವರು ಬೆಳಿಗ್ಗೆ ಎದ್ದ ಮೇಲೆ ಮನೆಯ ಬಾಗಿಲಿನಲ್ಲಿ ಹೊರಗಡೆ ಬಾಗಿಲಿಗೆ ಪೂಜೆ ಮಾಡಿ, ಮುಖ ತೊಳೆದುಕೊಂಡು ನಿತ್ಯ ಸೂರ್ಯ ನಮಸ್ಕಾರ ಮಾಡುವುದು ಕಂಡುಬರುತ್ತದೆ. ಕೆಲವು ಮನೆಗಳಲ್ಲಿ ಕೋಣೆಯನ್ನಷ್ಟೇ ಸಾರಿಸಿ ಯಾರಾದರೊಬ್ಬರು ಸ್ನಾನ ಮಾಡಿ ಪೂಜಿಸುವುದೂ ಇದೆ. ಕೆಲವರು ಅ ದಿನ ಕೋಣೆಯಲ್ಲಿ ಮಾಂಸದ ಅಡಿಗೆ ಮಾಡುವುದಿಲ್ಲ. ಹಿಂದಿನ ದಿನ ಮಾಡಿದ್ದು ಇದ್ದರೂ ಅದನ್ನು ಕೋಣೆಯಿಂದ ಹೊರಗಿಟ್ಟು ಶುಚಿಗೊಳಿಸುತ್ತಾರೆ. ಒಂದೊಂದು ವಂಶದ ಕುಟುಂಬಗಳು ಬೇರೆ ಬೇರೆ ಹೆಸರಿನ ಮನೆದೇವತೆಗಳನ್ನು ಪೂಜಿಸುತ್ತಾರೆ. ಭವಾನಿಯನ್ನು, ಸುಬ್ರಹ್ಮಣ್ಯನನ್ನು, ಲಕ್ಷ್ಮೀವೆಂಕಟೇಶ್ವರನನ್ನು, ಯಲ್ಲಮ್ಮ ಮೊದಲಾದ ದೇವತೆಗಳನ್ನು ಪೂಜಿಸುವವರಿದ್ದಾರೆ. ಮಾರುತಿಯನ್ನು ವಿಶೇಷವಾಗಿ ಪೂಜಿಸುತ್ತಾರೆ. ಸಾಮಾನ್ಯವಾಗಿ ಇವರು ಹಿಂದೂಗಳು ಆಚರಿಸುವ ಕೆಲವು ಹಬ್ಬಗಳನ್ನು ಆಚರಿಸುತ್ತಾರೆ. ಯುಗಾದಿ, ದಸರಾ (ಮಹಾನವಮಿ) ಮತ್ತು ದೀಪಾವಳಿಗಳನ್ನು ಆಚರಿಸುತ್ತಾರೆ.

**೧. ಆಷಾಡ ಏಕಾದಶಿ :**

ಈ ಹಬ್ಬವನ್ನು (ಜೂನ್-ಜುಲೈ) ತಿಂಗಳಲ್ಲಿ ಆಚರಿಸಲಾಗುತ್ತದೆ. ಇದಕ್ಕೆ 'ಆಷಾಢ ಏಕಾದಶಿ' ಎಂದು ಕರೆಯುತ್ತಾರೆ. ಈ ತಿಂಗಳಲ್ಲಿ ೧೧ ನೇ ದಿನದಂದು ಆಚರಿಸುವರು. ಈ ಸಮುದಾಯದವರು ವಿಠ್ಠಲ ಪಾಂಡುರಂಗನ ದೇವಸ್ಥಾನದಕ್ಕೆ ಸಹ ನಡೆದುಕೊಳ್ಳುತ್ತಾರೆ. ಅಂದು ದೇವರ ಹೆಸರಿನ ಮೇಲೆ ಉಪವಾಸ ಮಾಡುತ್ತಾರೆ. ಅಂದು ಬೆಳಿಗ್ಗೆ ಎದ್ದು ಮನೆಯ ಕುಟುಂಬದವರು ಸ್ನಾನ ಮಾಡುತ್ತಾರೆ. ಮನೆಯಲ್ಲಿ ಪಾಂಡುರಂಗನ ಭಾವಚಿತ್ರಗಳಿಗೆ ಪೂಜೆ ಮಾಡುತ್ತಾರೆ. ಅವನ ಮೇಲೆ ತುಳಸಿ ಮಾಲೆಯನ್ನು ಹಾಕಿ ನಾಮದ ಉಂಡಿಯನ್ನು ತಂದು ಅವನ ಹಣೆಯ ಮೇಲೆ ಹಚ್ಚಿ ಉಳಿದ ನಾಮವನ್ನು ತಮ್ಮ ಮನೆಯ ಕುಟುಂಬದವರು ಹಚ್ಚಿಕೊಳ್ಳುತ್ತಾರೆ. ಪಾಂಡುರಂಗನಿಗೆ ಭೇಟಿಯನ್ನು ಕೊಟ್ಟು ಆ ದೇವಸ್ಥಾನಗಳಲ್ಲಿಯೇ ಗಂಡು-ಹೆಣ್ಣು ಮಕ್ಕಳು ತಮ್ಮ ಕೊರಳಲ್ಲಿ ತುಳಸಿಯ ಮಾಲೆಯನ್ನು ಹಾಕಿಕೊಳ್ಳುತ್ತಾರೆ. "ಇದು ಪವಿತ್ರವಾದ ತುಳಸಿಯ ಮಾಲೆ" ಎಂದು ಕರೆಯುತ್ತಾರೆ. ಈ ಮಾಲೆಯ ಉದ್ದೇಶ ಸುಳ್ಳು ಹೇಳಬಾರದು, ಕೆಟ್ಟದ್ದು, ಮೋಸ, ವಂಚನೆ ಮುಂತಾದವುಗಳನ್ನು ಮಾಡಬಾರದು ಎಂದು ನುಡಿಯುತ್ತಾರೆ. ಈ ಮಾಲೆಯನ್ನು ಹಾಕಿಕೊಂಡವರು ತುಂಬಾ ಕಟ್ಟೆಚ್ಚರದಿಂದ ದೇವರ ಕಟ್ಟುಪಾಡುಗಳನ್ನು ಆಚರಿಸುತ್ತಾರೆ. ಈ ಸಮುದಾಯದವರು ಪಾಂಡುರಂಗನಿಗೆ ನಡೆದುಕೊಳ್ಳುತ್ತಾರೆ. ಹೋದವರು ಕೆಲವು ದಿನಗಳವರೆಗೆ ಅಲ್ಲಿಯೇ ಇದ್ದು ದೇವರ ದರ್ಶನವನ್ನು ಪಡೆದು ಮರಳಿ ಬರುವಾಗ 'ಪುಂಡಲೀಕ' ದೇವಸ್ಥಾನಕ್ಕೆ ತಮ್ಮ ಭೇಟಿಯನ್ನು ಕೊಟ್ಟು ಬರುತ್ತಾರೆ. ಈ ರೀತಿಯಾಗಿ ದೇವರಿಗೆ ನಡೆದುಕೊಳ್ಳುವ ಸಂಪ್ರದಾಯ ಇವರಲ್ಲಿದೆ.

**೨. ಭೀಮನ ಅಮವಾಸ್ಯೆ**

ಆಷಾಢ ಬಹುಳ ಅಮವಾಸ್ಯೆಗೆ ಭೀಮನ ಅಮವಾಸ್ಯೆ ಎನ್ನುವರು. ಮೃತನಾದ ಗಂಡನನ್ನು ಸತಿ ಶಿರೋಮಣಿಯೊಬ್ಬಳು ಪಾರ್ವತಿ ಪರಮೇಶ್ವರರ ಅನುಗ್ರಹದಿಂದ ಬದುಕಿಸಿ ದೀರ್ಘ ಸಮಂಗಲಿತನ

ಪಡೆದ ದಿನವಿದು. ಆದ್ದರಿಂದ ಈ ದಿನ ಪತಿ ಸಂಜೀವಿನಿ ವ್ರತವೆಂದು ಕರೆಯುವರು. ಬಾಹುಸಾರ ಕ್ಷತ್ರಿಯ ಸಮುದಾಯದ ಕೆಲವು ಮಹಿಳೆಯರು ಪತಿಯ ಆಯುಷ್ಯ ದೀರ್ಘವಾಗಿರಲೆಂದು ಪೂಜೆ ಮಾಡುವುದುಂಟು.

**೩. ರಕ್ಷಾ ಬಂಧನ :**

ಶ್ರಾವಣ ಮಾಸದ ಹುಣ್ಣಿಮೆಯ ದಿನ ಆಚರಿಸಲಾಗುವ ಈ ಹಬ್ಬವನ್ನು ರಕ್ಷಾಬಂಧನ, ನೂಲು ಹುಣ್ಣಿಮೆ ಎಂದು ಕರೆಯುತ್ತಾರೆ. ಈ ದಿನ ಸಹೋದರಿಯರು ತಮ್ಮ ಸಹೋದರರಿಗೆ ತಮ್ಮ ಮಾನ, ಪ್ರಾಣಗಳನ್ನು ಸದಾ ರಕ್ಷಿಸಿರೆಂದು ಮುಂಗೈಗೆ ದಾರದ ಎಳೆಗಳನ್ನು ಕಟ್ಟುತ್ತಾರೆ. ಉತ್ತರ ಭಾರತದಲ್ಲಿ ಇದು ಅತ್ಯಂತ ಜನಪ್ರಿಯವಾದ ಹಬ್ಬ. ಹಿಂದೆ ರಾಜಮಹಾರಾಜರ ಕಾಲದಲ್ಲಿ ಯುದ್ಧದ ಸಂದರ್ಭದಲ್ಲಿ ಶತ್ರುಗಳಿಂದ ತಮ್ಮ ಪತಿಯ ಮಾನಪ್ರಾಣಗಳ ರಕ್ಷಣೆಯಾಗಲೆಂದು ಪತಿಗೆ ಶ್ರೀರಕ್ಷೆಯೆಂದು ರಕ್ಷಾ ಎಳೆಗಳನ್ನು ಕಟ್ಟುವ ವಾಡಿಕೆಯಿತ್ತು. ಹಾಗೆಂದೇ ಇಂದ್ರನಿಗೆ ಶಚಿಯು ಮುಂಗಟ್ಟುಗಳನ್ನು ಕಟ್ಟುವುದರಿಂದಲೇ ಇಂದ್ರನಿಗೆ ಅಮರಾವತಿಯು ಲಭಿಸಿತೆಂದು ಹೇಳಲಾಗಿದೆ. ಮಹಿಳೆಯರು ತಮ್ಮ ಸಹೋದರರಿಗೆ ರಾಖಿಯನ್ನು ಕಟ್ಟುತ್ತಾರೆ. ಆದರೆ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬ ಹಾಗೆ ವಿವಾಹವಾದ ಮೇಲೆ ಹೆಣ್ಣುಮಕ್ಕಳನ್ನು ನೋಡಿಕೊಳ್ಳುವುದು ಬಹಳ ಕಡಿಮೆ ಎಂದು ಹೇಳಬಹುದಾಗಿದೆ.

**೪. ನಾಗರ ಪಂಚಮಿ :**

ಶ್ರಾವಣ ಮಾಸದಲ್ಲಿ ನಾಗರ ಪಂಚಮಿಯನ್ನು ಆಚರಿಸಲಾಗುತ್ತದೆ. ಭಾರತೀಯರಲ್ಲಿ ನಾಗಪೂಜೆ, ನಾಗಾರಾಧನೆಗಳೂ ರೂಢಿಯಲ್ಲಿರುವಂತೆ ಬಾಹುಸಾರ ಕ್ಷತ್ರಿಯರಲ್ಲೂ ನಾಗರ ಪಂಚಮಿ ವಿಶಿಷ್ಟವಾಗಿದೆ. ತಮ್ಮ ಸರ್ಪದೋಷ ಹರಕೆಯೆಂದರೆ ನಾಗಪ್ಪನಿಗೆ ಪೂಜೆ ಸಲ್ಲಿಸುತ್ತಾರೆ. ಬಾಹುಸಾರ ಕ್ಷತ್ರಿಯರಲ್ಲಿ ನಾಗರ ಪಂಚಮಿಯ ಮೊದಲ ವಾರ ಮಾಡಿದ್ದರೆ, ಕೆಲವರು ಕೊನೆಯವಾರ, ಸೋಮವಾರ ಅಥವಾ ಶನಿವಾರದಂದು ಹುತ್ತಕ್ಕೆ ಅಥವಾ ಕಲ್ಲಿನ ಹಾವುಗಳಿಗೆ ಹಾಲು ಹಾಕುವುದು ಕಂಡುಬರುತ್ತದೆ. ಶ್ರಾವಣಮಾಸದಲ್ಲಿ ಹಾವುಗಳನ್ನು ಸಾಯಿಸಬಾರದು ಎಂಬ ನಂಬಿಕೆ ಇದೆ. ಹಾವಿನ ಹುತ್ತಕ್ಕೆ ಅಥವಾ ಕಲ್ಲಿನ ನಾಗಪ್ಪನಿಗೆ ಹಾಲು ಎರೆಯುವ ಪದ್ಧತಿ ಇದೆ. ಬೆಲ್ಲದ ನೀರು, ಒಡೆದ ಕಾಯಿಯ ಬಟ್ಟಲಿನಿಂದ ನಾಗಪ್ಪನಿಗೆ ಎರೆಯುವುದು ಇವರಲ್ಲಿರುವ ಪದ್ಧತಿ. ತಂಬಿಟ್ಟು ನೈವೇದ್ಯ ಮಾಡುತ್ತಾರೆ. ಅಕ್ಕಿಯನ್ನು ನೀರಿನಲ್ಲಿ ನೆನಸಿಟ್ಟು ಕುಟ್ಟಿ ಕಡುಬು ಮಾಡುತ್ತಾರೆ. ಹಬ್ಬದಲ್ಲಿ ಕುಟ್ಟಿದ ಕಡುಬು ಮಾಡುವರು ಕಡುಬು ಕರಿಯುವುದಿಲ್ಲ, ಏಕೆಂದರೆ ನಾಗಪ್ಪನ ಹೆಡೆ ಕರಿದಂತೆ ಎಂಬ ನಂಬಿಕೆ ಇದೆ.

**೫. ಗೌರಿ ಹಬ್ಬ :**

ಮಹಿಳೆಯರಿಗೆ ಗೌರಿಹಬ್ಬವು ಮುಖ್ಯವಾಗಿರುತ್ತದೆ. ಮದುವೆಯಾದ ಮೇಲೆ ಗೌರಿಹಬ್ಬದ ದಿನ ಸಹೋದರರು ಹೆಣ್ಣು ಮಕ್ಕಳನ್ನು ತವರು ಮನೆಗೆ ಕರೆದುಕೊಂಡು ಬರುತ್ತಾರೆ. ಹೊಸಬಟ್ಟೆಯನ್ನು ತಂದು ಹೆಣ್ಣು ಮಕ್ಕಳು ಸಹೋದರರಿಗೆ ಶುಭವಾಗಲಿ ಎಂದೂ, ಯಾವತ್ತಿಗೂ ಸುಖವಾಗಿರಲಿ ಎಂದು

ಹಾರೈಸುತ್ತಾರೆ. ತವರು ಮನೆಯಲ್ಲಿ ಹೆಣ್ಣುಮಕ್ಕಳು ಕಣ್ಣೀರು ಹಾಕಿದರೆ ತವರಿಗೆ ಕಷ್ಟಗಳು ಬರುತ್ತದೆ ಎಂದು, ಹೆಣ್ಣು ಮಕ್ಕಳು ಸುಖವಾಗಿ ಇದ್ದು ಹೋಗಲಿ ಎಂದು ಹಿರಿಯರು ಬಯಸುತ್ತಾರೆ. ಸಕ್ಕರೆಯ ಆರತಿ ಬೆಳಗುವುದು ಈ ಗೌರಿಹಬ್ಬದ ವಿಶಿಷ್ಟವಾಗಿದೆ.

**೬. ಬೆನಕನ ಅಮವಾಸ್ಯೆ :**

ಭಾರತದ ಉದ್ದಗಲಕ್ಕೂ ವಿಶೇಷವಾಗಿ ಆಚರಿಸಲ್ಪಡುವ ಹಬ್ಬವೆಂದರೆ ಗಣಪತಿಯ ಆರಾಧನೆ. ಭಾರತೀಯ ಸಾಮಾಜಿಕ ಸಾಂಸ್ಕೃತಿಕ ಪರಂಪರೆ ಮತ್ತು ಒಗ್ಗಟ್ಟನ್ನು ಪ್ರತಿಬಿಂಬಿಸುವ ಹಬ್ಬವಾಗಿ ಆಚರಿಸಲ್ಪಡುವ ಈ ಹಬ್ಬಕ್ಕೆ ಜಾತಿ, ಮತ, ಪಂಥದ ವ್ಯತ್ಯಾಸವಿಲ್ಲ. ಹಲವಾರು ಬಾರಿ ಕೋಮು ಗಲಭೆಗೂ ಕಾರಣವಾಗುವ ಈ ಹಬ್ಬವನ್ನು ಬಹಳ ಭಕ್ತಿ, ಶ್ರದ್ಧೆಯಿಂದ ಬಾಹುಸಾರ ಕ್ಷತ್ರಿಯ ಸಮುದಾಯದವರು ಆಚರಿಸುವ ಪದ್ಧತಿಯನ್ನು ಬೆಳೆಸಿಕೊಂಡಿದ್ದಾರೆ. ಕೆಲವರು ಈ ಗಣಪತಿಯ ವಿಗ್ರಹವನ್ನು ತಮ್ಮ ಮನೆಯಲ್ಲಿ ಪ್ರತಿಷ್ಠಾಪಿಸಿ ಪೂಜಿಸಿದರೆ ಮತ್ತೆ ಹಲವರು ಊರಿನ ಪರವಾಗಿ ಜಾತಿಯ ಪರವಾಗಿ ಸಾಮೂಹಿಕವಾಗಿ ಪ್ರತಿಷ್ಠಾಪಿಸಿ ಪೂಜಿಸುವ ಪದ್ಧತಿ ಇವರಲ್ಲಿದೆ.

ತಮ್ಮ ಸ್ಥಿತಿ-ಗತಿಗಳಿಗೆ ತಕ್ಕಂತೆ ಕೆಲವರು ಒಂದು, ಮೂರು ಮತ್ತು ೯ ದಿವಸಗಳವರೆಗೆ ಪೂಜಿಸಿ, ಆರಾಧಿಸಿ ನಂತರ ವಿಸರ್ಜನೆಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಈ ಹಬ್ಬದ ವಿಶೇಷ ಅಡುಗೆ ಸಿಹಿ ಕಡಬು ಆಗಿರುತ್ತದೆ. ವಿಸರ್ಜನೆಯ ದಿನ ಸಾಮೂಹಿಕ ಭೋಜನದ ವ್ಯವಸ್ಥೆಯನ್ನೂ ಸಹ ಮಾಡಿರುತ್ತಾರೆ. ಪಟಾಕಿ, ಸಿಡಿಮದ್ದುಗಳನ್ನು ಸಿಡಿಸುವುದರ ಮೂಲಕ ತಮ್ಮ ಹರ್ಷ, ಆನಂದವನ್ನು ವ್ಯಕ್ತಪಡಿಸುತ್ತಾರೆ.

**೭. ಮಹಾನವಮಿ :**

ಹಿಂದೂ ಧರ್ಮದ, ಸಂಸ್ಕೃತಿಯ ವೈಶಿಷ್ಟ್ಯಪೂರ್ಣವಾದ ಹಬ್ಬ ಮಹಾನವಮಿ. ಈ ಹಬ್ಬಕ್ಕೆ ಎಲ್ಲರೂ ಮನೆಗಳನ್ನು ಸುಣ್ಣ-ಬಣ್ಣಗಳಿಂದ ಅಲಂಕರಿಸಿ ಸ್ವಚ್ಛಗೊಳಿಸುತ್ತಾರೆ. ಈ ಹಬ್ಬವು ಅಶ್ವಿನಿ ಮಾಸದಲ್ಲಿ (ಸೆಪ್ಟೆಂಬರ್-ಅಕ್ಟೋಬರ್) ಒಂಬತ್ತು ದಿನಗಳವರೆಗೆ ಆಚರಿಸಲ್ಪಡುತ್ತದೆ. ಈ ಹಬ್ಬದ ಮೊದಲನೆಯ ದಿನವಂದು ಘಟಸ್ಥಾಪನೆ ಮಾಡುತ್ತಾರೆ. ಅಂದು ಒಂಭತ್ತು ಎಣ್ಣೆ ದೀಪವನ್ನು ಹಚ್ಚಿ ಬೇರೆ ಬೇರೆ ದವಸ ಧಾನ್ಯಗಳನ್ನು ಹಾಕುತ್ತಾರೆ. ಇದರ ಮೇಲೆ ಒಂದು ನೀರು ತುಂಬಿದ ತಂಬಿಗೆಯನ್ನು ಇಡುತ್ತಾರೆ. ಇದನ್ನು ಒಂದೇ ಸ್ಥಳದಲ್ಲಿ ಹತ್ತು ದಿನಗಳವರೆಗೆ ಇಡುತ್ತಾರೆ. ಇದರ ಸುತ್ತಲೂ ಮಣ್ಣು ಮತ್ತು ದವಸ ಧಾನ್ಯಗಳನ್ನು ಮಿಶ್ರಣ ಮಾಡಿ ಈ ದೀಪದ ಸುತ್ತಲೂ ಹಾಕುತ್ತಾರೆ (ಒಂದು ತರ ಹೊಸೈಕ್ಕಿ). ಇದಕ್ಕೆ ದಿನಾಲೂ ನೀರನ್ನು ಸಿಂಪಡಿಸುತ್ತಾರೆ. ಕೊನೆಯ ದಿನದಂದು ಈ ದವಸ ಧಾನ್ಯಗಳು ಮೊಳಕೆ (ಸಸಿ) ಯಾಗಿರುತ್ತದೆ. ಈ ಮೊಳಕೆಯಾದ ಸಸಿಯನ್ನು ತಮ್ಮ ತಮ್ಮ ದೇವರುಗಳಿಗೆ ಅರ್ಪಿಸಿ ನಂತರ ಹೆಣ್ಣು ಮಕ್ಕಳು ತಮ್ಮ ತಲೆಗೂದಲುಗಳಿಗೆ ಮುಡಿದುಕೊಳ್ಳುತ್ತಾರೆ.

ಇದಾದ ಒಂಭತ್ತನೆಯ ದಿವಸಕ್ಕೆ 'ಖಂಡೆ ಪೂಜೆ' ಆಚರಿಸುತ್ತಾರೆ. ಆ ದಿನ ಮನೆಯಲ್ಲಿನ ವಸ್ತುಗಳನ್ನು ಪೂಜಿಸುವ ವಾಡಿಕೆಯಿದೆ. ಈ ಆಚರಣೆಯ ಹಿಂದೆ ಇರುವ ನಂಬಿಕೆಯನ್ನು ಬಾಹುಸಾರ ಕ್ಷತ್ರಿಯ ಸಮುದಾಯದವರು ಈ ರೀತಿ ಹೇಳುತ್ತಾರೆ. ಮಹಾಭಾರತದ ಕಾಲದಲ್ಲಿ ಪಾಂಡವರು ವನವಾಸಕ್ಕೆ ಹೋಗಿದ್ದಾಗ ತಮ್ಮಲ್ಲಿರುವಂತಹ ವಸ್ತ್ರಗಳು, ವೈಢೂರ್ಯ ಮತ್ತು ಯುದ್ಧ ವಸ್ತುಗಳನ್ನು 'ಬನ್ನಿ ಮಹಾಂಕಾಳಿ' ಎಂಬ ಗಿಡಕ್ಕೆ ಕಟ್ಟಿ ನಾವು ಮರಳಿ ಬರುವವರೆಗೆ ಈ ವಸ್ತುಗಳ ರಕ್ಷಣೆ ಮಾಡಬೇಕೆಂದು ಬನ್ನಿ ಮಂಕಾಳಿ (ಬನ್ನಿ ಗಿಡ) ಗೆ ಪೂಜೆಯನ್ನು ಸಲ್ಲಿಸಿ ವನವಾಸಕ್ಕೆ ಹೋಗಿ ಬರುವವರೆಗೂ ರಕ್ಷಿಸಿದ ಕಾರಣ ಈ ಪೂಜೆಯನ್ನು ರಕ್ಷಣಾ ದೃಷ್ಟಿಯಿಂದ ಆಚರಿಸುವ ಪದ್ಧತಿಯು ಈಗಲೂ ಇದೆ. 'ಖಂಡೆಯ ಪೂಜೆಯ ದಿನ' ಎಲ್ಲಾ ಬಾಹುಸಾರ ಕ್ಷತ್ರಿಯ ಸಮುದಾಯದವರು ಸೇರಿ ಊರಿನ 'ಬನ್ನಿ ಮಹಾಂಕಾಳಿ' ಎಂಬ ಗಿಡಕ್ಕೆ ಪೂಜೆಯನ್ನು ಸಲ್ಲಿಸುತ್ತಾರೆ (ಇದಕ್ಕೆ ಬನ್ನಿಯ ಪೂಜೆ ಎಂದು ಕರೆಯುವರು). ನಂತರ ಮುಖ್ಯ ದೇವರುಗಳಿಗೆ ಬನ್ನಿ ಗಿಡದ ಎಲೆಗಳನ್ನು ತಂದು ದೇವರಿಗೆ ಅರ್ಪಿಸುತ್ತಾರೆ. ಇದಾದನಂತರ ಬನ್ನಿಯನ್ನು ಮನೆಗೆ ಬಂದನಂತರ ಬಂಧು-ಬಳಗ, ಗೆಳೆಯರಿಗೆ ಹಾಗೂ ಊರಿನ ಪ್ರಮುಖರಿಗೆ ಬನ್ನಿಯನ್ನು ಕೊಟ್ಟು, ಕೊಡುವಾಗ 'ನಾವು ನೀವು ಬಂಗಾರದ ಹಾಗೆ ಇರೋಣ' ಎಂದು ಪರಸ್ಪರ ಅಭಿನಂದಿಸಿಕೊಳ್ಳುತ್ತಾರೆ.

ಈ ಮಹಾನವಮಿಯ ಸಮಯದಲ್ಲಿ ದೇವರುಗಳಲ್ಲಿ ಅದ್ಭುತವಾದ ಶಕ್ತಿಯಿರುವ ನಂಬಿಕೆ ಇರುವುದರಿಂದ ಇದನ್ನು ಹತ್ತು ದಿವಸಗಳವರೆಗೆ 'ಮಹಾನವಮಿಯನ್ನು' ಎಲ್ಲಾ ಸಮುದಾಯದವರು ಆಚರಿಸುತ್ತಾರೆ. ಆದ್ದರಿಂದ ಬಾಹುಸಾರ ಕ್ಷತ್ರಿಯ ಸಮುದಾಯದವರೂ ಸಹ ಒಂದು ಗೂಡಿ ಕೀರ್ತನಕಾರರನ್ನು ಕರೆತಂದು ಈ ಹಬ್ಬದ ಸಂದರ್ಭಗಳಲ್ಲಿ 'ಕೀರ್ತನೆ, ಪ್ರವಚನ' ಮುಂತಾದ ವಿಷಯಗಳ ಬಗ್ಗೆ ಬೋಧಿಸುತ್ತಾರೆ. ಈ ಹಬ್ಬವು ರಾಮಾಯಣದಲ್ಲಿರುವ ದುಷ್ಟಶಕ್ತಿಯ ದಮನವನ್ನು ಶಿಷ್ಟ ಶಕ್ತಿಯ ವಿಜಯದ ಸಂಕೇತವೆಂದು ಆಚರಿಸುತ್ತಾರೆ. ಇದೇ ಸಂದರ್ಭದಲ್ಲಿ ಶಕ್ತಿ ದೇವತೆಗಳನ್ನು ಸಹ ಪೂಜಿಸುವುದರಿಂದ ದೆವ್ವ, ಭೂತ, ಪಿಶಾಚಿ (demon) ಗಳ ಸಂಹಾರವಾಗುತ್ತದೆ ಎಂದು ಪ್ರತೀತಿ.

ದಸರಾ ಹಬ್ಬದಲ್ಲಿಯೂ ಹಿರಿಯರಿಗೆ ಎಡೆ ಹಾಕುವ ಪದ್ಧತಿ ಇದೆ. ದಸರಾ ಅಮವಾಸ್ಯೆಯಿಂದ ೯ ದಿನಗಳ ಕಾಲ ಹೆಣ್ಣು ಮಕ್ಕಳು ಬನ್ನಿಮರಕ್ಕೆ ಹರಕೆ ಹೊತ್ತು ಪೂಜೆಯನ್ನು ನೆರವೇರಿಸುತ್ತಾರೆ. ಏಕೆಂದರೆ ಹಲವಾರು ಸುಖ ದುಃಖಗಳನ್ನು ಪರಿಹರಿಸಲು ಹರಕೆಯನ್ನು ಹೊರುತ್ತಾರೆ. ಒಂಬತ್ತು ದಿನಗಳು ದುರ್ಗಿಯನ್ನು ಒಂದೊಂದು ಹೆಸರಿನಲ್ಲಿ ಪೂಜೆಯನ್ನು ಸಲ್ಲಿಸುತ್ತಾರೆ. ದಸರಾ ಹಬ್ಬವನ್ನು 'ಬನ್ನಿಹಬ್ಬ' ಎಂದೂ ಸಹ ಹೇಳುತ್ತಾರೆ.

## ೮. ದೀಪಾವಳಿ :

ದೀಪಾವಳಿಯು ದೀಪಗಳ ಬೆಳಕಿನ ಹಬ್ಬ ಎಂದು ಹಿಂದೂಗಳು ಪ್ರಾಚೀನ ಕಾಲದಿಂದಲೂ ಆಚರಿಸುತ್ತಾರೆ. ದೀಪಾವಳಿಯ ಹಬ್ಬವನ್ನು ನರಕಚತುರ್ದಶಿಯಿಂದ ಪ್ರಾರಂಭಿಸಿ ಸಾಮಾನ್ಯವಾಗಿ ಮೂರು ದಿನಗಳವರೆಗೆ ಆಚರಿಸುತ್ತಾರೆ. ಈ ದಿನಮಾನಗಳಲ್ಲಿ ವಿಷ್ಣುದೇವರು ರಾಕ್ಷಸನಾದ ನರಕಾಸುರನನ್ನು ಕೊಂದ ದಿನದ ನೆನಪನ್ನು ತರುವ ಹಬ್ಬವಾಗಿದೆ ಎಂದು ವಿಷ್ಣು ಪುರಾಣವು ಹೇಳುತ್ತದೆ. ಆದ್ದರಿಂದ ಹಿರಿಯ ಪೂರ್ವಜರು ಹೊಸ ಚಂದ್ರನು ಉದಯಿಸುವ ಸಮಯದಲ್ಲಿ ಈ ಹಬ್ಬವನ್ನು ಆಚರಿಸುತ್ತಾ ಬಂದಿರುವರು. ದೀಪಾವಳಿ ಹಬ್ಬದ ಸಮಯದಲ್ಲಿ ಲಕ್ಷ್ಮೀ ದೇವತೆಗಳನ್ನು ಪೂಜಿಸುತ್ತಾರೆ. ಇವಳು ಸಂಪತ್ತು, ಐಶ್ವರ್ಯ, ಸಮೃದ್ಧಿ, ಕೊಡುವಳು ಎಂದು ಬಾಹುಸಾರ ಕ್ಷತ್ರಿಯ ಸಮುದಾಯದವರು ಮನೆಯಲ್ಲಿ ಶೃದ್ಧಾಭಾವನೆಯಿಂದ ಪೂಜಿಸುತ್ತಾರೆ. ಲಕ್ಷ್ಮೀ ದೇವತೆಯನ್ನು ಮನೆಯ ಬಂಧುಬಳಗದವರು ಸೇರಿ ಅವಳಿಗೆ ಬಂಗಾರ ಆಭರಣಗಳಿಂದ ಅಲಂಕರಿಸಿ, ಆರಾಧಿಸುತ್ತಾರೆ. ದೀಪಾವಳಿ ಸನ್ನಿವೇಶಗಳಲ್ಲಿ ಆಗ ತಾನೆ ಚಂದ್ರನು ಹೊಸದಾಗಿ ಮೂಡುವ ಸಮಯದ, ಕಾರ್ತೀಕ ಮಾಸದ ತಿಂಗಳಂದು (ಅಕ್ಟೋಬರ್-ನವೆಂಬರ್), ಸರಸ್ವತಿ ದೇವತೆಗಳನ್ನು ಪೂಜಿಸುತ್ತಾರೆ. ಹೆಚ್ಚಾಗಿ ಶಾಲೆಯ ಮಕ್ಕಳು ಪಾಟಿ, ಕಲ್ಲಿನ ಪಾಟಿ, ಪುಸ್ತಕಗಳ (Slates, books) ನ್ನು ಪೂಜಿಸಿ ಆರಾಧಿಸುತ್ತಾರೆ ಮತ್ತು ಈ ದೇವತೆಗಳನ್ನು ತಮ್ಮ ಮನೆಗಳಲ್ಲಿ ಪೂಜಿಸುವುದು ಕಂಡು ಬರುತ್ತದೆ. ಮತ್ತು ಅದೇ ದಿನ ಪಂಚಪಾಂಡವರು ಎಂದು ಆಕಳ ಸೆಗಣಿಯಿಂದ ಮಾಡಿ, ಅದಕ್ಕೆ ಹೂವು ಮುಂತಾದ ವಸ್ತುಗಳಿಂದ ಅಲಂಕರಿಸಿ ಮನೆಯ ಹೊಸ್ತಿಲಿನಲ್ಲಿಟ್ಟು ಪೂಜೆಯನ್ನು ಮಾಡುತ್ತಾರೆ. ನಂತರ ಇವನ್ನು ಮನೆಯ ಕುಂಬಿಯ ಮೇಲೆ ಇಡುತ್ತಾರೆ.

ಆದುದರಿಂದ ಕಾರ್ತೀಕ ಮಾಸದ ತಿಂಗಳು ಬಂದ ನಂತರ (ಅಕ್ಟೋಬರ್-ನವೆಂಬರ್) ಮನೆ ಮತ್ತು ಗುಡಿಗುಂಡಾರಗಳ ಮುಂದೆ ಎಣ್ಣೆಯ ದೀಪವನ್ನು ಹಚ್ಚುತ್ತಾರೆ. ಈ ತಿಂಗಳು ಪೂರ್ಣ ಮುಗಿಯುವವರೆಗೆ ಮನೆಗಳ ಮುಂದೆ ಬಣ್ಣ ಬಣ್ಣಗಳಿಂದ ತಯಾರಿಸಿದ (ಹಾಳೆಯಿಂದ) ಆಕಾಶ ಪುಟ್ಟಿ (ಶಿವನ ಪುಟ್ಟಿ) ಗಳು ಮುಂತಾದವು ದೀಪಗಳ ಸಹಾಯದಿಂದ ಮಿಂಚುವ ಹಾಗೆ ಮನೆಗಳ ಮುಂದೆ ಹಚ್ಚುತ್ತಾರೆ. ಸಂಶೋಧಕರು ಏಕೆ ಎಣ್ಣೆಯ ದೀಪಗಳನ್ನು ಮನೆಗಳ ಮುಂದೆ ಮತ್ತು ದೇವಸ್ಥಾನಗಳ ಮುಂದೆ ಹಚ್ಚುತ್ತೀರಿ ಎಂದು ಪ್ರಶ್ನೆಯನ್ನು ಹಾಕಿದಾಗ ಕಾರ್ತೀಕ ಮಾಸದಂದು ಕಾರ್ತೀಕ ದೀಪ ಹಚ್ಚುವುದು, ಆಕಾಶದಲ್ಲಿರುವ ಶಿವನಿಗೆ ದಾರಿಯನ್ನು ತೋರಿಸಿ (ಬೆಳಕನ್ನು) ಕೊಡುತ್ತವೆ ಎಂಬ ನಂಬಿಕೆಯಿಂದ ಕಾರ್ತೀಕ ಮಾಸದಂದು, ತಿಂಗಳ ಕೊನೆಯವರೆಗೆ ದೀಪವನ್ನು ಹಚ್ಚಲಾಗುತ್ತದೆ ಎಂದು ನುಡಿಯುತ್ತಾರೆ. ಅದ್ದರಿಂದ ಈ ಹಬ್ಬವನ್ನು ಎಲ್ಲರೂ ಭಯ ಭಕ್ತಿಯಿಂದ ಆಚರಿಸುತ್ತಾರೆ.

ಭಾರತೀಯರ ಪ್ರಮುಖ ಹಬ್ಬ ದೀಪಾವಳಿ. ಕರ್ನಾಟಕದಲ್ಲಂತೂ ಇದು ಬೆಳಕಿನ ಹಬ್ಬ, ದೊಡ್ಡ ಹಬ್ಬವೆಂಬ ಗೌರವಕ್ಕೆ ಪಾತ್ರವಾಗಿದೆ. ಆಶ್ವಯುಜ ಬಹುಳ ದ್ವಾದಶಿಯಂದು ಆರಂಭವಾಗಿ ಕಾರ್ತಿಕ ಶುದ್ಧ

ಪಂಚಮಿಯವರೆಗೆ ಇದು ನಡೆಯುತ್ತದೆ. ದೀಪಗಳಿಂದ ಅಲಂಕೃತವಾಗುವ ಹಬ್ಬವೇ ದೀಪಾವಳಿ. ಭಾರತೀಯರ ಕಲ್ಪನೆಯಲ್ಲಿ ಮಹತ್ವದ್ದು. ಅದು ಸಾರ್ಥಕ ಬದುಕಿನ ಜೀವಂತಿಕೆಯ ಸಂಕೇತ. ಗುಡಿಸಲುಗಳಿಂದ ಗುಡಿಯವರೆಗೆ ದೀಪಾವಳಿಯ ತಳಿರುತೋರಣಗಳು ಕಾಣಿಸುತ್ತಿರುತ್ತವೆ. ನರಕ ಚತುರ್ದಶಿ, ಬಲಿಪಾಡ್ಯಮಿ, ಕರಿ ಎಂದು ಆಚರಿಸಲಾಗುತ್ತದೆ. ಶ್ರೀ ಕೃಷ್ಣ ನರಕಾಸುರನ ಸಂಹಾರ ನರಕ ಚತುರ್ದಶಿ ಹೆಸರಿನಲ್ಲಿ ಶಾಶ್ವತವಾಗಿ ಉಳಿದು ಬಂದಿದೆ. ನರಕ ಚತುರ್ದಶಿಯಂದು ಹನುಮಂತ ಹುಟ್ಟಿದನೆಂಬ ನಂಬಿಕೆಯಿಂದ ಈ ದೇವರಿಗೂ ಪೂಜೆ ಸಲ್ಲಿಸುತ್ತಾರೆ. ವನವಾಸ ಮುಗಿಸಿಕೊಂಡು ಅಯೋಧ್ಯೆಗೆ ಬಂದಿದ್ದರಿಂದ ರಾಮನನ್ನು ದೀಪೋತ್ಸವದ ಮೂಲಕ ಜನರು ಬರಮಾಡಿಕೊಂಡರೆಂದು ಈ ಹಬ್ಬವನ್ನು ಆಚರಿಸುವರು. ಲಕ್ಷ್ಮಿಯನ್ನು ಒಲಿಸಿಕೊಂಡಿದ್ದರ ಸಂಕೇತವೆಂದು ಕೆಲವರು ಲಕ್ಷ್ಮೀ ಪೂಜೆಯನ್ನು ಮಾಡುತ್ತಾರೆ. ಬಲಿಪಾಢ್ಯಮಿಯಂದು ಪಾಂಡವರು ಹಸ್ತಿನಾವತಿಗೆ ಬಂದು ಪುನಃ ರಾಜ್ಯಭಾರ ಮಾಡಿದುದರ ಕುರುಹು ಎಂದು ಭಾವಿಸಲಾಗಿದೆ. ಹಟ್ಟಿ ಹಬ್ಬ ಎಂದೂ ಸಹ ಕರೆಯುತ್ತಾರೆ. ಹೆಚ್ಚಾಗಿ ಪಾಡ್ಯ ಮುಖ್ಯ ಆಚರಣೆಯಾಗಿದೆ. ಅಭ್ಯಂಜನಕ್ಕೆ ಮುಂಚೆ ಅರಿಶಿನ ಎಣ್ಣೆಯನ್ನು ಮೈಗೆ ಹಚ್ಚಿಕೊಳ್ಳುತ್ತಾರೆ. ತ್ವಚೆಯ ಕಾಂತಿಗೆ, ಚರ್ಮರೋಗಕ್ಕೆ ಇದು ಉಪಶಮನಕಾರಿಯಾಗಿದೆ.

ಹಟ್ಟಿಹಬ್ಬದ ದಿನ ಮನೆಯಲ್ಲಿ ಸ್ವಚ್ಛ ಮಾಡಿಕೊಂಡು, ಎಲ್ಲರೂ ಸ್ನಾನ ಮಾಡಿ ಪೂಜೆಯನ್ನು ಮಾಡಲಾಗುತ್ತದೆ. ಹಸು ದನಗಳಿದ್ದವರು ಕೊಟ್ಟಿಗೆಯ ಜಾಗವನ್ನು ಸ್ವಚ್ಛ ಮಾಡಿ ವಿಭೂತಿ ಹಚ್ಚಿ ಅಲಂಕರಿಸುತ್ತಾರೆ. ಮನೆಯ ಅಂಗಳದಲ್ಲಿ ಹಟ್ಟಿ ಇದ್ದು (ಸಗಣಿಯಿಂದ ಮಾಡಿದ ಗುಂಡಿನಾಕಾರದ ಹುಂಡೆಗಳು) ಅವುಗಳಿಗೆ ಉತ್ತರಾಣಿ ಗಿಡ, ಹೂವು ಇಟ್ಟು ಪೂಜೆ ಮಾಡಲಾಗುತ್ತದೆ. ಹಟ್ಟಿಯಲ್ಲಿ ಇರುವ ಸಗಣಿಯ ರಾಶಿಗೆ ಪೂಜೆ ಮಾಡಿಸಿ, ಹೋಳಿಗೆ ಎಡೆ ಮಾಡಲಾಗುತ್ತದೆ.

ದೀಪಾವಳಿಯಲ್ಲಿ ಹಿರಿಯರ ಹಬ್ಬವು ಮುಖ್ಯವಾಗಿರುತ್ತದೆ ಹಿರಿಯರಿಗೆ ಎಡೆ ಹಾಕಿದರೆ, ಮತ್ತೆ ಕೆಲವರು ಮಹಾನವಮಿಯಲ್ಲಿ ಎಡೆ ಹಾಕುತ್ತಾರೆ. ಮನೆ ಮಠಗಳನ್ನು ಶುಚಿ ಮಾಡಿಕೊಂಡು, ಬಾಗಿಲಿಗೆ ತೋರಣವನ್ನು ಕಟ್ಟಿ ಅಲಂಕರಿಸುತ್ತಾರೆ. ನೆಂಟರಿಷ್ಟರು ಎಲ್ಲರೂ ಕೂಡಿ ಹಬ್ಬವನ್ನು ಆಚರಿಸುತ್ತಾರೆ. ದೀಪಾವಳಿಯಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಹೊಸ ಬಟ್ಟೆ ಇದ್ದೇ ಇರುತ್ತದೆ. ರಾತ್ರಿಯ ವೇಳೆಯಲ್ಲಿ ಮಾಂಸದ ಅಡಿಗೆಯನ್ನು ಎಡೆ ಹಾಕಲು ಪ್ರಾರಂಭಿಸುತ್ತಾರೆ. ಕೆಲವರು ತಮ್ಮ ಮನೆಯಲ್ಲಿರುವ ಮುಖ್ಯ ಸಾಮಾನುಗಳನ್ನು ಇಟ್ಟು ಹಿರಿಯರಿಗೆ ಬಟ್ಟೆ ಏರಿಸುತ್ತಾರೆ. ಉಪವಾಸವಿದ್ದು ಎಡೆ ದೂಪ ಮಾಡಿದ ಮೇಲೆ ಉಪವಾಸ ಬಿಡುತ್ತಾರೆ. ಕೆಲವರು ಕೇರಿ ಹಬ್ಬ ಎಂದೇ ಮಾಡುತ್ತಾರೆ. ಕೆಲವರು ಸಿಹಿ ಅಡುಗೆ ಮಾಡುವುದು ಇತ್ತೀಚೆಗೆ ಕಂಡುಬರುತ್ತದೆ.

**೧೦. ಹೊಸ್ತಿಲ ಹುಣ್ಣಿಮೆ :**

ಈ ಹಬ್ಬವನ್ನು ವಿಶ್ವಾಸದಿಂದ ಆಚರಿಸುತ್ತಾರೆ. ಚಂದ್ರನು ಸಂಪೂರ್ಣವಾಗಿ ಮೂಡಿದ ಮಾರ್ಘಶಿರ ಮಾಸದ (ನವೆಂಬರ್–ಡಿಸೆಂಬರ್) ತಿಂಗಳಲ್ಲಿ ಆಚರಿಸುತ್ತಾರೆ. ಹೊಸ್ತಿಲ ಹುಣ್ಣಿಮೆ

ಸಮಯದಲ್ಲಿ ಸಾಧು ಆಗಿರುವ ಜಮದಗ್ನಿಯನ್ನು ಕಾರ್ತವೀರ್ಯ ಎಂಬುವವನು ಕೊಲ್ಲಲ್ಪಟ್ಟಿರುತ್ತಾನೆ. ಈ ದಿನದಂದು ಎಲ್ಲಮ್ಮನ ಗಂಡ ಜಮದಗ್ನಿ ಋಷಿಯು ತೀರಿಹೋಗಿದ್ದರಿಂದ ಎಲ್ಲಮ್ಮ ಈ ಹುಣ್ಣಿಮೆಯ ದಿನಗಳಲ್ಲಿ ವಿಧವೆಯಾಗಿರುತ್ತಾಳೆ. ವಿಧವೆಯಾದ ಸಂಗತಿಯನ್ನು ಕೇಳಿ ಭಕ್ತರು, ಜೋಗತಿಯರು, ಬಸವಿಯರು ತಮ್ಮ ಕೈಗಳಲ್ಲಿನ ಕಾಜಿನ (ಹಸಿರು) ಬಳೆಗಳನ್ನು ತೆಗೆಯುತ್ತಾರೆ. ಇದು ವಿಧವೆ ಎಂಬ ಸಂಕೇತವನ್ನು ತೋರಿಸಿಕೊಡುತ್ತದೆ. ಇದನ್ನು ರಂಡೆ ಹುಣ್ಣಿಮೆಯ ರೂಪದಲ್ಲಿ ಆಚರಿಸುತ್ತಾರೆ.

ಆದ್ದರಿಂದ ಈ ಹಬ್ಬದ ದಿನದಂದು ಎಲ್ಲಮ್ಮ ದೇವತೆಗೆ ಭಕ್ತರು ತಮ್ಮ ದೇವರ ಹಡ್ಲಿಗೆಯನ್ನು ತೆಗೆದುಕೊಂಡು ಹೋಗುತ್ತಾರೆ. ಕೆಲವು ಜೋಗತಿಯರು, ಭಕ್ತರು ತಮ್ಮ ಮನೆಗಳಿಂದ ವೈಯಕ್ತಿಕವಾಗಿ ಎಲ್ಲಮ್ಮ ದೇವತೆಗೆ ಹೋಗುತ್ತಾರೆ. ಎಲ್ಲಮ್ಮ ದೇವತೆಯ ಸ್ಥಳಗಳಲ್ಲಿ ಸಿಹಿ ಅಡಿಗೆಯನ್ನು ಮಾಡಿ 'ಹಡ್ಲಿಗೆ' ಯನ್ನು ತುಂಬಿಸಿಕೊಳ್ಳುತ್ತಾರೆ. ಇದಕ್ಕೆ ಹಡ್ಲಿಗೆ ತುಂಬಿಸಿಕೊಳ್ಳುವುದು ಎಂದು ಹೇಳುತ್ತಾರೆ.

### ೧೧. ಎಳ್ಳು ಅಮವಾಸ್ಯೆ :

ಈ ಹಬ್ಬವನ್ನು ಚಂದ್ರನು ಮೂಡದೇ ಇರುವ (ಕತ್ತಲೆಯ) ದಿನಗಳಲ್ಲಿ ಆಚರಿಸುತ್ತಾರೆ. ಈ ಹಬ್ಬದಲ್ಲಿ ವಿಶೇಷವಾಗಿ ಹೆಣ್ಣು ದೇವತೆಯರ ಪೂಜೆಯನ್ನು ಸಲ್ಲಿಸುತ್ತಾರೆ. ಈ ದಿನದಂದು ವಿಶೇಷವಾದ ದೋಸೆಯನ್ನು ಮಾಡುತ್ತಾರೆ. ನಾನಾ ತರಹದ ಬಣ್ಣಗಳಿಂದ ಕೂಡಿಸಿ ಸಿಹಿಯಾದ ಸಣ್ಣ ಸಣ್ಣ ಗುಳಿಗೆಯನ್ನು ಮಾಡುತ್ತಾರೆ. ಇದಕ್ಕೆ 'ಕುಸಿರೆಳ್ಳು' ಎಂದು ಕರೆಯುವರು. ಸಕ್ಕರೆ, ಎಳ್ಳು ಎರಡೂ ಕೂಡಿದ್ದಕ್ಕೆ 'ಸಿಹಿ ಕುಸಿರೆಳ್ಳು' ಎಂದು ಕರೆಯುವರು. ಆದ್ದರಿಂದ 'ಎಳ್ಳು ಅಮವಾಸ್ಯೆ' ಎಂದು ಕರೆಯುವರು. ಈ ಹಬ್ಬದ ದಿನದಂದು ಕುಸಿರೆಳ್ಳನ್ನು ಗೆಳೆಯರಿಗೆ, ಸಂಬಂಧಿಕರಿಗೆ ಕೊಟ್ಟು-ತೆಗೆದುಕೊಳ್ಳುತ್ತಾರೆ. ಸಣ್ಣ ಮಕ್ಕಳು ಹಿರಿಯರಿಗೆ ಕುಸಿರೆಳ್ಳನ್ನು ಕೊಟ್ಟು ಅವರಿಂದ ಆಶೀರ್ವಾದ ಪಡೆದುಕೊಳ್ಳುತ್ತಾರೆ. "ಎಳ್ಳು ಬೆಲ್ಲ ತಿಂದು ಎಳ್ಳದ ಹಾಗೆ ಇರೋಣ" (Let us be intimate like sesamum and jaggery) ಎಂದು ಈ ಹಬ್ಬವನ್ನು ಆಚರಿಸುತ್ತಾರೆ.

### ೧೨. ಮಕರ ಸಂಕ್ರಾಂತಿ :

ನಿಸರ್ಗದ ದಿವ್ಯಶಕ್ತಿಗಳ ಆರಾಧನೆಯಲ್ಲಿ 'ಮಕರ ಸಂಕ್ರಾಂತಿ' ಹಬ್ಬವು ಹಿಂದಿನಿಂದಲೂ ಪ್ರಾಧಾನ್ಯತೆಯಿಂದ ನಡೆದುಬಂದಿದೆ. ಈ ಹಬ್ಬವು ಜನವರಿ ತಿಂಗಳಲ್ಲಿ ಪ್ರಾರಂಭವಾಗುತ್ತದೆ. ಈ ಹಬ್ಬದ ದಿನದಂದು ಸೂರ್ಯನು ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರುತಿಂಗಳವರೆಗೆ ತಿರುಗುತ್ತಾನೆ. ಈ ದಿನವನ್ನು 'ಮಕರ ಸಂಕ್ರಾಂತಿ' ಎಂದು ಕರೆಯುವರು ಮತ್ತು ಈ ಹಬ್ಬದಂದು 'ಎಳ್ಳು-ಬೆಲ್ಲ' ಹಂಚುವುದುಂಟು. 'ಭೋಗಿ, ಸಂಕ್ರಮಣ ಮತ್ತು ಕನು ಹಬ್ಬ ಎಂದು ಮೂರು ದಿನಗಳ ಕಾಲ ಈ ಹಬ್ಬವನ್ನು ಆಚರಿಸುತ್ತಾರೆ. ಈ ವೇಳೆಗೆ ನಾನಾ ತರಹದ ಬೆಳೆಗಳನ್ನು ಬೆಳೆಯುತ್ತಾರೆ.

ಮನೆಯಲ್ಲಿನ ಮಕ್ಕಳಿಗೆ ಬೆಳೆದ ಹಣ್ಣುಗಳನ್ನು ತಲೆಯ ಮೇಲೆ ಹಾಕಿ ಎರೆದು ಆರತಿಯನ್ನು ಮಾಡುತ್ತಾರೆ. ಶಿವಮೊಗ್ಗ ಜಿಲ್ಲೆಯಲ್ಲಿ ಒಂದೆರಡು ದಿನ 'ಎಳ್ಳು ಬೆಲ್ಲ' ಹಂಚುತ್ತಾರೆ.

ಈ ದಿನವನ್ನು 'ಪೊಂಗಲ್ ಹಬ್ಬ' ಎಂದು ಕರೆಯುತ್ತಾರೆ. ಈ ದಿನ ಪೊಂಗಲ್, ಕಬ್ಬಿನ ಜಲ್ಲೆಯನ್ನು ನೈವೇದ್ಯ ಮಾಡುತ್ತಾರೆ. ಹೆಣ್ಣು ಮಕ್ಕಳು ಹೊಸ ಬಟ್ಟೆ ಉಟ್ಟು ಎಳ್ಳು ಬೆಲ್ಲವನ್ನು ದೇವರಿಗೆ ನೈವೇದ್ಯ ನೀಡಿ ಎಲ್ಲರಿಗೂ ಹಂಚುತ್ತಾರೆ. ಎಳ್ಳು ಬೆಲ್ಲ ತೆಗೆದುಕೊಂಡು ಬೆಲ್ಲದಂತಹ ಮಾತನಾಡೋಣ ಎಂದು ಹೇಳಿ ಶುಭ ಹಾರೈಸುತ್ತಾರೆ.

**೧೩. ಗೊಂದಲ**

**ಗೊಂದಲವೆಂದರೆ ದೇವಿಯ ನಾಮಘರ್ಜನೆ.**

ಶಿವಮೊಗ್ಗ ಜಿಲ್ಲೆಯಲ್ಲಿ ಈಗಲೂ ಗೊಂದಲವು ಜನಪದ ಆಚರಣೆಗಳಲ್ಲೇ ಶ್ರೇಷ್ಠವೆನ್ನುವಷ್ಟು ಪ್ರಧಾನ. ಗೊಂದಲದ ವಿಧಿವಿಧಾನಗಳಲ್ಲಿ ಮುಖವರ್ಣಿಕೆ, ನೃತ್ಯ, ಹಾಡು, ಸಂಭಾಷಣೆ, ಅಭಿನಯ, ವಿನೋದಗಳು ಸಂಯೋಜಿತಗೊಂಡು ಬೋಧಪ್ರದವಾಗಿರುವಂತೆ ರಸಾತ್ಮಕವಾಗಿಯೂ ಇರುತ್ತವೆ. ಗೊಂದಲಿಗರ ದೇವೀಸ್ತವನ, ವರ್ಣನೆ, ಆಕೆಯನ್ನೇ ಕುರಿತ ಕಥಾನಕಗಳು ಹಾಗೂ ಅನ್ಯ ಭಕ್ತಿಯುತ ಕಥಾನಕಗಳು ಮರಾಠೀ ಜನಪದ ಸಾಹಿತ್ಯದ ಒಂದು ಪ್ರಮುಖ ಭಾಗವೇ ಎನ್ನಿಸಿದೆ.

ಸುಪ್ರಸಿದ್ಧ ಮರಾಠಿ ಜಾನಪದ ಇತಿಹಾಸಜ್ಞ ಡಾ. ರಾಮಚಂದ್ರ ದೇಖಣೆ ಹೇಳಿರುವಂತೆ ಗೊಂದಲ ಮಹಾರಾಷ್ಟ್ರದ ಧರ್ಮವಾಗಿದೆ. ಗೊಂದಲಿಗರು ಈ ಧರ್ಮದ ಪುರೋಹಿತರೆಂದು ಪರಿಗಣಿಸಲ್ಪಡುತ್ತಾರೆ. ಅಂಬಾಭವಾನಿಯು ಸ್ಫೂರ್ತಿ ದೇವತೆಯೆಂದೂ, ಕುಲಸ್ವಾಮಿನಿಯೆಂದೂ ಅವರ ನಂಬುಗೆ. ಆಕೆಯ ಉಪಾಸಕರಾದ ಗೊಂದಲಿಗರು ಮರಾಠೀ ಸಂಸ್ಕೃತಿಯ ಮಹಾನ್ ವಾರಸುದಾರರೆಂದು ಗೌರವಿಸಲ್ಪಡುತ್ತಾರೆ.

ಮಹಾರಾಷ್ಟ್ರದ ವಾಘ್ಯಾ ಮುರಳಿಗಳ 'ಜಾಗರಣ' ದಂತೆ ಗೊಂದಲವೂ ಪುರಾತನ ಕಾಲದ್ದು. ಕ್ರಿ.ಶ. ಆರು–ಏಳನೇ ಶತಮಾನದ ಕದಂಬರ ಕಾಲದಲ್ಲೇ ಈ ಆಚರಣೆ ಇದ್ದತ್ತು. ಆ ವಂಶದ ಅರಸರು ತುಳಜಾಪುರ ಭವಾನಿಯ ಭಕ್ತರಾಗಿದ್ದರು. ಆಕೆಯ ಉತ್ಸವದಲ್ಲಿ ಗೊಂದಲ ಹಾಕಿಸುತ್ತಿದ್ದರು. ಅವರ ಕಾಲದ ರಾಜ್ಯವೀಗ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಹಂಚಿಹೋಗಿದೆ.

ಯಾದವ ಕಾಲದ ವಾಙ್ಮಯದಲ್ಲಿ ಗೊಂದಲದ ಉಲ್ಲೇಖವಿದ್ದು, ಅದು ಭೂತ ಮಾತೆಯ ಹೆಸರಿನಲ್ಲಿ ನಡೆಯುತ್ತಿತ್ತು. ಈ ದೇವತೆಯೇ ತುಳಜಾಭವಾನಿ ಹಾಗೂ ರೇಣುಕೆಯರಲ್ಲಿ ಸಮಾವಿಷ್ಟಳಾಗಿದ್ದಾಳೆಂದು ನಂಬುಗೆ ಇಂದಿಗೂ ಇದೆ.

ಜ್ಞಾನೇಶ್ವರ, ನಾಮದೇವ, ದತ್ತೋಪಂತ, ಮುಂತಾದ ಸಂತರು ರಚಿಸಿದ ಪದ್ಯಗಳಲ್ಲಿ, ಅಭಂಗಗಳಲ್ಲಿ ಹಲವಾರು ಗೊಂದಲದ ಆಚರಣೆಗೆ ಸಂಬಂಧಿಸಿದವೂ ಇವೆ.

❖ ಸಂತ ಏಕನಾಥರು ತಮ್ಮ 'ಭಾರೂಡ' ಆಚರಣೆಯಲ್ಲಿ ಗೊಂದಲಕ್ಕೆ ಸ್ಥಾನ ನೀಡಿ ಆಧ್ಯಾತ್ಮಿಕ ಪಟ್ಟಕ್ಕೇರಿಸಿದ್ದಾರೆ.

❖ ನಾಥ ಮಹಾರಾಜರು ವಿಠಾಯಿ ರೂಪದಲ್ಲಿ ಜಗದಂಬೆಯ ಗೊಂದಲ ಹಾಕಿಸುತ್ತಿದ್ದರು.

❖ ಸಮರ್ಥ ರಾಮದಾಸರು, ಸಂತ ತುಕಾರಾಮರು ಗೊಂದಲವನ್ನು ಗೌರವಿಸಿದ್ದಾರೆ.

❖ ತುಳಜಾಭವಾನಿಯ ಪರಮ ಆರಾಧಕನಾದ ಛತ್ರಪತಿ ಶಿವಾಜಿ ಮಹಾರಾಜನ ರಾಜ್ಯ ಸ್ಥಾಪನಾ ಕಾರ್ಯದಲ್ಲಿ ಗೊಂದಲಿಗರು ತುಂಬಾ ನೆರವಾದರು ಎನ್ನಲಾಗಿದೆ. ಅವರಿಂದ ಗೊಂದಲ ಹಾಕಿಸಿಯೇ ತಾನಾಜಿ ಸಿಂಹಗಡವನ್ನು ಪಡೆಯ ಹೋದನೆಂದು ಪ್ರತೀತಿ ಇದೆ.

❖ ಮರಾಠಾ ಅರಸರಲ್ಲಿ ಪೇಶ್ವೆಗಳು ಗೊಂದಲಿಗರಿಗೆ ಆಶ್ರಯ ನೀಡಿದ್ದರಿಂದ ಅವರ ಜನಪ್ರಿಯತೆ ಮುಗಿಲು ಮುಟ್ಟಿತು. ಆ ನಂತರವೂ 'ಪೊವಾಡೆ' ಎಂಬ ಲಾವಣಿ ತರಹದ ವೀರಗಾಥೆಗಳನ್ನು ಹಾಡಿ ಅವರು ರಾಷ್ಟ್ರಾಭಿಮಾನವನ್ನು ಜಾಗ್ರತಗೊಳಿಸುವುದರಲ್ಲಿ ಸಿದ್ಧಹಸ್ತರೆನ್ನಿಸಿದ್ದೂ ಇದೆ.

❖ ಹೀಗೆ ಗೊಂದಲಿಗರು ಮತ್ತು ಅವರ ಗೊಂದಲಕ್ಕೆ ಕೇವಲ ಐತಿಹಾಸಿಕ ಆಧಾರಗಳು ಮಾತ್ರವಲ್ಲ ಪೌರಾಣಿಕ ಆಧಾರಗಳೂ ಇರುವುದೊಂದು ವಿಶೇಷ.

❖ ಜಮದಗ್ನಿ ಮತ್ತು ರೇಣುಕಾರಿಂದ ತಮ್ಮ ಉತ್ಪತ್ತಿಯಾಯಿತೆಂದೂ ಈಗ ಮಹಾರಾಷ್ಟ್ರದಲ್ಲಿರುವ ಮಾಹೂರ ತಮ್ಮ ಮೂಲಸ್ಥಾನವೆಂದೂ ಗೊಂದಲಿಗರು ಹೇಳಿಕೊಳ್ಳುತ್ತಾರೆ.

❖ ಪರಶುರಾಮನು ಬೇರಾಸುರನೆಂಬ ದೈತ್ಯನ ಶಿರ ತರಿದು ಅವನ ದೇಹದಿಂದ ಚೌಡಿಕೆ ನಿರ್ಮಿಸಿಕೊಂಡು ನುಡಿಸುತ್ತಾ ರೇಣುಕೆಯಲ್ಲಿಗೆ ಬಂದು ಮಾತೃವಂದನೆ ಮಾಡಿದ, ಅಂದಿನಿಂದಲೇ ಈ ಗೊಂದಲದ ಆಚರಣೆ ಮೊದಲಾಯಿತೆನ್ನುತ್ತಾರೆ.

❖ 'ಆಮಲಿಕಾ ಗ್ರಾಮ ಮಹಾತ್ಮ್ಯ' ದ ಪ್ರಕಾರ ಈಗಣ 'ಮಾಹೋರ' ರೇಣುಕಾ ದೇವಿಯ ಮುಖ್ಯ ನಿವಾಸಗಳಲ್ಲೊಂದು. ಆ ಕಾರಣದಿಂದಲೇ ಈ ಪವಿತ್ರ ಕ್ಷೇತ್ರದ ಮಹಿಮೆಯನ್ನು ಹಾಡುವ ಹಲವು ಕಥಾನಕಗಳಿವೆ. ಮೇಲ್ಕಾಣಿಸಿದ ಗ್ರಂಥದ ಮೂರು ಅಧ್ಯಾಯಗಳಲ್ಲಿ 'ಗೋಂದಲೀ ನೃತ್ಯದ' ವರ್ಣನೆಯೇ ಇದೆಯಂತೆ. ಇದರಲ್ಲಿ ಉದ್ಧೃತವಾಗಿರುವ ಕೆಲವು ಶ್ಲೋಕಗಳು ಶಾರ್ಙ್ಗದೇವನ ಸಂಗೀತ ರತ್ನಾಕರದ "ಗೌಂಡಲೀ ವಿಧಿ" ಯ ವರ್ಣನೆಯಲ್ಲೂ ಇವೆ ಎಂದು ತಿಳಿದಿದೆ.

❖ ಸ್ಕಂದ ಪುರಾಣದ ಪ್ರಭಾಸ ಖಂಡದಲ್ಲಿ ಗೊಂದಲವನ್ನು ಉಲ್ಲೇಖಿಸಿರುವುದುಂಟು. ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರ ಗೊಂದಲದ ಆಚರಣೆಯಲ್ಲಿ ಪ್ರಾದೇಶಿಕ ಭಿನ್ನತೆ ಇದ್ದರೂ ಉದ್ದೇಶ ಆಶಯಗಳಲ್ಲಿ ವ್ಯತ್ಯಯವಿಲ್ಲ.

ಹೀಗೆ ಕನ್ನಡದ ನೆಲದಿಂದ ಭೂಮಾತೆ ಮತ್ತು ಆಕೆಗೆ ಸಂಬಂಧಿಸಿದ ಗೊಂದಲಾಚರಣೆ ಪ್ರಾಕ್ತನ ಕಾಲದಿಂದಲೇ ಪ್ರಸರಿಸಿ ಮಧ್ಯಪ್ರದೇಶದವರೆಗೂ ವಿಸ್ತರಿಸಿರುವುದನ್ನು ಕಾಣಬಹುದು. ಆದ್ದರಿಂದ ಗೊಂದಲಿಗರು ಶಿವಾಜಿ ಕಾಲದಲ್ಲಿ ಗೂಢಚಾರರಾಗಿ ಕರ್ನಾಟಕಕ್ಕೆ ಪ್ರವೇಶಿಸಿದರೆಂಬುದು ಸರಿಯಲ್ಲ. ರಾಜ್ಯಗಳ ಭೌಗೋಳಿಕ ಎಲ್ಲೆಗಳು ಬದಲಾದ ಪರಿಸ್ಥಿತಿಯಲ್ಲಿ ಒಂದೊಂದು ಕಾಲದಲ್ಲಿ ಕೊಲ್ಲಾಪುರದ ಮಹಾಲಕ್ಷ್ಮೀ, ಮಾಹೋರದ ರೇಣುಕಾ, ತುಳಜಾಪುರದ ಅಂಬಾಭವಾನಿಗಳಂಥಾ ದೇವೀಕ್ಷೇತ್ರಗಳು ಮಹಾರಾಷ್ಟ್ರದಲ್ಲಿ ಸೇರಿವೆ. ಸವದತ್ತಿ ಯಲ್ಲಮ್ಮದೇವಿಯ ಕ್ಷೇತ್ರ ಕರ್ನಾಟಕದಲ್ಲಿ ಉಳಿದಿದೆ. ಆದರೆ ಈ ಎಲ್ಲಾ ದೇವತೆಗಳ ಭಕ್ತಕೋಟಿ ಈ ಮುನ್ನ ಹೇಳಿರುವಂತೆ ಎರಡೂ ಕಡೆ ಇದೆ. ಎಲ್ಲೆಲ್ಲಿ ದೇವೀ ಭಕ್ತರಿದ್ದಾರೋ ಅಲ್ಲೆಲ್ಲಾ ಗೊಂದಲಿಗರೂ ನೆಲೆಸಿದ್ದಾರೆ. ತಮ್ಮ ಅಂಬಾಭವಾನಿಯ ಭಕ್ತರಾಗೇ ಉಳಿದಿದ್ದಾರೆ. ಅವರು ತಮ್ಮ ತಾಯ್ನುಡಿಯಾದ ಮರಾಠಿಯನ್ನು ತಮ್ಮ ಅಸ್ತಿತ್ವದ ಸಂಕೇತವೆಂದೂ ಅದು ಅಂಬಾದೇವಿಯ ಭಜನಾ ಭಾಷೆಯೆಂದೂ ಭಾವಿಸಿದ್ದಾರೆ. ಈಗಲೂ ತಾವು ನೆಲೆಸಿರುವ ಪ್ರದೇಶಗಳ ದೈನಂದಿನ ವ್ಯವಹಾರಿಕ ಭಾಷೆಗಳೊಂದಿಗೆ ಮರಾಠಿಯಲ್ಲೂ ದೇವೀಸ್ತೋತ್ರ ಮಾಡುತ್ತಾರೆ.

ಗೊಂದಲ ಹಾಕಿಸುವ ಭಕ್ತರಲ್ಲಿ, ಮಾಂಸಾಹಾರಿಗಳು ಕೋಳಿ, ಕುರಿ, ಹಂದಿಗಳನ್ನು ದೇವಿಗೆ ಬಲಿಕೊಡುತ್ತಾರೆ. ಶಾಖಾಹಾರಿಗಳಾದರೆ ಕೇವಲ ಆರಾಧನೆ, ಆಖ್ಯಾನಗಳ ಗೊಂದಲ ಕಾರ್ಯ ನೆರವೇರಿಸಿಕೊಳ್ಳುತ್ತಾರೆ. ಈ ರೀತಿ ಉಭಯವರ್ಗಕ್ಕೂ ಅಂಬಾಮಾತೆ ಮತ್ತು ಗೊಂದಲಿಗರು ಸವ್ಯಸಾಚಿಗಳೇ ಸರಿ.

ಇಲ್ಲಿ ಇನ್ನೊಂದು ಮಾತು ಹೇಳಬೇಕು. ಗೊಂದಲದ ಕಾಲದಲ್ಲಿ ಇಷ್ಟೆಲ್ಲಾ ಗೌರವದಿಂದ ಕಾಣುವ ಮೇಲ್ವರ್ಗದ ಭವಾನಿ ಭಕ್ತರು ಗೊಂದಲಿಗರ ಸಾರ್ವಜನಿಕ ಆಟಗಳನ್ನು ನೋಡಲು ಹಿಂಜರಿವ ಮಡಿಭಾವನೆ ತೋರುತ್ತಾರೆ. ಇದೊಂದು ವಿಪರ್ಯಾಸವೇ ಸರಿ.

**ಕಥೆ ಅಲ್ಲ ಆಟ**

ಜನಪದ ರಂಗಕಲೆಗಳಲ್ಲಿ ಹಲವಕ್ಕೆ ಇಂದಿನ ಅರ್ಥದ ರಂಗಕಲೆ ಎಂಬ ಮಾತನ್ನು ಅನ್ವಯಿಸಲು ಹಿಂದೆಗೆಯುವುದೂ ಇದೆ. ನಿಜ. ಅವು ಆ ಉದ್ದೇಶದಿಂದ ಮೈದಳೆದುವಲ್ಲ, ಸಾಂಪ್ರದಾಯಿಕ ಆರಾಧನಾ ಭಕ್ತಿಯ ಅಭಿವ್ಯಕ್ತಿಯಾಗಿ ರೂಪಗೊಂಡು ಅವು ಬಾಳಿ ಬಂದಿವೆ. ಗೊಂದಲಿಗರ ಗೊಂದಲ ಮತ್ತು ಆಟ ಇಂಥವುಗಳಲ್ಲೊಂದು.

ಹಲವರು ಭಾವಿಸಿರುವಂತೆ ಗೊಂದಲಿಗರು ಕೇವಲ ಕಥೆ ಹೇಳುವುದಿಲ್ಲ. ಅವರ ಕಲಾ ಪ್ರಕಾರದಲ್ಲಿ ಬರೀ ನಿರೂಪಣೆಯಿಲ್ಲ, ಮನೆತನಗಳಲ್ಲಿರುವಂತೆ ಯಾರೋ ಒಬ್ಬ "ಹೂಂ" ಗುಟ್ಟುವುದಿಲ್ಲ. "ಆಹಾ" "ಹೌದು" ಎನ್ನುತ್ತಾ ನಿರ್ದಿಷ್ಟ ಕರ್ತವ್ಯದ ಹಿಮ್ಮೇಳಕ್ಕೆ ದನಿದೊರುವುದೊಂದೇ ಅಲ್ಲದೇ, ಕಥನ ಕ್ರಿಯೆಯಲ್ಲಿ ಪಾಲ್ಗೊಳ್ಳುವುದೂ ಇದೆ. ಹಾಡಿಗೆ ಆತ ಸೊಲ್ಲು ನೀಡುತ್ತಾನೆ. ಈ ಕಲಾಪ್ರಕಾರದಲ್ಲಿ ರಂಗ

ಪರಿಕರಗಳಿಲ್ಲ, ವೇಷಭೂಷಣ ತೊಟ್ಟ ನಿಗದಿತ ಪಾತ್ರ ವರ್ಗವಿಲ್ಲ. ಪ್ರತ್ಯೇಕ ವಾದ್ಯಕಾರರಿಲ್ಲ, ಭಾಗವತರಿಲ್ಲ. ಆದರೆ ನಾಟಕದ ಪ್ರಮುಖ ಲಕ್ಷಣಗಳಾದ ತಾನಲ್ಲದ ಇನ್ನೊಂದು ವ್ಯಕ್ತಿಯಾಗಿ ವರ್ತಿಸುವ ಅನುಕರಣೆಯ ನಟನಾಕ್ರಿಯೆ, ಚಲನೆ, ಅರ್ಥಪೂರ್ಣ ಸಂಭಾಷಣಾ ಸಾಹಿತ್ಯಗಳಿವೆ. ಅವುಗಳೊಡನೆ ವಾಸ್ತವಿಕತೆ ಮತ್ತು ಕಲ್ಪನೆಯ ಭಾವುಕತೆಗಳೂ ಅಂಗವಿಸಿರುತ್ತವೆ. ನೃತ್ಯ ಹಾಡುಗಳಂತೂ ಅವರ ಸಜೀವ ಸಂಬಂಧಿಗಳು.

ಇತರ ರಂಗಕಲೆಗಳಂತೆ ಗೊಂದಲಿಗರ ಆಟವೂ ನಾಂದಿಯಿಂದ ಕೂಡಿ ಭರತವಾಕ್ಯದಿಂದ ವಿಸರ್ಜನೆಗೊಳ್ಳುತ್ತದೆ. ಇವೆರಡರ ಮಧ್ಯೆಯ ಕ್ರಿಯಾ ಪರಂಪರೆಯೇ ಅವರ ಆಟ. ನಮ್ಮ ಜಾನಪದ ನಾಟಕ ಪರಂಪರೆಯ ಪೂರ್ವರಂಗ ಉತ್ತರ ರಂಗಗಳು ಗೊಂದಲಿಗರ ಕಲಾಪ್ರಯೋಗದಲ್ಲೂ ಇವೆ. ಈ ಎಲ್ಲಾ ಕಿನ್ನರಿ ಜೋಗಿಗಳ ಆಟದೊಂದಿಗೆ ಜಾನಪದ ರಂಗಕಲೆಗಳ ಪಟ್ಟಿಗೆ ಸೇರಿಸುವುದು ಹೆಚ್ಚು ಸಮಂಜಸ. ಅಂತೆಯೇ ನಮ್ಮ ಜನಪದರು ಅವರ ಈ ಕಲಾಪ್ರಕಾರಕ್ಕೆ "ಗೊಂದ್ಲೇರ ಆಟ ಆಡಿಸುವುದು" ಎನ್ನುತ್ತಾರೆ. ತಮ್ಮ ಹಲವು ಜಾನಪದ ಪ್ರದರ್ಶನಾತ್ಮಕ ಕಲೆಗಳನ್ನು ಆಟವೆಂದೇ ಅವರು ಕರೆವ ರೂಢಿ.

ಕಿನ್ನರಿ ಜೋಗಿಗಳಂತೆ ಗೊಂದಲಿಗರು ರಾತ್ರಿ ಆಟವಾಡುವುದು ಮೂಲ ಪರಂಪರಾಗತ ವೃತ್ತಿ. ಹಗಲು ಹೊತ್ತಿನಲ್ಲಿ ತತ್ವಪದ, ಲಾವಣಿಗಳಂಥ ಪದಗಳನ್ನು ಹೇಳಿ ಭಿಕ್ಷೆ ಬೇಡುವುದು ಉಪವೃತ್ತಿ. ಈ ಉಪವೃತ್ತಿಯನ್ನೇ ಪ್ರಮುಖವೆಂದು ಪರಿಗಣಿಸಿ ಇವರನ್ನು ವೃತ್ತಿಗಾಯಕ ವರ್ಗಕ್ಕೆ ಸೇರಿಸುವುದು ಸಮಂಜಸವಲ್ಲವೆಂದೇ ಹೇಳಬೇಕು. ಇವರ ಆಟಗಳು ಕೇವಲ ಗೀತಪ್ರಧಾನ ಕಥನ ಕಾವ್ಯಗಳೆನ್ನಲು ಅಡ್ಡಿ ಇಲ್ಲ.

**ಕಥೋದ್ದೇಶ :**

ಗೊಂದಲಿಗರ ಕಥಾವಸ್ತುವಿಗೆ ಉದ್ದೇಶವಿದೆ. ತನ್ನ ಪ್ರೇಕ್ಷಕರ ಅನುಭವವಾಗಿ ಅವರೊಂದಿಗೆ ಹೊಂದಿಸಿಕೊಂಡು ಸಾಗುವ ಗುಣವಿದೆ. ಅವರ ಆಟಗಳಲ್ಲಿ ಧಾರ್ಮಿಕ ದೃಷ್ಟಿಗಿಂತ ಲೌಕಿದ ದೃಷ್ಟಿ ಢಾಳವಾಗಿರುವುದೇ ಹೆಚ್ಚು.

ಮಾನವನು ಲೌಕಿಕ ಜೀವನದ ಅರ್ಥವಂತಿಕೆ ಹಾಗೂ ಸಾರ್ಥಕತೆಗಳು ಈ ಭೂಲೋಕದಲ್ಲೇ ಲಭ್ಯ. ನ್ಯಾಯ ನೀತಿ ವಿವೇಕ ಮುಂತಾದ ಇತ್ಯಾತ್ಮಕ ಜೀವನ ಮೌಲ್ಯಗಳನ್ನು ಇಲ್ಲಿ ಮಾತ್ರ ಕಂಡುಕೊಳ್ಳಲು ಸಾಧ್ಯವೆಂಬುದನ್ನು ಅವರ ಆಟಗಳು ಮನವರಿಕೆ ಮಾಡಿಕೊಡುತ್ತದೆ. ಪ್ರಾಮಾಣಿಕ ಜೀವನವನ್ನು ವೈಭವೀಕರಿಸುವುದರ ಹೊರತು ಅವು ಇನ್ನಾವುದರ ಸಾಧನಗಳಿಲ್ಲ. ಮಾನವತೆಯ ಘನತೆಯನ್ನು ಅವು ಎತ್ತಿಹಿಡಿಯುತ್ತವೆ. ಭೌತಿಕನೆಲೆಯ ಲೋಕವಿರೋಧಿಗಳಿಗೆ ಉಳಿಗಾಲವಿಲ್ಲ ಎಂಬುದನ್ನು ಮನವರಿಕೆ ಮಾಡಿ ಕೊಡುತ್ತವೆ. ಸಭ್ಯರನ್ನೂ, ಸಾಧ್ವಿ ಸ್ತ್ರೀಯರನ್ನೂ ಅರಮನೆಯ ರಾಕ್ಷಸೀ

ಮಹತ್ವಾಕಾಂಕ್ಷೆಯು ಕಾಡುತ್ತದೆಂಬುದನ್ನೂ ತೋರಿಸುವ ಮೂಲಕ ವ್ಯಕ್ತಿ ಶೋಷಣೆ, ರಾಗದ್ವೇಷಗಳಿಗೆ ಕುಲ ವರ್ಗಗಳ ಭೇದವಿಲ್ಲವೆಂಬುದನ್ನು ಇಲ್ಲಿಯ ಕತೆಗಳು ಬಿಂಬಿಸುತ್ತವೆ.

ಗೊಂದಲಿಗರಂಥ ಅಲೆಮಾರೀ ಕಲಾವಿದರ ಆಟಗಳು ಜನಸಾಮಾನ್ಯರಲ್ಲಿ ಧೈರ್ಯ, ಸಾಹಸ, ಕರ್ತವ್ಯ ಪ್ರಜ್ಞೆ, ಉದಾತ್ತತೆ, ಪ್ರೀತಿ, ಆತ್ಮವಿಶ್ವಾಸ, ದೈವಭಕ್ತಿಗಳನ್ನು ಪ್ರೇರಿಸಬಲ್ಲವು. ತಮ್ಮ ಪರಿಮಿತ ಪ್ರೇಕ್ಷಕರ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರವಾಡುವ ಸತ್ವವೂ ಅವಕ್ಕಿದೆ.

ಒಟ್ಟು ನಮ್ಮ ಕನ್ನಡನಾಡಿನಲ್ಲಿ ಗೊಂದಲಿಗರು ಆಡುವ ಕಥೆಗಳು ಅರವತ್ತರಿಂದ ಎಂಭತ್ತರವರೆಗೆಂದು ಕೆಲವರು ಅಂದಾಜು ಮಾಡಿದ್ದಾರೆ. ಡಾ. ನಿಂಗಣ್ಣ ಸಣ್ಣಕ್ಕಿ ಅವರು ತಮ್ಮ ಮಹಾಪ್ರಬಂಧ ಹಾಗೂ ಅನ್ಯ ಲೇಖನಗಳಲ್ಲಿ ಇವರ ಇಪ್ಪತ್ತೇಳು ಕಥೆಗಳನ್ನು ಹೆಸರಿಸಿದ್ದಾರೆ.

**ಕಥಾ ಬಾಂಧವ್ಯಗಳು :**

ಮೌಖಿಕ ಪರಂಪರೆಯ ಕಥೆ, ಕಾವ್ಯ, ರಂಗಕಲೆಗಳ ವಸ್ತು ಮತ್ತು ಆಶಯಗಳಲ್ಲಿ ವ್ಯಾಪಕವಾಗಿ ಇಲ್ಲಿವೆ. ಚದುರದಂತೆ ಸಾಮ್ಯತೆ ಬಂಧುತ್ವಗಳಿರುವುದು ಜಾನಪದದ ವಿಶ್ವ ಸ್ವಭಾವ. ಸಿಂಡ್ರೆಲಾ ಇದಕ್ಕೊಂದು ನಿದರ್ಶನ. ಈ ಕತೆಯನ್ನೇ ಹೋಲುವ ೧೪೦೦ ರಷ್ಟು ಕತೆಗಳು ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಿಂದ ಲಭ್ಯವಾಗಿವೆಯಂತೆ! ಇವುಗಳಲ್ಲಿ ಪಾಠಾಂತರಗಳೂ ಇರದಿರುವುದಿಲ್ಲ. ಆದರೆ ಕವಿಕೃತಿಗಳನ್ನು ಪರಾಮರ್ಶಿಸಿ ಸಾಮಾನ್ಯ ಪಾಠವೊಂದನ್ನು ಗೊತ್ತುಮಾಡಿದಂತೆ ಇವುಗಳನ್ನು ಮಾಡುವುದು ಅಸಾಧ್ಯ.

ಕನ್ನಡ ಜಾನಪದ ಕಥೆ, ಕಥನಕಾವ್ಯ, ರಂಗಕಲೆಗಳಲ್ಲಿ ಕಾಣಬರುವ ಕಥಾ ಬಾಂಧವ್ಯಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದು.

| **ಕಥಾವಸ್ತುಗಳ ಹೆಸರು** | **ಇವನ್ನು ಬೆಳೆಸಿಕೊಳ್ಳುವ ವಿವಿಧ ಕಲಾವಿದರು** |
|---|---|
| ೧. ಬಸವಕುಮಾರ–ಲೋಹಿತಕುಮಾರ | ಕರಪಾಲದವರು, ಡೊಂಬಿದಾಸರು, ಕಿನ್ನರಿ ಜೋಗಿಗಳು, ಗೊಂದಲಿಗರು, ಚೌಡಕೆಯವರು, |
| ೨. ಅರಣ್ಯಕುಮಾರ | ಕರಪಾಲದವರು, ಗೊಂದಲಿಗರು, ಕಿನ್ನರಿ ಜೋಗಿಗಳು |
| ೩. ಶೀಲಾವತಿ | ಕರಪಾಲದವರು, ಗೊಂದಲಿಗರು, ಚೌಡಿಕೆಯವರು, ಕಿನ್ನರಿ ಜೋಗಿಗಳು |
| ೪. ಕುಮಾರರಾಮ | ನೀಲಗಾರರು, ಕಂಸಾಳೆ, ಗೊಂದಲಿಗರು. |
| ೫. ವೀರಪರಾಕ್ರಮ | ಗೊಂದಲಿಗರು, ಕಿನ್ನರಿ ಜೋಗಿಗಳು |

| | |
|---|---|
| ೬. ವಿಘ್ನಾವತಿ | ಗೊಂದಲಿಗರು, ಕಿನ್ನರಿ ಜೋಗಿಗಳು |
| ೭. ಸತಿ ಶಿವಲೋಚನಾ | ಗೊಂದಲಿಗರು, ಕಿನ್ನರಿ ಜೋಗಿಗಳು |
| ೮. ಲಕ್ಷಾಪತಿರಾಜ | ಗೊಂದಲಿಗರು, ಕಿನ್ನರಿ ಜೋಗಿಗಳು |
| ೯. ಸೋಮಶೇಖರ–ಚಿತ್ರಶೇಖರ | ಗೊಂದಲಿಗರು, ಕಿನ್ನರಿ ಜೋಗಿಗಳು |
| ೧೦. ಯಲ್ಲಮ್ಮ ರೇಣುಕೆಯ ಕಥೆ | ಚೌಡಿಕೆಯವರು, ಗೊಂದಲಿಗರು |
| ೧೧. ಬಾಳಭಿಕ್ಷುಕ | ಕರಪಾಲದವರು, ಕಿನ್ನರ ಜೋಗಿಗಳು<br>ಗೊಂದಲಿಗರು |

ಮೇಲ್ಕಾಣಿಸಿದ ವೃತ್ತಿಕಥನಕಾರರ ಹಲವು ಕಥಾವಸ್ತುಗಳು ಘಟನೆ, ನಿರೂಪಣೆಗಳಲ್ಲಿ ಅಲ್ಲಲ್ಲಿ ಅಷ್ಟಿಷ್ಟು ವ್ಯತ್ಯಯಗೊಂಡು ಅನ್ಯ ಹೆಸರುಗಳಿಂದ ಪ್ರಚಾರದಲ್ಲಿರುವುದನ್ನೂ ನಾವು ಕಾಣಬಹುದು.

ಉದಾಹರಣೆಗೆ :

| | | |
|---|---|---|
| ಬಾಳಭಿಕ್ಷುಕ | – | ಬಾಣಾವತಿ |
| ಜಯರಾಣಿ | – | ಬಾಲನಾಗಮ್ಮ |
| ಬಾಳಾವತಿ | – | ಚಂದ್ರಹಾಸ |
| ಶೀಲಾವತಿ | – | ದಾಳಿಂಬರಾಣಿ |

ಎಂದೂ ಕರೆಯಲ್ಪಟ್ಟಿದೆ.

ಇಲ್ಲಿ ಇನ್ನೊಂದು ಅಂಶ ಉಲ್ಲೇಖನೀಯವಾಗಿದೆ. ನಮ್ಮ ನಾಡಿನ ಆದಿವಾಸಿಗಳ ಸಮುದಾಯಕ್ಕೆ ಗೊಂಡರೂ ಸೇರುತ್ತಾರೆ. ಇವರು ಮಧ್ಯ ಭಾರತದ ಗೊಂಡರ ಮೂಲ ಸಮುದಾಯದವರೆಂದು ಡಾ. ಜೀಶಂಪ ಹೇಳಿದ್ದಾರೆ. ಅರಣ್ಯದಲ್ಲಿ ಗುಂಪುಗೂಡಿ ನೆಲೆ ನಿಂತಿರುವ ಈ ಜನಾಂಗಕ್ಕೆ ಸೇರಿದ ಸದ್ಧನ ಮನೆ ಪರಮೇಶ್ವರಿ ಎಂಬ ಮಹಿಳೆ ಬಾಳಭಿಕ್ಷುಕ ರಾಜನ ಕತೆಯನ್ನು ಗದ್ಯಕತೆಯಾಗಿ ಹೇಳಿದರೆಂದು ನಮ್ಮ ಸುಪ್ರಸಿದ್ಧ ಜಾನಪದ ಸಾಹಿತ್ಯಜ್ಞರಲ್ಲೊಬ್ಬರಾದ ಶ್ರೀ. ಎಲ್.ಆರ್.ಹೆಗಡೆ ದಾಖಲಿಸಿದ್ದಾರೆ.

**ನಗೆಗಾರಿಕೆ – ಉಪಕತೆ**

ಗೊಂದಲಿಗರ ಆಟದಲ್ಲಿ ಕತೆಗೆ ಹೊಂದಿಕೊಂಡ ಹಾಸ್ಯವೂ ಇಲ್ಲದಿಲ್ಲ. ಹಲವು ಆಟಗಳಲ್ಲಿ ಪಾತ್ರಗಳ ವರ್ತನೆ, ನಗೆಗೆ ಕಾರಣವಾಗುತ್ತದೆಂಬುದಕ್ಕೆ ಅಡವಿ ಸಿಪಾಯಿ, ಕಳ್ಳರು ಉದಾಹರಣೆ. ತಮ್ಮ ನೋಡುಗರನ್ನು ನಗಿಸುವ ಸಂದರ್ಭಗಳನ್ನು ಅವು ವ್ಯರ್ಥಗೊಳಿಸಿಕೊಳ್ಳುವುದಿಲ್ಲ. ಅಶ್ಲೀಲತೆಗೆ ಅವಕಾಶ ಕೊಡುವುದಿಲ್ಲ. ಒಮ್ಮೊಮ್ಮೆ ದುಷ್ಟಪಾತ್ರಗಳ ದುರವಸ್ಥೆಯ ದೃಶ್ಯಗಳೇ ನೆಗೆಯುಕ್ಕಿಸುತ್ತವೆ. ಹೆಚ್ಚು ನಗಬೇಕೆನ್ನುವವರಿಗಾಗಿ ಅಡ್ಡ ಕತೆಗಳಿವು. ಅವು ಹೊಟ್ಟೆ ಹುಣ್ಣಾಗುವಷ್ಟು ನಗಿಸುವುದರ ಜೊತೆಗೆ ಒಂದಲ್ಲ ಒಂದು ವಿಧದ ಸಂದೇಶವನ್ನೂ ಸಾರುತ್ತವೆ.

ಗೊಂದಲಿಗರು ತಮ್ಮ ಸುದೀರ್ಘ ಆಟಗಳಲ್ಲಿ ತತ್ವಪದ, ಲಾವಣಿಗಳಲ್ಲದೆ ಉಪಕತೆಗಳನ್ನು ಬಳಸಿಕೊಳ್ಳುತ್ತಾರೆ. ಒಂದು ಆಟದಲ್ಲಿ ನಾಲ್ಕೈದು ಹಾಡುಗಳೂ, ಮೂರು ನಾಲ್ಕು ಉಪಕತೆಗಳೂ

ಇರುತ್ತವೆ. ಮೂಲಕತೆಗೆ ಸಂಬಂಧವಿಲ್ಲದ ಆ ಬಿಡಿಕತೆಗಳನ್ನು ಅಡ್ಡಕತೆಗಳೆಂದೂ ಕರೆಯುತ್ತಾರೆ. ಇವುಗಳನ್ನು ಬಳಸುವ ಉದ್ದೇಶ ಆಟದ ಏಕಮುಖ ಗಾಂಭೀರ್ಯವನ್ನು ಮುರಿಯಲೆಂದು. ಕೇವಲ ವೀರ, ರೌದ್ರ, ಕರುಣ ರಸಗಳಲ್ಲೇ ಮುಳುಗಿದ ತನ್ನ ಪ್ರೇಕ್ಷಕರ ಮನೋಭೂಮಿಕೆಗೆ ಹಾಸ್ಯರಸದಿಂದ ರಂಜಿಸಲೆಂದು. ಆದರೆ ಈ ಕತೆಗಳ ಗುರಿ ಕೇವಲ ಮನೋರಂಜನೆ ಮಾತ್ರವಲ್ಲ ಅವುಗಳ ನೆಗೆ ಲೇಪನದಲ್ಲಿ ಗಾಂಭೀರಾರ್ಥಗಳೂ ಇರುತ್ತವೆ.

ಮೂಲ ಆಟದ ಘಟನೆಗಳಲ್ಲಿ ಹೊಸತನ, ಸಮಕಾಲೀನತೆಗಳನ್ನು ತುಂಬಲೆಡೆ ಕಲ್ಪಿಸಿಕೊಳ್ಳಲಾದ ಸೃಜನಶೀಲ ಗೊಂದಲಿಗರು ತಮ್ಮ ಉಪಕತೆಗಳನ್ನು ಕಾಲಕಾಲಕ್ಕೆ ಹೇಗೆ ತತ್ಕಾಲೀನಗೊಳಿಸುತ್ತಾರೆಂಬುದಕ್ಕೆ ಜಗಳಗಂಟ ಜಕ್ಕವ್ವನ ಕತೆಗಳಲ್ಲಿ ಬಾವಿಯ ಬದಲು ಬೋರ್‌ವೆಲ್ ಬಳಸಿಕೊಂಡಿರುವುದೊಂದು ಉದಾಹರಣೆ. 'ಜಗಳಗಂಟಿ ಜಕ್ಕವ್ವ' ಆತ್ಮ ವಿಸ್ಮೃತೆಯನ್ನು ಧ್ವನಿಸುವ ಅಡ್ಡ ಕತೆ. ಸ್ವಸ್ವರೂಪ ಜ್ಞಾನದ ಅಗತ್ಯವನ್ನು ತಿಳಿಸುವ ಮಾರ್ಮಿಕತೆಯೂ ಇದರಲ್ಲಿದೆ.

ಔದಾರ್ಯವನ್ನು ತೋರಿದ ಅಂಬಾದೇವಿಗೇ ಮೋಸಮಾಡಹೋಗಿ ಅವನಿಗೊದಗಿದ ದುರವಸ್ಥೆ ನೆಗೆಯೊಂದಿಗೆ ಮರುಕ ಹುಟ್ಟಿಸುತ್ತದೆ. ದೇವರುಕೊಟ್ಟು ನೋಡುವವನು, ಕಸಿದುಕೊಂಡೂ ನೋಡುವೆನೆಂಬುದಕ್ಕೆ ಉತ್ಕೃಷ್ಟ ದೃಷ್ಟಾಂತದಕತೆ ಇದು. ಅಪ್ರತ್ಯಕ್ಷವಾಗಿ ತಮ್ಮ ಅಂಬಾಭವಾನಿಯ ಮಹಿಮೆಯನ್ನು ಸಾರುವ ಧಾರ್ಮಿಕ ಕತೆಯೂ ಹೌದು.

ಕತೆಗಳು ಮುಕ್ತಾಯದಲ್ಲಿ ನೀತಿಯ ತಾತ್ಪರ್ಯ ಹೇಳಿ ಆಟದ ಪರಿಸರಕ್ಕೆ ಹೊಂದಿಕೊಳ್ಳುತ್ತವೆ. ಹೀಗೆ ಅಡ್ಡ ಕತೆಗಳಿಗೆ ತಮ್ಮದೇ ಅಸ್ತಿತ್ವವಿದ್ದರೂ ತಮ್ಮ ಮಹತ್ವದೊಂದಿಗೆ ಮೂಲಕತೆಗಳ ಸಂದೇಶಕ್ಕೆ ತಮ್ಮ ದನಿಯನ್ನೂ ಹೊಂದಿಸಿಕೊಳ್ಳುತ್ತಿರುವ ಮೂಲಕ ಬಾಂಧವ್ಯ ಕುದುರಿಸಿಕೊಳ್ಳುತ್ತವೆ.

**ಹಲವು ರೂಢಿಗಳು-ನಂಬುಗೆಗಳು-ಆಚರಣೆಗಳು-ಆಶಯಗಳು**

ಜನಪದ ಪ್ರಪಂಚದಲ್ಲಿ ಗಂಡು ಹೆಣ್ಣುಗಳೇ ಮೂಲಭೂತ ಘಟಕಗಳು. ಅವರಿಬ್ಬರ ನಿರ್ದಿಷ್ಟ ಜೀವನ ಕ್ರಮದಲ್ಲಿ ಒಂದು ಸಮುದಾಯದ ನಂಬುಗೆಗಳು, ಸಾಮಾಜಿಕ ಆಚರಣೆಗಳು, ನಿಗದಿತ ಜೀವನ ಪದ್ಧತಿಗಳು, ಭೌತಿಕ, ಸಾಂಸ್ಕೃತಿಕ ಸಂಪ್ರದಾಯಗಳು, ಆಲೋಚನಾ ಕ್ರಮಗಳು, ನಂಬುಗೆಗಳು ಇಂಬುಗೊಂಡಿರುತ್ತವೆ. ಇವೆಲ್ಲವೂ ಗೊಂದಲಿಗರ ಆಟಗಳಲ್ಲಿವೆಯೆಂಬುದಕ್ಕೆ ಹಲವನ್ನು ಮಾದರಿಗಾಗಿ ಈ ಕೆಳಗೆ ಕಾಣಿಸಲಾಗಿದೆ.

- ರಾಜ ಮುಂದಿಟ್ಟ ಕಾಲು ಹಿಂದಿಟ್ಟರೆ ಅಪಶಕುನ.
- ಕ್ಷತ್ರಿಯ ವಂಶದ ಮಗ ಸೂಳೆಯ ಮನೆಯಲ್ಲಿರಬಾರದು.
- ಮಕ್ಕಳ ಸಂತಾನವಿಲ್ಲದಿದ್ದರೆ ದೇವರಲ್ಲಿ ಬೇಡಿಕೊಳ್ಳಬೇಕು.
- ಗತದ ಅವಧಿಯಲ್ಲಿ ಶುಭಕಾರ್ಯ ಮಾಡಬಾರದು.

- ಸತಿ–ಪತಿ ಸಂಪೂರ್ಣಾಂಗರಾಗಿರಬೇಕು. ಇಲ್ಲವಾದರೆ ಅವರು ಮಂಗಳ ಕಾರ್ಯಗಳಿಗೆ ನಿಷಿದ್ಧರು.
- ಋತುವಾದ ಕುಮಾರಿಯರು ಮನೆಯಲ್ಲಿದ್ದರೆ ನಡುಮನೆಯ ಕಂಬ ಸುಟ್ಟಂತೆ.
- ರಾಜರು ಶೂರತನ ತೋರಿಯೇ ರಾಜ್ಯ ಮತ್ತು ಕನ್ಯೆಯರನ್ನು ಪಡೆಯತಕ್ಕದ್ದು.
- ಬ್ರಾಹ್ಮಣ ಕನ್ಯೆಯರು ಮದುವೆಗೆ ಮುನ್ನ ಋತುವಾದರೆ ಕಾಡುಪಾಲು ಮಾಡತಕ್ಕದ್ದು.
- ಅರಸು ಬಹುಪತ್ನೀವಲ್ಲಭ.
- ಸ್ತ್ರೀ ಹೊನ್ನು–ಮಣ್ಣುಗಳಂತೆ ಒಂದು ಸೊತ್ತು.
- ಬೇಡಾದ ಅರಸನ ಪತ್ನಿ ಬೇಕಾದವಳೆನ್ನಿಸಲು ತುಂಬಾ ಯಾತನೆಪಡಬೇಕು.
- ಶಿವಲೋಚನಾಳಂಥ ಪತಿವ್ರತೆಯರ ಸಮಾಧಿಗೆ ಭಕ್ತಿಯಿಂದ ಪ್ರದಕ್ಷಿಣೆ ಹಾಕಿದರೆ ಜನ–ದನಗಳ ರೋಗ ರುಜಿನಗಳು ಇಲ್ಲವಾಗುತ್ತವೆ.
- ಮದುವೆಯ ಕಾಲದಲ್ಲಿ ಅರಸುಕುಮಾರನ ಗೈರುಹಾಜರಿ ಅನಿವಾರ್ಯವಾದರೆ ಆತನ ರುಮಾಲು, ಕತ್ತಿ–ಕಠಾರಿಗಳನ್ನೇ ವರನ ಸ್ಥಾನದಲ್ಲಿರಿಸಿ ಮಾಂಗಲ್ಯ ಧಾರಣೆ ಮಾಡಿಸುತ್ತಾರೆ.

**ಆಟದ ವೈಶಿಷ್ಟ್ಯ :**

ಗೊಂದಲಿಗರ ಆಟದ ಹರವು, ಕಥಾವಸ್ತು, ಕಲ್ಪನಾವೈವಿಧ್ಯ, ನಿರೂಪಣಾವಿಧಾನ, ಸಂಭಾಷಣಾ ಚಾತುರ್ಯಗಳು ಅದರ ಅನನ್ಯ ಸ್ವಾಯತ್ತತೆಯನ್ನು ಗುಣಾತ್ಮಕವಾಗಿ ಹೇಳುತ್ತವೆ. ಕಥಾವಸ್ತುವಿಗೆ ಬೆಳೆವ ಸಹಜ ಸಾಮರ್ಥ್ಯವಿದೆ. ತನ್ನದೇ ಆದ ಬಂಧದಿಂದ ಸಂವಹನಿಸುವ ದೃಷ್ಟಿಕೋನವನ್ನೂ, ಅಂತರಿಕ ಲಯವನ್ನು ಹೊಂದಿದೆ. ವಾಸ್ತವಿಕತೆ–ಅವಾಸ್ತವಿಕತೆಗಳ ನೇಯ್ಗೆಯೂ ವಿನ್ಯಾಸಮಯ.

ಗೊಂದಲಿಗರ ಆಟವೊಂದು ಸಾಮಾಜಿಕ ಕ್ರಿಯೆ. ಅದರ ಪ್ರಸ್ತುತಿ ಒಂದು ಸಾಮೂಹಿಕ ಅನುಭವ. ಅದಕ್ಕೆ ಸಾಮಾಜಿಕ, ನೈತಿಕ ಹೊಣೆಯಿದೆ. ತನ್ನ ಜನ ಸಮಾಜದ ಚಿತ್ರಣದಲ್ಲಿ ಅಶ್ಲೀಲತೆಯನ್ನಾಗಲೀ, ನೀಚತನವನ್ನಾಗಲೀ ಎತ್ತಿಹಿಡಿದ ಪಾಪಬುದ್ಧಿ ಅದಕ್ಕಿಲ್ಲ. ಪ್ರಾಮಾಣಿಕ ಸದ್ಭಾವನೆ ಅದರ ಸ್ವಭಾವ.

ಕಥಾವಸ್ತುವೇ ಆಟದ ಆತ್ಮ. ಒಂದು ಗೊತ್ತಾದ ರೀತಿಯಲ್ಲಿ ಸೂತ್ರಬದ್ಧವಾಗಿ ಕಥೆ ಆರಂಭಗೊಳ್ಳುತ್ತದೆ. ಅದರ ದೃಶ್ಯೀಕರಣ ಪಾತ್ರಾಭಿನಯಗಳಾಗಲೀ, ಕಥಾ ನಿರೂಪಣೆಯಾಗಲೀ ಎಲ್ಲೆಂದರಲ್ಲಿ ಬರುವುದಿಲ್ಲ. ಅನುಕ್ರಮದ ಶಿಸ್ತು ಅದಕ್ಕಿದೆ. ಕಥಾ ದೃಶ್ಯದ ಪ್ರತಿಘಟಕದಲ್ಲೂ ಆಶಯದ ಅಂಶಗಳು ತುಂಬಿಕೊಂಡಿರುತ್ತವೆ. ಈ ಅಂಶಗಳು ಸರಳವಾಗಿದ್ದರೂ ನಂಬುಗೆ, ಆಚರಣೆ, ಕಲ್ಪನೆ ಮುಂತಾದ ಅದ್ಭುತ ವಿಶೇಷಗಳ ಹಿನ್ನೆಲೆಯಲ್ಲಿ ಅಸಾಮಾನ್ಯವೆನ್ನಿಸುತ್ತವೆ.

ಗೊಂದಲಿಗರ ಆಟಗಳ ಕಥಾವಸ್ತುಗಳು ರಾಜ–ರಾಣಿಯವಾದರೂ, ಅವನ್ನು ಕಟ್ಟಿದವರು, ಆಡುವವರು, ನೋಡುವವರು ಸಾಮಾನ್ಯ ಜನಪದರೇ. ಅವರ ಆ ಆಟಗಳಲ್ಲಿ ಬೇಟೆಗಳು, ವಿಶ್ವಾಸ

ಘಾತುಕತನಗಳು, ಅನಿಮಿತ್ತವೈರ, ಸ್ವಾರ್ಥಲಾಲಸೆ, ಅಮಾನುಷತೆ, ಯುದ್ಧ, ಕೊಲೆ, ಸುಲಿಗೆ, ಅಧಿಕಾರದಾಹ, ಪ್ರಣಯ ಪ್ರಸಂಗ, ಕರ್ತವ್ಯ ಪರಾಯಣತೆ, ಜೀವಕಾರುಣ್ಯ, ಚಿತ್ತಸಮಾಧಾನ, ದೈವೀ ನಿಷ್ಠೆ, ಸಾಮಾಜಿಕತೆ, ಮಾನವ ಧರ್ಮಾನುಸಂಧಾನ ಇತ್ಯಾದಿಗಳೆಲ್ಲವುಗಳನ್ನೂ ಮನಗಾಣಿಸುವ ಗಟ್ಟಿಯಾದ ಘಟನಾ ದೃಶ್ಯಗಳ ನಿಭಿಡತೆ ಇದೆ.

ಒಂದು ಕಾಲಕ್ಕೆ ಕರಾವಳಿಯ ಪಾಡ್ದನಗಳಂತೆ ನಿರ್ದಿಷ್ಟ ಪಂಗಡಗಳ ಆರಾಧನೆಯ ಮಾಧ್ಯಮವಾಗಿ ಮೈದೆಳೆದ ಧಾರ್ಮಿಕ ಕಲೆಗಳಲ್ಲಿ ಗೊಂದಲವೂ ಒಂದೆಂಬುದು ನಿಜ. ಆದರೆ ಕಾಲ ಕ್ರಮೇಣ ಬದಲಾದ ಪರಿಸ್ಥಿತಿಯಲ್ಲಿ ಜೀವನಯಾಪನೆಗಾಗಿ ಅನ್ಯಕಥಾವಸ್ತು ಮತ್ತು ಪ್ರಸ್ತುತಿಯ ತಂತ್ರಗಳಿಂದ ಗೊಂದಲಿಗರು ತಮ್ಮ ಆಟಗಳಿಗೆ ರಂಜನೀಯ ರೋಚಕ ರೂಪ ಕೊಟ್ಟುಕೊಂಡು ಸರ್ವಜನಾದರಣೀಯ ಕಲೆಯನ್ನಾಗಿಸಿಕೊಂಡಿದ್ದಾರೆ.

ನಮ್ಮ ಎಲ್ಲಾ ಭಾಷೆಯ ಸಂತರೂ, ಅನುಭಾವಿಗಳೂ ಸಾಮಾನ್ಯರನ್ನೇ ಕುರಿತು ಹೇಳುತ್ತಾ ಬಂದಿರುವುದುಂಟು. ಈ ಉದ್ದೇಶದಿಂದಲೇ ಅವರ ಹೇಳಿಕೆಯ ಭಾಷೆ ಸಂವಾದಾತ್ಮಕವಾಗಿಯೂ, ತುಂಬಾ ಪಾರದರ್ಶಕವಾಗಿಯೂ ಇರುತ್ತದೆ. ಅವರ ಭಾಷಾಶೈಲಿ ನೇರವಾಗಿ ಹೃದಯಾನುಭವಕ್ಕೆ, ಅರ್ಥಗ್ರಹಿಕೆಗೆ ಒದಗುತ್ತದೆ. ಗೊಂದಲಿಗರು ಕೂಡಾ ಇದೇ ರೀತಿಯ ಸರಳ ಜನ, ಸಂಭಾಷಣಾ ಶೈಲಿಯನ್ನು ಬಳಸಿಕೊಳ್ಳುತ್ತಾ ಬಂದಿದ್ದಾರೆ. ಯಾರ ಮಧ್ಯದಲ್ಲಿದ್ದುಕೊಂಡು ಯಾರಿಗಾಗಿ ತಮ್ಮ ಕಲೆ ಮೈವೆತ್ತಿದೆಯೋ ಅವರಿಗೆ ಅದು ತಲುಪಲೆಂಬ ಸಹಜ ವಿವೇಕ ದೃಷ್ಟಿ ಅವರದು.

ಗೊಂದಲಿಗರು ಕಂಡುಕೊಂಡಿರುವ ಅವರದೇ ಆದ ಈ ರಂಗಭಾಷೆಗೆ ಜನಪದರ ಬದುಕಿನ ಸುಖ ದುಃಖಗಳನ್ನು ಕಲ್ಪಿತ ಪಾತ್ರಗಳ ಮೂಲಕ ವೈಭವೀಕರಿಸಿ ಚಿತ್ರಿಸುವ ಚೈತನ್ಯವಿದೆ. ಕಥಾ ಪಾತ್ರಗಳಲ್ಲಿರುವ ಅರಸನಿಂದ ಆಳಿನವರೆಗೆ ಎಲ್ಲರಗೂ ಜಾನಪದ ದೀಕ್ಷೆ ನೀಡಿರುವುರಿಂದ ಭಾಷೆಯಲ್ಲಿ ಏಕರೂಪದ ಕ್ರಿಯಾತ್ಮಕತೆ ಇದೆ. ಸಂಸ್ಕೃತದ ತೂಕವನ್ನು, ಕಾಯ್ದುಕೊಳ್ಳಲಿಕ್ಕಾಗಿ ಪಾಂಡಿತ್ಯವನ್ನು ತಡಕಾಡಬೇಕಾದ ಹಂಗಾಗಲೀ, ಆಧ್ಯಾತ್ಮಿಕ ಪರಿಭಾಷೆಯ ಬಂಧನವಾಗಲೀ ಇಲ್ಲದ ಅಚ್ಚ ದೇಸಿತನ ಗೊಂದಲಿಗರದು.

ಗೊಂದಲಿಗರ ಆಟಗಳ ವೈಶಿಷ್ಟ್ಯಗಳಲ್ಲಿ ಇನ್ನೂ ಹಲವನ್ನು ಈ ಕೆಳಕಂಡಂತೆ ಗುರುತಿಸಬಹುದು.

- ಗೊಂದಲಿಗರ ಆಟ ಸಂಪೂರ್ಣ ಜಾನಪದ ಆವರಣದಲ್ಲಿ ನಡೆವ ಒಂದು ಕಥಾ ನಾಟಕ.
- ಮೂಲ ಕಥಾವಸ್ತುವಿನ ಆಕೃತಿ ನಿರ್ದಿಷ್ಟ ಉದ್ದೇಶವನ್ನು ಅನುಭವಕ್ಕೆ ತರುವ ರೀತಿಯ ಸಂರಚನೆಯಾಗಿರುತ್ತದೆ.
- ಆಟವು ಪ್ರಜೆಗಳೆರೆಲ್ಲರ ಕ್ಷೇಮ ಚಿಂತನೆಯಲ್ಲಿ ಅರಸನಿಗಿರುವ ಕರ್ತವ್ಯಾಸಕ್ತಿಯನ್ನು ಪರಿಚಯ ಮಾಡಿಕೊಡುತ್ತಾ ಕಥಾ ಪೀಠಿಕೆಯಾಗಿ ವರ್ತಿಸುತ್ತದೆ.
- ಅದು ನಡೆದು ಹೋದ ಘಟನೆಯೊಂದನ್ನು ವರ್ತಮಾನದಲ್ಲಿ ಅಭಿನಯಿಸುವ ರೀತಿಯದು.

- ಆಟವು ಲಿಖಿತ ಸ್ವರೂಪದ್ದಾಗಿರದೆ ಸಮಯ ಸ್ಫೂರ್ತಿಯ ರಂಗರೂಪವಾಗಿರುತ್ತದೆ. ಸಂಭಾಷಣೆ ಸೃಷ್ಟ್ಯಾತ್ಮಕ ಸ್ವರೂಪದ್ದು.
- ಆಟ ಜನಸಾಮಾನ್ಯರ ಆಶಯ ಕಲ್ಪನೆ, ಒಲವು, ಪ್ರವೃತ್ತಿ, ಹಂಬಲ, ಜೀವನಶ್ರದ್ಧೆ ಹಾಗೂ ಸ್ವಭಾವ ವೈವಿಧ್ಯಗಳನ್ನು ಮೇಳೈಸಿಕೊಂಡಿರುತ್ತದೆ. ತನ್ನ ಸಾಮಾಜಿಕ ವ್ಯವಸ್ಥೆಯ ಒಳನೋಟಗಳನ್ನೂ ಸಾಂಸ್ಕೃತಿಕ ಬದುಕನ್ನೂ ನಿರೂಪಿಸುತ್ತದೆ.
- ನಮ್ಮ ಯಕ್ಷಗಾನ ಮತ್ತು ಮೂಡಲಪಾಯದ ಬಯಲಾಟಗಳಂತೆ ಈ ಆಟದಲ್ಲೂ ಕಾಳಗ ಹೋರಾಟಗಳೇ ಹೆಚ್ಚು, ಸಂಘರ್ಷವೇ ಇದರ ಕಥಾಬೀಜ.
- ಆಟ ಹೋಲಿಕೆಯಲ್ಲಿ ಕಿನ್ನರಿ ಜೋಗಿಗಳ ಆಟಕ್ಕಿಂತ ನಿರ್ವಹಣೆ, ಸಂಭಾಷಣೆ, ಭಾಷಾಶೈಲಿ, ಅಭಿನಯ ತಂತ್ರಗಳಲ್ಲಿ ಸುಧಾರಿಸಿದ್ದೆನ್ನಬೇಕು. ಮೇಲ್ವರ್ಗದವರೊಂದಿಗಿನ ಗೊಂದಲಾರಾಧನೆಯ ಪರಂಪರಾಗತ ಸಂಬಂಧ ಇದಕ್ಕೆ ಕಾರಣವಿರಬೇಕು.
- ಕಥಾವಸ್ತುಗಳಲ್ಲಿ ಕಾಲದೇಶಗಳನ್ನು ಮೀರಿದ ವಿಶ್ವಸತ್ಯವನ್ನು ಮನವರಿಕೆ ಮಾಡಿಕೊಡುವ ಗುಣವಿರುತ್ತದೆ.
- ಗಂಡು-ಹೆಣ್ಣು, ಗಂಡು-ಗಂಡು, ಹೆಣ್ಣು-ಹೆಣ್ಣು ಪಾತ್ರಗಳ ಮಧ್ಯೆಯ ಅಂತರಿಕ ಕ್ರಿಯೆ ಹಾಗೂ ಸಂಘರ್ಷಗಳೇ ಆಟದ ಕಥಾ ವಸ್ತುಗಳು.
- ಬದುಕಿನ ಗೊತ್ತು ಗುರಿಗಳನ್ನು ನಿರ್ದೇಶಿಸುವುದರೊಂದಿಗೆ ಸಾರಾಸಾರಾ ವಿವೇಚನೆಗೆ ಆಟ ಪ್ರಚೋದನೆ ನೀಡುತ್ತದೆ.
- ಅಕ್ಷರ ಕಲಿತವರಿಗೆ ಜಾನಪದವೆನ್ನಿಸಿದಂತೆ ಆಟ ಆಡುವ ಗೊಂದಲಿಗರಿಗೂ ಅದನ್ನು ನೋಡುವ ಜಾನಪದ ಪ್ರಾಯೋಜಕರಿಗೂ ಅನ್ನಿಸುವುದಿಲ್ಲ.
- ಉಚ್ಚಾರದಲ್ಲಿ ವಾಗ್ದೋಷಗಳಿರುವಂಥವೇ, ಭಾವಾವೇಶದ ಸುಸಂಗತಿ ಇರುವುದರಿಂದ ಆಟ ಆಡುವವರೂ ನೋಡುವವರೂ ಸಮಾನ ಭಾಷೋಚ್ಚಾರ ಸ್ವಭಾವಿಗಳಾದ್ದರಿಂದ ಅವು ಕಿವಿಗೆ ಕರ್ಕಶವೆನ್ನಿಸುವುದಿಲ್ಲ.
- ಆಟದ ಪದಗಳಲ್ಲಿ ಬಂದದ್ದೇ ಹಾಡುಗಳಲ್ಲಿ ಪುನರಪಿಗೊಳ್ಳುತ್ತದೆ. ಬಹುಪಾಲು ಜಾನಪದ ರಂಗಕಲೆಗಳಲ್ಲಿರುವ ಈ ರೂಢಿ ನೋಡುಗರ ಕಿವಿಗೆ ಅಳವಟ್ಟಿರುವುದಾದ್ದರಿಂದ ಬೇಸರವೆನ್ನಿಸುವುದಿಲ್ಲ. ವಾಕ್ಯ ರಚನೆಯಲ್ಲಿ ಸ್ಥಾನಪಲ್ಲಟವಿರುವುದೂ ಉಂಟು.
- ತೊಗಲು ಗೊಂಬೆಯಾಟದಂತೆ ಗೊಂದಲಿಗರ ಆಟಗಳನ್ನೂ ಮಳೆರಾಯನ ಕೃಪೆಗಾಗಿ ಕೆಳವರ್ಗದವರು ಆಡಿಸುವ ರೂಢಿಯಿದೆ.
- ದೊಡ್ಡಕತೆ ತುಂಡಾಗುವುದು ಮತ್ತು ಅನ್ಯಕತೆ ಒಳಗೊಳ್ಳುವುದೂ ಇದೆ.

- ಕುಲಗೋತ್ರ ಧಾರ್ಮಿಕ ಚೌಕಟ್ಟುಗಳನ್ನು ದಾಟಿ ಲೌಕಿಕ ಆವರಣದಲ್ಲೇ ಆಟ ಮೆರೆಯುತ್ತದೆ. ಅದರಲ್ಲಿ ಬರುವ ಮದುವೆ ಪ್ರಸಂಗ ಇಡೀ ಕಥನಕ್ಕೆ ಚಾಲನೆ ಕೊಡುತ್ತದೆ.
- ಕಥಾವಸ್ತುಗಳಲ್ಲಿ ಪರಂಪರಾಗತ ನಂಬುಗೆಗಳು, ಸಂಪ್ರದಾಯಗಳು, ಶಕುನಶಾಸ್ತ್ರ, ಬಾಲ್ಯವಿವಾಹ, ಬಹುಪತ್ನೀತ್ವ, ಸ್ತ್ರೀ ಶೋಷಣೆ, ವೇಶ್ಯಾ ಪದ್ಧತಿ, ರಾಜ್ಯಕ್ಕೆ ಸಂಬಂಧಿಸಿದ ಶ್ರೇಣೀಕೃತ ವ್ಯವಸ್ಥೆ, ರಾಜ-ರಾಣಿ, ಮಂತ್ರಿ, ಸೈನ್ಯ ಹಾಗೂ ಪ್ರಜರ ನಿಗದಿತ ಕರ್ತವ್ಯಗಳ ವಿವರಗಳಿರುತ್ತವೆ.
- ಗೊಂದಲಿಗರ ಆಟದ ಪಾತ್ರಗಳಿಗೆ ಅನ್ಯಲೋಕದ ಆಶೆಯಿಲ್ಲ, ಮಧ್ಯಲೋಕದ ವರ್ತಮಾನದ ಬದುಕೇ ಅವರಿಗೆ ಮುಖ್ಯ. ಇನ್ನೂ ಹೆಚ್ಚಿನ ಸಂಗತಿಯೆಂದರೆ ದೇವಲೋಕ ಮತ್ತು ಪಾತಾಳಲೋಕದವರೇ ಮಣ್ಣಿನ ವಾಸನೆಯ ಬದುಕಿಗೆ ಮೋಹಗೊಂಡು ಅಲ್ಲಿಗೆ ಬರುತ್ತಾರೆ.
- ಆಟದ ತುಂಬಾ ಮಾನವ ಸಂಬಂಧಗಳಿಗೆ ತಡೆಯೊಡ್ಡುವ ಘಟನೆಗಳಿರುತ್ತವೆ. ಪುರಾಣಗಳಲ್ಲಿಯಂತೆ ದುಷ್ಟರ ಶಿಕ್ಷಣಕ್ಕೆ ಪರಮಾತ್ಮನೇನೂ ಅವತಾರವೆತ್ತಿಬರುವನು. ನೋವುಂಡ ವ್ಯಕ್ತಿಗಳೇ ಅಂಥವರಿಗೆ ಯಥೋಚಿತ ಶಿಕ್ಷೆ ಕೊಡುತ್ತಾರೆ. ಅವರು ಕ್ಷಮಿಸುವ ಪ್ರಸಂಗಗಳೂ ಉಂಟು.
- ಕಥಾನಾಯಕ ನಾಯಕಿಯರು ಪುರಾಣಗಳಲ್ಲಿಯಂತೆ ಸತ್ತು ಸ್ವರ್ಗ ಕಾಣುವ ಜರೂರಿಲ್ಲ. ಕರಾವಳಿ ಕರ್ನಾಟಕದ ಪಾಡ್ದನಗಳ ವ್ಯಕ್ತಿಗಳಂತೆ ಗೊಂದಲಿಗರ ಆಟಗಳ ವೀರರೂ, ವೀರವನಿತೆಯರೂ ಸುಡಿದೇ ಸಾಂಸ್ಕೃತಿಕ ವೀರಪದವಿ ಪಡೆವ ಪರಿಪಾಠವಿಲ್ಲ. ಅವರು ಎಲ್ಲ ವಿಧದ ಆಪತ್ತುಗಳನ್ನೂ ಎದೆಗೊಟ್ಟು ಎದುರಿಸಿ ಪ್ರಾಮಾಣಿಕ ಬದುಕು ಸಾಗಿಸುತ್ತಾರೆ.
- ಕೀರ್ತನ ಪರಂಪರೆಯಲ್ಲಿಯಂತೆ ಗೊಂದಲಿಗರ ಆಟದಲ್ಲೂ ತಾಳ ರಹಿತ ಗೀತಾತ್ಮಕ ವಾಕ್ಯಗಳಿವೆ.
- ಎಲ್ಲವೂ ಅರಸು ಮನೆತನದ ಕಥೆಗಳೇ, ಆದರೆ ಅವು ಜಾನಪದ ಬದುಕಿನಿಂದ ಮೈಪಡೆದ ವಿಶಿಷ್ಟ ಸೃಷ್ಟಿ.
- ಗೊಂದಲಿಗರು ತಾವು ನೆಲಸಿರುವ ಪರಿಸರದ ನಂಬಿಕೆ, ಆಚರಣೆಗಳನ್ನು ತಮ್ಮ ಕಥಾವಸ್ತುಗಳಿಗೆ ಅಳವಡಿಸಿಕೊಳ್ಳುತ್ತಾರೆ. ಸತಿ ಶಿವಲೋಚನಾಳ ಶವವನ್ನು ಕೈವಲ್ಯದಲ್ಲಿರಿಸಿಕೊಂಡು ಬಾಜಾ ಬಜಂತ್ರಿಯಿಂದ ಯಾತ್ರೆ ಹೊರಟಾಗ ಬೀದಿಗುಂಟ ಚರುಮುರಿಯನ್ನು ಸುರಿಸುತ್ತಾ ಹೋಗಲಾಗುತ್ತದೆ. ಇದು ಲಿಂಗಾಯತ ಶವ ಸಂಸ್ಕಾರ ವಿಧಿಯೆಂದು ಬೇರೆ ಹೇಳಬೇಕಾಗಿಲ್ಲ.
- ಆಟಗಳಿಗೆ ಕಾಲ ದೇಶಗಳ ಕಟ್ಟಿಲ್ಲ.
- ಗೊಂದಲ ಮತ್ತು ಆಟಗಳಲ್ಲಿ ಸ್ತ್ರೀಯರು ಪಾಲ್ಗೊಳ್ಳುವುದಿಲ್ಲ. ಹಳೆಯ ಬಟ್ಟೆಗಳನ್ನು ಪಡೆದು ಕೌದಿ ತಯಾರಿಸಿಕೊಟ್ಟು ಮಜೂರಿ ಪಡೆಯುವುದು ಅವರ ಕಾಯಕ.

**ಪ್ರೇಕ್ಷಕರು :**

ಗೋಂದಲೀ ಕಲಾವಿದರಿಗೂ, ಅವರ ಆಟದ ವಸ್ತುವಿಗೂ, ಪ್ರೇಕ್ಷಕರಿಗೂ ಪ್ರಯೋಗ ಕಾಲದಲ್ಲಿ ಒಂದು ವಿಧದ ಆಂತರಿಕ ಕ್ರಿಯಾ ನಿಕಟತೆ ಇರುತ್ತದೆ. ಆಟ ನಿರ್ಮಿಸಿಕೊಡುವ ಒಂದು ರೀತಿಯ ಜಾಗ್ರತ- ಮಾಯಾಲೋಕದಲ್ಲಿ ನೆರೆದ ಜನರು ಭ್ರಮಾಧೀನರಾಗಿರುತ್ತಾರೆ. ತಾವು ಕಣ್ಣಾಗಿಣುತ್ತಿರುವ ಕಥಾವಸ್ತುವಿನ ಆಚೆ ಏನನ್ನೂ ನಿರೀಕ್ಷಿಸಲೆಡೆ ಇಲ್ಲವಾಗಿ ಅದಕ್ಕೆ ಸಂಪೂರ್ಣಬದ್ಧರಾಗಿರುತ್ತಾರೆ. ಆಟವು ಅವರನ್ನು ತನ್ನ ಕಾಲ್ಪನಿಕ ವಲಯಕ್ಕೆ ಸೆಳೆದುಕೊಳ್ಳುತ್ತದೆ. ಹಾಗಾಗಿ ಅದು ಮುಗಿಯುವವರೆಗೆ ಪ್ರೇಕ್ಷಕರು ಬೆನ್ನುಬಿಡುವುದಿಲ್ಲ. ಉದಾತ್ತ ಪಾತ್ರಗಳೊಂದಿಗೆ ಒಂದಾಗಿ ನೊಂದು ನರಳುತ್ತಾರೆ. ಅವರನ್ನು ಎಷ್ಟೆಲ್ಲಾ ಕಾಡಿ, ಚಿತ್ರಹಿಂಸೆ ನೀಡಿದ ಧೂರ್ತರ ದಮನ ಕಂಡು ಹರ್ಷಗೊಳ್ಳುತ್ತಾರೆ. ಅಪೇಕ್ಷಿತ ರೀತಿಯಲ್ಲಿ ಸುಖಾಂತವಾಗುವ ರೀತಿ ಅವರಿಗೆ ಹೃದ್ಯವಾಗುತ್ತದೆ.

ಗೊಂದಲಿಗರ ಆಟಗಳಿಂದ ಜನಪದರು ಜೀವ ಮತ್ತು ಜಗತ್ತುಗಳನ್ನು ಗ್ರಹಿಸುವ ರೀತಿಯನ್ನು ಅರಿಯುತ್ತಾರೆ. ಲೋಕದೃಷ್ಟಿ ಹಾಗೂ ಸಾಮಾಜಿಕ ಶೀಲಸ್ವಭಾವದ ದರ್ಶನಮಾಡಿಕೊಳ್ಳುತ್ತಾರೆ. ಆಡುಗ–ನೋಡುಗರಿಬ್ಬರ ಹೃದಯ ಮತ್ತು ಮನಸ್ಸುಗಳು ಒಂದೇ ಸ್ತರದಲ್ಲಿ ಜಾನಪದೀಯವಾಗಿರುವುದರಿಂದ ಈ ಕ್ರಿಯೆ ನಿರಾತಂಕವಾಗಿ ನಡೆಯುತ್ತದೆ.

ಜನಪದ ರಂಗಕಲೆಗಳ ವೀಕ್ಷಣೆಯು ರೂಢಿಸಿಕೊಳ್ಳಬೇಕಾದ ಒಂದು ಸಾಧನಾ ವಿಶೇಷ. ನೋಡಿ, ಸವಿದು, ಸಾಮೂಹಿಕವಾಗಿ ಒಂದೆಡೆ ಸೇರಿ ಪ್ರತಿಕ್ರಿಯಿಸುವುದು ಒಂದು ಕಲೆ.

ಗೊಂದಲಿಗರ ಆಟಕ್ಕೆ ಸಲ್ಲುವ ಸಂಭಾವನೆ ಅದರ ನೋಡುಗರ ಆರ್ಥಿಕ ತಾಕತ್ತನ್ನು ಅನುಸರಿಸಿರುತ್ತದೆ. ಹಿಂದೊಂದು ಕಾಲದಲ್ಲಿ ಒಂದು ಆಟಕ್ಕೆ ನಾಲ್ಕು ರೂಪಾಯಿಗಳಿರುತ್ತಿತ್ತು. ಈಗ ನೂರಿನ್ನೂರಾಗಿದೆ. ಆಟ ಆಡಿಸುವ ಮುಂದಾಳುಗಳು ಓಣಿಯ ಜನಸಾಮಾನ್ಯರಿಂದ ಶಕ್ತ್ಯಾನುಸಾರ "ಹಂಚಿಗಿ" (ವಂತಿಗೆ) ಸಂಗ್ರಹಿಸುತ್ತಾರೆ. ಹತ್ತರ ಹಲ್ಲುಕಡ್ಡಿ ಒಬ್ಬನ ತಲೆಯ ಮೇಲೆ ಹೊರೆಯಾಗುವಂತೆ ಆ ಒಟ್ಟು ವಂತಿಗೆಯ ಮೊತ್ತ ಗೊಂದಲಿಗರ ಸಂಭಾವನೆಗೂ ಮಿಕ್ಕ ಖರ್ಚಿಗೂ ಸರಿಹೋಗುತ್ತದೆ.

**ಎಲ್ಲಮ್ಮನ ಗೊಂದಲಿಗರ ಸಂಪ್ರದಾಯ :**

**ಚೌಡಿಕೆ :** ಸಂಪ್ರದಾಯದಂತೆ ಎಲ್ಲಮ್ಮನ ಬಗ್ಗೆ ಗೊಂದಲಿಗರ ಸಂಪ್ರದಾಯವೊಂದಿದೆ. ಶ್ರೀ ಕ್ಯಾತನಹಳ್ಳಿ ರಾಮಣ್ಣನವರ 'ಗೊಂದಲಿಗರು: ಒಂದು ಅಧ್ಯಯನ' ಕೃತಿಯಲ್ಲಿ ಗೊಂದಲಿಗರು ಕಥೋಪಜೀವಿಗಳಾಗಿದ್ದು ಬದಲಾದ ಪರಿಸರದಲ್ಲಿ ಹಾಡುವುದನ್ನೇ ವೃತ್ತಿಯನ್ನಾಗಿ ಉಳಿಸಿಕೊಂಡು ಬದುಕುಳಿಯುವುದು ಕಷ್ಟಸಾಧ್ಯವಾಗಿರುವ ಸಂದರ್ಭದಲ್ಲಿ 'ಗೊಂದಲ'ದ ಕಲೆ ಮತ್ತು ಈ ಕಲಾವಿದರು ಕಣ್ಮರೆಯಾಗುತ್ತಿದ್ದಾರೆಂದು ವಿಷಾದವನ್ನು ವ್ಯಕ್ತಪಡಿಸಿದ್ದಾರೆ. ಶ್ರೀಯುತರು ಗೊಂದಲದ ಬಗ್ಗೆ ಹೇಳಿರುವ ಮಾತುಗಳು ಉಲ್ಲೇಖನಾರ್ಹ, ಎಣ್ಣೆಯ ಸತತ ಜಿಡ್ಡಿನಿಂದ ಕಪ್ಪಾದ ಉದ್ದನೆಯ ಲಂಗದಂಥ ಝುಗ ಧರಿಸಿ ಕವಡೆಯ ಸರಗಳಿಂದಲೂ ಕವಡೆಯ ಪಟ್ಟಗಳಿಂದಲೂ ಲೋಹದ ತಗಡಿನ ಉಬ್ಬು ಚಿತ್ರಗಳಾಗಿ

ಚಿತ್ರಿಸಿದ ದೇವತೆಗಳಿಂದಲೂ ಶೋಭಿಸುತ್ತಾ, ಬಟ್ಟೆ ಸುತ್ತಿ ಮಾಡಿದ ಉರಿಯುತ್ತಿರುವ ಪಂಜುಗಳನ್ನು ಎರಡೂ ಕೈಗಳಲ್ಲೂ ಹಿಡಿದು, ಅವನ್ನು ಎದೆಗೆ ಬಡಿದುಕೊಳ್ಳುತ್ತಾ, ದೇವಿಯೇ ಮೈದುಂಬಿದಳೋ ಏನೋ ಎನ್ನುವಂತೆ ಆವೇಶದಿಂದೊಡಗೂಡಿ ಸಂಬಾಳ ಚೌಡಿಕೆ ಪತ್ತುಗಳ ತೀವ್ರಗತಿಯ ಗತ್ತಿಗೆ ಗೆಜ್ಜೆಯ ಹೆಜ್ಜೆ ಹಾಕುತ್ತಾ ಪ್ರೇಕ್ಷಕರು ಮೈಮರೆಯುವಂತೆ ಕುಣಿಯುತ್ತಿದ್ದ ಆ ವೈಭವೋಪೇತ ಗೊಂದಲದ ದೃಶ್ಯ ಈಗ ಕೇವಲ ಕನಸು ಎಂದು ಉದ್ಗರಿಸುವುದು ಸಹಜವಾಗಿದೆ.

ಗೊಂದಲಿಗರು ಮರಾಠಿ ಮೂಲದವರು. ಉತ್ತರ ಕರ್ನಾಟಕದಲ್ಲಿ ವ್ಯಾಪಕವಾಗಿಯೂ ದಕ್ಷಿಣ ಕರ್ನಾಟಕದಲ್ಲಿ ವಿರಳವಾಗಿಯೂ ಕಾಣುವ ಗೊಂದಲಿಗರನ್ನು ಕನ್ನಡಿಗರೆಂದು ಪರಿಗಣಿಸುವ ವಾದವಿದ್ದರೂ ಸಹ ಇವರು ಮರಾಠಿಗಳೆಂಬ ಸತ್ಯವನ್ನು ಮರೆಮಾಚುವುದಕ್ಕೆ ಸಾಧ್ಯವಿಲ್ಲವೆಂಬುದನ್ನು ಕ್ಯಾತನಹಳ್ಳಿ ರಾಮಣ್ಣನವರು ಸಕಾರಣವಾಗಿ ಸಾಬೀತು ಮಾಡಿ ತಮ್ಮ 'ಗೊಂದಲಿಗರು: ಒಂದು ಅಧ್ಯಯನ' ಕೃತಿಯಲ್ಲಿ ದಾಖಲಿಸಿದ್ದಾರೆ. ಶಿವಾಜಿಯ ಗೂಢಚಾರರಾಗಿ ಕರ್ನಾಟಕಕ್ಕೆ ವಲಸೆ ಬಂದ ಗೊಂದಲಿಗರು ಅಂಬಾ ಭವಾನಿ, ಎಲ್ಲಮ್ಮನ ಕಥೆಗಳನ್ನು ಹಾಡುತ್ತಾ ಗೂಢಚರ್ಯೆ ಮಾಡುತ್ತಿದ್ದರು. ಕಾಲಕ್ರಮೇಣ ಕರ್ನಾಟಕದಲ್ಲಿಯೇ ನೆಲಸಿದ ಧಾರ್ಮಿಕ ವೃತ್ತಿಗಾಯಕರು. ಆ ಕಾಲದಲ್ಲಿ ಶಿವಾಜಿ ಇವರಿಗೆ ದತ್ತಿಗಳನ್ನು ಬಿಟ್ಟಿರುವುದಿದೆ. ಸದಾ ಸಂಚಾರದಲ್ಲಿಯೇ ತೊಡಗಿಸಿಕೊಂಡಿದ್ದ ಈ ವೃತ್ತಿಗಾಯಕರು ಈ ದತ್ತಿಗಳನ್ನು ತಾವು ಉಪಯೋಗಿಸುವುದಕ್ಕಿಂತ ಹೆಚ್ಚಿಗೆ ತಮ್ಮನ್ನು ಅವಲಂಬಿಸಿದವರಿಗೇ ಬಿಟ್ಟು ತಮ್ಮ ಕಥೋಪಜೀವನಕ್ಕೆ ಭಿಕ್ಷಾಟನೆಯನ್ನು ಅವಲಂಬಿಸಿರುವುದು ಎದ್ದು ಕಾಣುತ್ತದೆ. ಸ್ಥಿರ ನೆಲೆ, ಸುಭದ್ರ ಆರ್ಥಿಕ ಸಂಪನ್ಮೂಲಗಳಿಲ್ಲದೇ ಇವರಲ್ಲಿ ಶೇಕಡ ತೊಂಬತ್ತರಷ್ಟು ಜನ ಭಿಕ್ಷುಕರಾಗಿಯೇ ಉಳಿದು ಕಾಲಚಕ್ರದ ತುಳಿತಕ್ಕೆ ಸಿಕ್ಕಿ ಕಾಲಗರ್ಭದಲ್ಲಿ ಕಣ್ಮರೆಯಾಗುತ್ತಿದ್ದಾರೆ.

ಎಲ್ಲಾ ವೃತ್ತಿ ಗಾಯಕರು ಒಂದೊಂದು ನಿರ್ಧಿಷ್ಟ ದೇವಿಗೆ ತಮ್ಮನ್ನು ಅರ್ಪಿಸಿಕೊಂಡು ಆಕೆಯ ಹುಟ್ಟು, ಬೆಳವಣಿಗೆ, ಪವಾಡ ಮಹಿಮೆಗಳನ್ನು ಸುದೀರ್ಘವಾಗಿ ಮಹಾಕಾವ್ಯಗಳಂತೆ ಹಾಡುವ ಗೊಂದಲಿಗರೂ ಅಂಬಾಭವಾನಿ, ಎಲ್ಲಮ್ಮನನ್ನು ತಮ್ಮ ಆರಾಧ್ಯ ದೈವಗಳೆಂದು ಒಪ್ಪಿ ಅವರ ಕಥೆಗಳನ್ನು ಗದ್ಯ-ಪದ್ಯ ಸಂಮಿಶ್ರ ಜಾನಪದ ಚಂಪೂಗಳಲ್ಲಿ ಹಾಡಿ ಕುಣಿಯುತ್ತಾರೆ. ಗೊಂದಲ ಹಾಡಿ ಕುಣಿಯುವಂತೆ 'ಗೊಂದಲಿಗರು' ಎಂಬ ಜಾತಿಯಾಗಿದೆಯೆಂದು R.E. Ettaover ಬರೆಯುತ್ತಾರೆ. "They take their name from the word gondal meaning a confused dance. They are a calss of religious ministrels recruited from many castes" ಗೊಂದಲ-ಗೋಂಧಳ ಎಂಬುದು ಒಂದು ಪೂಜಾವಿಧಾನ. ಗೋಂಧಳ ಹಾಕುವುದು ಎಂದರೆ ಅಂಬಾಭವಾನಿ/ಎಲ್ಲಮ್ಮನ ವಿಗ್ರಹದ ಮುಂದೆ ಗೊಂದಲ ಹಾಕಿ ಆಕೆಯ ಚರಿತ್ರೆಯನ್ನು ಹಾಡಿ ಕುಣಿಯುವ ಪೂಜಾವಿಧಾನವೆಂದರ್ಥ. ಹೀಗೆ ಹಾಡಿ ಕುಣಿಯುವುದರಿಂದಲೇ ಇವರಿಗೆ 'ಗೊಂದಲಿಗರು' ಎಂಬ ಜಾತಿವಾಚಕಸ್ಥಿತಿ ಪ್ರಾಪ್ತವಾಗಿದೆ. ಗೊಂದಲ ಹಾಕುವ ವೃತ್ತಿಯಿಂದ ಇವರು ಜಾತಿಯಾಗಿ ಪರಿವರ್ತಿತರಾಗಿರುವುದು ಉಳಿದ ಜಾತಿಗಳಷ್ಟೇ ನೈಜವಾದುದು.

'ಗೊಂದಳ' ಕ್ಕೆ 'ಗೋಜಲು ಕುಣಿತ' ಎಂಬ ಅರ್ಥವಿದೆ. ಗೊಂದಲ ಎಂದರೆ ಗಡಿಬಿಡಿ ಅಸ್ಪಷ್ಟ ಎಂದರ್ಥ. ಗೊಂದಲ ಎಬ್ಬಿಸುವುದೇ ಗೂಢಚಾರರಾದ ಇವರ ಮೂಲ ಕಸುಬು. ಜಮದಗ್ನಿ ಮತ್ತು ರೇಣುಕೆ/ಎಲ್ಲಮ್ಮ ತಮ್ಮ ಜಾತಿಯ ಮೂಲಿಗರೆಂದು ಹೇಳಿಕೊಳ್ಳುತ್ತಾರೆ. ಇದು ಪುರಾಣ ಪ್ರಭಾವವೆಂಬುದು ಸ್ಪಷ್ಟ. ಹಾಗಲ್ಲದೆ ರೇಣುಕೆ ಜಮದಗ್ನಿಯರು ಗೊಂದಲಿಗರೇ ಅಗಿದ್ದರೆ ಜಾನಪದ ಎಲ್ಲಮ್ಮ ಕೆಳವರ್ಗದ ಗೊಂದಲಿಗರ ಪಂಚಮಳೆಂಬುದಕ್ಕೆ ಸಾಕ್ಷ್ಯವಾಗುತ್ತದೆ. ಮಹಾರಾಷ್ಟ್ರದ 'ಮಾಹೂರು' ತುಳಜಾಪುರಗಳ ಕಡೆಯಿಂದ ೨೦೦-೩೦೦ ವರ್ಷಗಳ ಹಿಂದೆ ನಮ್ಮ ಹಿರಿಯರು ಈ ಕಡೆಗೆ ವಲಸೆ ಬಂದಿರುವುದಾಗಿ ಗೊಂದಲಿಗರು ಹೇಳಿಕೊಳ್ಳುತ್ತಾರೆ. ಗೊಂಧಳ ಮೂಲತಃ ಭೂಮಾತೆಗೆ ಸಂಬಂಧಿಸಿದ ಪೂಜೆ, ಭೂತಾರಾಧನೆ-ಭೂತಮಾತೆಯ ಸಂಪ್ರದಾಯ ದಕ್ಷಿಣ ಭಾರತದಲ್ಲಿ ಬಹಳ ವಿಶಿಷ್ಟವಾಗಲು ಮುಖ್ಯ ಕಾರಣವಾಗಿ ಕಾಣುತ್ತದೆ.

ರೇಣುಕಾ ಮಹಾತ್ಮೆಯಲ್ಲಿ ಗೋಂಧಳದ ಉಗಮದ ಬಗ್ಗೆ ಒಂದು ಕಥೆಯಿದೆ. ರೇಣುಕೆಯ ಮಗ ಪರಶುರಾಮ ಬೇತಾಸುರ ಎಂಬ ರಾಕ್ಷಸನನ್ನು ಕೊಂದು ಅವನ ರುಂಡವನ್ನು ಕತ್ತರಿಸುತ್ತಾನೆ. ಅವನ ರುಂಡದ ಬ್ರಹ್ಮ ರಂಧ್ರದಿಂದ ಒಂದು ತಂತು ಹೊರಬರುತ್ತದೆ. ಆ ರಾಕ್ಷಸನ ದೇಹವನ್ನೆ ಚೌಡಿಕಿಯನ್ನಾಗಿ ಮಾಡಿಕೊಂಡು ಆ ರುಂಡದ ತಂತುವಿನಿಂದ ಮೀಟಿ 'ತಿಂತೃಣ ತಿಂತೃಣ' ಎಂಬ ಧ್ವನಿಯನ್ನು ಮೂಡಿಸುತ್ತಾನೆ. ರಾಕ್ಷಸನನ್ನು ಕೊಂದ ಸುದ್ದಿಯನ್ನು ತಾಯಿ ರೇಣುಕೆಗೆ ತಿಳಿಸಲು ತಿಂತೃಣಿಯ ಹಾಡನ್ನು ಹಾಡುತ್ತ ತಾಯಿಯ ಬಳಿಗೆ ಬಂದು ನಮಸ್ಕರಿಸಿ ಸುದ್ದಿ ತಿಳಿಸುತ್ತಾನೆ. ಪರಶುರಾಮನ ಈ ರೀತಿಯ ಹಾಡುಪಿಕೆಯೆ ಈ ಗೊಂಧಳ ನೃತ್ಯಕ್ಕೆ ಗೊಂದಲ ಉತ್ಸವಕ್ಕೆ ನಾಂದಿಯಾಯಿತೆಂದು ತಿಳಿಯಲಾಗಿದೆ. 'ಭೂತಚೇಷ್ಟೆಯ ಅನುಕರಣ ರೀತಿಯ' ಯಾವುದೇ ನಿಯಮಗಳಿಗೂ ಬದ್ಧವಲ್ಲದ ಅಸ್ತವ್ಯಸ್ತವಾದ ಕುಣಿತದಿಂದಲೇ, ಈ ನೃತ್ಯ ವಿಧಾನ ಅಥವಾ ಪೂಜಾವಿಧಾನ 'ಗೊಂದಲ' ಎನ್ನಿಸಿಕೊಂಡಿದೆ ಎಂಬುದು ಕ್ಯಾತನಹಳ್ಳಿ ರಾಮಣ್ಣನವರ ಅಭಿಪ್ರಾಯ.

ಗೊಂದಲಿಗರಲ್ಲಿ ತಮ್ಮ ಆರಾಧ್ಯ ದೇವತೆಯಾದ ರೇಣುಕೆ/ಅಂಬಾ ಭವಾನಿಯ ವಿಗ್ರಹದ ಮುಂದೆ ಗೊಂದಲಿ ದೀಕ್ಷೆ ನೀಡುತ್ತಾರೆ. ಗೊತ್ತಾದ ಒಂದು ಶುಭದಿನದಂದು ಜಾತಿಯ ನೆಂಟರಿಷ್ಟರನ್ನೆಲ್ಲ ಊಟಕ್ಕೆ ಆಹ್ವಾನಿಸುತ್ತಾರೆ. ಜಾತಿಯ ಮುಖ್ಯಸ್ಥನ ಮನೆಯ ಮಧ್ಯಭಾಗದಲ್ಲಿ ಮಣೆಯ ಮೇಲೆ ಅಕ್ಕಿ ಹರಡಿ ಅಂಬಾಭವಾನಿ/ಎಲ್ಲಮ್ಮನ ಪ್ರತಿಮೆ ಜಿಡಿಸುತ್ತಾನೆ. ನೀರು ತುಂಬಿದ ಹೊಸಮಡಿಕೆಯೊಂದನ್ನು ಮಣೆಯ ಮಧ್ಯಭಾಗದಲ್ಲಿಡುತ್ತಾರೆ. ಹುಡುಗನ ತಂದೆ ಆ ಮಡಿಕೆಯ ಬಾಯನ್ನು ಮಾವಿನ ಎಲೆ ಅಥವಾ ವೀಳೆದೆಲೆಯಿಂದ ಮುಚ್ಚಿ ತೆಂಗಿನಕಾಯಿಯನ್ನು ಕಣ್ಣು ಕಾಣದಂತೆ ಜಿಡಿಸಿ ಇಡುತ್ತಾರೆ. ಈ ಗಡಿಗೆಯನ್ನು ಪಡೆಯುವ ಹುಡುಗನಿಗೆ ಹಿರಿಯರು ಅಪ್ಪಣೆ ಕೊಡುತ್ತಾರೆ. ಕವಡೆಸರವನ್ನು ಕುತ್ತಿಗೆಗೆ ಕಟ್ಟುತ್ತಾರೆ. ಸಂಬಾಳ ಚೌಡಿಕೆ ಪತ್ತಗಳನ್ನು ಕೈಗೆ ಕೊಡುತ್ತಾರೆ. ಎಲ್ಲಮ್ಮ-ಭವಾನಿಯರ ಹೆಸರುಗಳನ್ನು ಕಿವಿಯಲ್ಲಿ ರಹಸ್ಯವಾಗಿ ಬೋಧಿಸಿ ಆ ಮಾಂತ್ರಿಕ ಶಬ್ದಗಳನ್ನು ಮರೆಯದಂತೆ ಪ್ರತಿದಿನ ಉಚ್ಚರಿಸಲು ಆದೇಶಿಸುತ್ತಾರೆ. ಆನಂತರ ಎಲ್ಲರೂ ಒಟ್ಟಿಗೆ ಊಟಮಾಡುತ್ತಾರೆ. ವೈದಿಕರ ಅನುಕರಣೆಯಿಂದ ಈ

ದೀಕ್ಷಾವಿಧಿ ಗೊಂದಲಿಗರಲ್ಲಿ ಸೇರಿರುವಂತೆ ಕಂಡರೂ, ವೈದಿಕರಗಿಂತಲೂ ಪೂರ್ವದಲ್ಲಿದ್ದ ಗೊಂದಲಿಗರ ಅನಾಗರಿಕವಾದ ಈ ದೀಕ್ಷಾವಿಧಿಗಳನ್ನೇ ವೈದಿಕರು ಮೆರುಗುಗೊಳಿಸಿ ಜನಿವಾರ, ಗಾಯತ್ರಿ ಮಂತ್ರಗಳನ್ನು ಬೆಸೆದು ಶಾಸ್ತ್ರೀಯವಾಗಿ ಬೆಳೆಸಿರುವ ಸಾಧ್ಯತೆಯೇ ಹೆಚ್ಚು. ಬುಡಕಟ್ಟುಗಳ ಪದ್ಧತಿ, ಸಂಪ್ರದಾಯ, ಆಚರಣೆಗಳನ್ನು ವೈದಿಕರು ಸಂಸ್ಕೃತೀಕರಣಗೊಳಿಸಿರುವ ದೃಷ್ಟಾಂತಗಳ ಪಟ್ಟಿಗೆ ಗೊಂದಲಿಗರ ಈ ದೀಕ್ಷೆ ಮತ್ತು ಗೊಂದಲ ಪೂಜಾವಿಧಾನವೂ ಸೇರುತ್ತದೆ.*

### ೧೪. ದವನ ಹುಣ್ಣಿಮೆ :

ಇದನ್ನು ಮಾರ್ಚ್-ಏಪ್ರಿಲ್, ಚೈತ್ರ ಮಾಸದಂದು ಆಚರಿಸುತ್ತಾರೆ. ಈ ತಿಂಗಳುಗಳಲ್ಲಿ ಚಂದ್ರನು ಪೂರ್ಣ ಮೂಡಿರುತ್ತಾನೆ. ಇದು ಹಿಂದೂಗಳ ತಿಂಗಳು ಎಂತಲೂ ಕರೆಯುತ್ತಾರೆ. ದವನದ ಹುಣ್ಣಿಮೆಯ ಸಮಯದಲ್ಲಿ ಗಿಡಗಳು ಮೊಗ್ಗು ಹೂವುಗಳನ್ನು ಬಿಡುವ ಸಮಯ. ದವನದ ಹುಣ್ಣಿಮೆಯ ಸಮಯದಲ್ಲಿ ಬಿತ್ತಿದ ಪರಿಮಳವಾದ ಹೂವುಗಳನ್ನು ಈ ಸಮಯದಲ್ಲಿ ಮುಖ್ಯವಾಗಿ ದೇವರಿಗೆ ಹೂವುಗಳನ್ನು ಅರ್ಪಿಸುತ್ತಾರೆ. ಆದ್ದರಿಂದ ಇದಕ್ಕೆ ಪೂರ್ಣ ಮೂಡಿದ ಚಂದ್ರನ ದಿನವೆಂದು ಕರೆಯುತ್ತಾರೆ. ಆದಕಾರಣ ಇದಕ್ಕೆ "ದವನ ಹುಣ್ಣಿಮೆ" ಎಂದು ಹೆಸರುಂಟು. ಪೂರ್ಣ ಚಂದ್ರ ಮೂಡಿರುವುದಕ್ಕೆ ಕೆಲವು ಜನರು "ಮುತ್ತೈದೆಯ ಹುಣ್ಣಿಮೆ" ಎಂದು ಕರೆಯುತ್ತಾರೆ. ಅಂದು ಹಲವು ಬಾಹುಸಾರ ಕ್ಷತ್ರಿಯರು ಹುಲಿಗೆಯಮ್ಮ, ತುಳಜಾಭವಾನಿ, ಕೋಟೆ ಮಾರಿಕಾಂಬ, ಸೌದತ್ತಿ ಎಲ್ಲಮ್ಮ ಮುಂತಾದ ದೇವಸ್ಥಾನಗಳಿಗೆ ಹೋಗಿ ಬರುವ ರೂಡಿಯನ್ನಿಟ್ಟುಕೊಂಡಿದ್ದಾರೆ. ಇದೇ ಸಮಯದಲ್ಲಿ 'ಮುತ್ತಿನ ತಾಳಿ' ಯನ್ನು ಕಟ್ಟಿಸಿಕೊಂಡು ಬರುತ್ತಾರೆ. ಆದ್ದರಿಂದ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ದೇವರಿಗೆ ಕಪ್ಪ ಕಾಣಿಕೆ ಕೊಟ್ಟು ಈ ಹುಣ್ಣಿಮೆಯನ್ನು ಆಚರಿಸುವ ಪದ್ಧತಿ ಬಹು ಹಿಂದಿನಿಂದಲೂ ಇದೆ.

### ೧೫. ಶಿವರಾತ್ರಿ :

ಶಿವರಾತ್ರಿಯಲ್ಲಿ ಶಿವನ ಪೂಜೆ ಮುಖ್ಯವಾಗಿರುತ್ತದೆ. ಬಾಹುಸಾರ ಕ್ಷತ್ರಿಯರೂ ಸಹ ಎಲ್ಲರಂತೆ ಶಿವದೇವಾಲಯಕ್ಕೆ ಹೋಗಿ ಉಪವಾಸವನ್ನು ಮಾಡುತ್ತಾರೆ. ಸಂಜೆ ವೇಳೆಯಲ್ಲಿ ಎಲ್ಲರೂ ಶಿವನ ಗುಡಿಗೆ ಹೋಗಿ ಪೂಜೆಯನ್ನು ಮಾಡಿಸಿ, ದೇವಾಲಯದ ಪ್ರಸಾದ ಸ್ವೀಕರಿಸಿ ಒಪ್ಪತ್ತು ಮಾಡುತ್ತಾರೆ. ರಾತ್ರಿಯಲ್ಲಿ ಜಾಗರಣೆ ಮಾಡಿ ಅಥವಾ ರಾತ್ರಿಯೆಲ್ಲ ಹಳೆಯ ದೇವಾಲಯ, ಸಿನಿಮಾಗಳನ್ನು ನೋಡಿ ಹಿಂದಿನ ನೆನೆಯುತ್ತಾರೆ. ಕಥೆಗಳನ್ನು ಹೇಳುವುದು ಕಂಡುಬರುತ್ತದೆ. ಮುಂಜಾನೆ ಮನೆಯಲ್ಲಿ ಪೂಜೆ ಮಾಡಿಕೊಂಡು ನೈವೇದ್ಯವನ್ನು ಅರ್ಪಿಸಿ, ಉಪವಾಸವನ್ನು ಬಿಡುತ್ತಾರೆ.

*ಅಡಿಟಪ್ಪಣಿ : ಎಲ್ಲಮ್ಮ – ಒಂದು ಜಾನಪದೀಯ ಅಧ್ಯಯನ, (ವೃತ್ತಿಗಾಯಕರಲ್ಲಿ ಎಲ್ಲಮ್ಮನ ಸಂಪ್ರದಾಯಗಳು) ಪ್ರೊ. ಎನ್. ಚಂದ್ರಪ್ಪ, ಮುಂಡ ಪ್ರಕಾಶನ, ಬೆಂಗಳೂರು. ಪುಟ ಸಂ. ೨೭–೩೫, ೫೩–೬೨, ೧೦೦–೧೦೧,೧೦೩–೧೦೭

R.E Enthover: The Tribes and Castes of Bombay: Vol. 2: P 13-17: 1922

**೧೬. ಯುಗಾದಿ :**

ಬಾಹುಸಾರ ಕ್ಷತ್ರಿಯ ಸಮುದಾಯದವರೂ ಸಹ ಯುಗಾದಿ ಹಬ್ಬವನ್ನು ಆಚರಿಸುತ್ತಾರೆ. ಈ ದಿನಗಳಲ್ಲಿ ಕೆಲವರು ತಮ್ಮ ಹಿರಿಯರಿಗೆ ಬಟ್ಟೆ ಏರಿಸುವುದು ಕಂಡುಬರುತ್ತದೆ. ಚೈತ್ರ ಶುದ್ಧ ಪಾಡ್ಯದಂದು ಯುಗಾದಿ ಹಬ್ಬ. ಯುಗಾದಿಯಿಂದ ಹೊಸ ವರ್ಷವು ಆರಂಭವಾಗುತ್ತದೆ. ಮನೆಮಂದಿಯೆಲ್ಲಾ ಅಭ್ಯಂಜನ ಸ್ನಾನ ಮಾಡಿ ಕೈಲಾದವರು ಹೊಸ ಬಟ್ಟೆಗಳನ್ನು ಧರಿಸುತ್ತಾರೆ. ಇಷ್ಟ ದೇವತೆಗಳಿಗೆ ಪೂಜೆ ಮಾಡಿ, ಬೇವು ಬೆಲ್ಲ, ಸಿಹಿ ಅಡುಗೆ ಮಾಡುತ್ತಾರೆ. ದೇವಸ್ಥಾನಗಳಲ್ಲಿ, ಉತ್ಸವ ವಿಶೇಷಗಳು ನಡೆಯುತ್ತವೆ. ಯುಗಾದಿ ಆಚರಣೆಯ ವಿಧಿಗಳಲ್ಲಿ ಬೇವು-ಬೆಲ್ಲ ಸೇವನೆ ಮಾಡಿ, ಚಂದ್ರನ ದರ್ಶನಮಾಡುತ್ತಾರೆ. ಬೇವು-ಬೆಲ್ಲಗಳು ಜೀವನದ ಸುಖ ದುಃಖಗಳ ಸಂಕೇತವಾಗಿವೆ. ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಯು ನೋವು-ನಲಿವಿನಲ್ಲಿ ಬದುಕುವುದುಂಟು. ಚಂದ್ರ ದರ್ಶನಮಾಡಿ ಹಿರಿಯರ ಆಶೀರ್ವಾದವನ್ನು ಪಡೆಯುತ್ತಾರೆ. ಏಕೆಂದರೆ ವರ್ಷವೆಲ್ಲವೂ ಸುಖದಿಂದ ಇರಿ ಎಂದು ಹಿರಿಯರು ಹಾರೈಸುತ್ತಾರೆ. ಸಂಪೂರ್ಣ ಸುಖಾವಕಾಶಗಳ ಅಥವಾ ದುಃಖಾವಕಾಶಗಳ ನೆಲೆಯೂ ಅಲ್ಲಿ ಪ್ರಕೃತಿಯ ಕತ್ತಲು ಬೆಳಕಿನ ಚೆಲ್ಲಾಟದಂತೆಯೇ ಸುಖ ದುಃಖ, ಲಾಭ ನಷ್ಟಗಳ ದ್ವಂದ್ವದಿಂದಲೂ ಕೂಡಿದೆ. ಹಬ್ಬಗಳನ್ನು ಆಚರಿಸುವುದರಿಂದ ಎಲ್ಲರೂ ಒಂದುಗೂಡಿ ಸುಖ ದುಃಖಗಳನ್ನು ಹಂಚಿಕೊಳ್ಳಲು ಅವಕಾಶ ಮಾಡಿಕೊಳ್ಳುತ್ತವೆ.

**೧೭. ಶ್ರೀ ರಾಮ ನವಮಿ :**

ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಶ್ರೀರಾಮನವಮಿಯನ್ನು ಆಚರಿಸುತ್ತಾರೆ. ವೆಂಕಟೇಶ್ವರ, ಹನುಮಂತನ ಭಕ್ತರಾಗಿದ್ದರಿಂದ ಶ್ರೀ ರಾಮನವಮಿಯನ್ನು ಹನುಮಂತ ದೇವರಿಗೆ ಪೂಜೆ ಸಲ್ಲಿಸಿ, ಇಲ್ಲಿ ಪಾನಕ, ಪ್ರಸಾದವು, ಕೋಸಂಬರಿ ಮುಖ್ಯವಾಗಿರುತ್ತದೆ.

**೧೮. ದಿಂಡಿ ಉತ್ಸವ :**

ದಿಂಡಿ ಎಂದರೆ ವೀಣೆ, ಮೃದಂಗ, ತಾಳಗಳೊಂದಿಗೆ ಶೃತಿಯಿಂದ ಅಭಂಗಗಳನ್ನು ಹಾಡುವ ಸಮೂಹಕ್ಕೆ ದಿಂಡಿ ಎಂದು ಹೆಸರು.

ಶಿವಮೊಗ್ಗೆಯ ಬಾಹುಸಾರ ಕ್ಷತ್ರಿಯ ಸಮಾಜ ಮತ್ತು ಬಾಹುಸಾರ ಕ್ಷತ್ರಿಯ ಭಜನಾ ಮಂಡಳಿಯ ವತಿಯಿಂದ ಪ್ರತಿವರ್ಷ ಶ್ರೀರಾಮ ನವಮಿ ಮತ್ತು ದಶಮಿಗಳಲ್ಲಿ ಅದ್ದೂರಿಯಾಗಿ ದಿಂಡಿ ಉತ್ಸವವನ್ನು ನಡೆಸಲಾಗುತ್ತದೆ. ಅನೇಕ ಊರುಗಳಿಂದ ಭಕ್ತರು, ವಾರಕರಿಗಳು, ಸ್ಥಳೀಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವರು.

ಅಲ್ಲದೇ ಪರಸ್ಥಳಗಳಲ್ಲಿ ನಡೆಯುವ ದಿಂಡಿ ಉತ್ಸವಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಭಜನಾ ಮಂಡಳಿಯವರು ಸಕ್ರಿಯವಾಗಿ ಭಾಗವಹಿಸುವರೆಂದು ಶಿವಮೊಗ್ಗ ಬಾಹುಸಾರ ಕ್ಷತ್ರಿಯ ಸಮುದಾಯದ ತುಕಾರಾಂ ರಂಗಧೋಳ್ ರವರು ನುಡಿಯುತ್ತಾರೆ.

**೧೯. ಭಾರತ ಹುಣ್ಣಿಮೆ :**

ಈ ಹಬ್ಬವನ್ನು ಭಾರತದ ಎಲ್ಲೆಡೆಯೂ ಆಚರಿಸುತ್ತಾರೆ. ರೂಢಿಯಲ್ಲಿರುವ ಈ ಹಬ್ಬವನ್ನು ಬಾಹುಸಾರ ಕ್ಷತ್ರಿಯ ಸಮುದಾಯವೂ ಕೂಡಾ ಆಚರಿಸುತ್ತಾರೆ. ಬಣ್ಣದ ಹುಣ್ಣಿಮೆ ತಿಂಗಳು ಮುಗಿದ ಮೇಲೆ ಮಾಘ ಮಾಸದ (ಜನವರಿ-ಫೆಬ್ರುವರಿ) ತಿಂಗಳ, ಚಂದ್ರನು ಸಂಪೂರ್ಣವಾಗಿ ಮೂಡಿದ ದಿನದಂದು 'ಭಾರತ ಹುಣ್ಣಿಮೆ' ಯ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬವನ್ನು ತಮ್ಮ ಕೀರ್ತಿಗೋಸ್ಕರವಾಗಿ ಆಚರಿಸುತ್ತಾರೆ. ಆದರೆ ಈ ಹಬ್ಬವು ಪ್ರಾಚೀನ ಕಾಲದಿಂದ ಬಂದಿದ್ದಲ್ಲ. ಈ ಕಾಲದವರು ಇತ್ತಿತ್ತಲಾಗಿ ಬಂದಿರುವ ಹಬ್ಬವಾಗಿದೆ ಎಂದು ನುಡಿಯುತ್ತಾರೆ.

'ಭಾರತ ಹುಣ್ಣಿಮೆ' ಯ ಸಮಯದಲ್ಲಿ ಬಹಳ ಜನರು ತಮ್ಮ ನಿರ್ಮಲ ಮನಸ್ಸಿನಿಂದ ಸೌದತ್ತಿ ಎಲ್ಲಮ್ಮ ಮುಂತಾದ ತಮ್ಮ ಮನೆಯ ದೇವರು, ದೇವತೆಗಳಿಗೆ ಮತ್ತು ಮುಖ್ಯವಾಗಿರುವ ದೇವರುಗಳಿಗೆ ಹೋಗುತ್ತಾರೆ. ಈ ಹುಣ್ಣಿಮೆಯು ಸಂಪೂರ್ಣವಾಗಿ ಬೆಳದಿಂಗಳಿಂದ ಕೂಡಿರುತ್ತದೆ. ಈ ಸಮಯದಲ್ಲಿ ಭಕ್ತರು ತಮ್ಮ ಪೆಟ್ಟಿಗೆ ದೇವರುಗಳನ್ನು (ಹಡ್ಲಿಗೆ) ತೆಗೆದುಕೊಂಡು ಅಂದು ವಿಶೇಷವಾದ ಅಡಿಗೆಯನ್ನು ಮಾಡಿ ದೇವರು-ದೇವತೆಗಳಿಗೆ ಹೋಗುತ್ತಾರೆ. ಈ ಸಂದರ್ಭದಲ್ಲಿ ಜನರು ಗುಂಪು ಗುಂಪಾಗಿ ಊದಿಸುತ್ತಾ, ಬಾರಿಸುತ್ತಾ ಮೆರವಣಿಗೆಯಿಂದ ಜೋಗತಿಯರು ಮತ್ತು ಜಸವಿಯರು ಮುಂತಾದ ಸ್ಥಳೀಯ ಜನರು ಈ ಹುಣ್ಣಿಮೆಗೆ ಹೋಗುತ್ತಾರೆ.

**೨೦. ಹೋಳಿ ಹಬ್ಬ :**

ಈ ಹಬ್ಬವನ್ನು ಫಾಲ್ಗುಣ ಮಾಸದ ಪೌರ್ಣಮಿಯ (ಜನವರಿ-ಮಾರ್ಚ) ತಿಂಗಳಂದು ಭಾರತದ ಎಲ್ಲೆಡೆಯು ಹೋಳಿಹಬ್ಬವನ್ನು ಆಚರಿಸುವರು. ಅದೇ ರೀತಿ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮಾಜದವರು ಈ ಹಬ್ಬವನ್ನು ಆಚರಿಸುವುದುಂಟು. ಈ ಹಬ್ಬವು ಹಿಂದೂಗಳ ಪಂಚಾಂಗದ ಪ್ರಕಾರ ಕೊನೆಯ ತಿಂಗಳು. ಆದ್ದರಿಂದ ಪ್ರೀತಿಯ ದೇವರು ಎಂದು, 'ಕಾಮದೇವ' ನ ಹಬ್ಬವನ್ನು ಈ ತಿಂಗಳಲ್ಲಿ ಆಚರಿಸುತ್ತಾರೆ. ಈ ಹಬ್ಬವನ್ನು ಭಕ್ತರು 'ಕಾಮ' ಮತ್ತು ಹೋಳಿಯನ್ನು ಚಂದ್ರ ಪೂರ್ಣ ಮೂಡಿದ ದಿನವೇ ಆಚರಿಸುತ್ತಾರೆ. ಈ ಹಬ್ಬವನ್ನು ಸಂಸ್ಕಾರ, ವಿಧಿ ನಿಯಮದ ಅನುಸಾರವಾಗಿ ಹಿಂದೂ ಸಮಾಜದ ಎಲ್ಲಾ ಜನರು ಹುಣ್ಣಿಮೆ ದಿನದಂದು ಆಚರಿಸುವುದುಂಟು. ಬಾಹುಸಾರ ಕ್ಷತ್ರಿಯ ಸಮುದಾಯದ ಗಂಡುಮಕ್ಕಳು ಒಂದೆಡೆಗೆ ಸೇರಿ ಮನೆ ಮನೆಗಳಿಂದ ಐದು ಕುಳ್ಳುಗಳನ್ನು ಸಂಗ್ರಹಣೆ ಮಾಡುತ್ತಾರೆ. ಊರಿನ ಮುಖ್ಯ ಸ್ಥಳದಲ್ಲಿ ಸಂಗ್ರಹಣೆ ಮಾಡಿದ ಕುಳ್ಳುಗಳನ್ನು ಗುಂಪು ಹಾಕುತ್ತಾರೆ. ನಾಳೆ

ಹುಣ್ಣಿಮೆ ಇರುವಂತೆ ಅಂದಿನ ಬೆಳಗಿನ ಸಮಯಕ್ಕೆ 'ಕಾಮದೇವನ' ಮೂರ್ತಿಯನ್ನು ತಂದು ಕುಳ್ಳುಗಳ ಮಧ್ಯದಲ್ಲಿ ಇಟ್ಟು ಸಂಸ್ಕಾರದ ಪ್ರಕಾರ 'ಕಾಮನಿಗೆ' ಪೂಜೆಯನ್ನು ಸಲ್ಲಿಸಿ ಬೆಂಕಿಯನ್ನು ಹಚ್ಚುತ್ತಾರೆ. ಆಗ ಎಲ್ಲರೂ ಕೇಕೆ ಹಾಕುವುದು, ಚೀರುವುದು ಮುಂತಾದ ಶಬ್ದಗಳಿಂದ ಹೋಳಿಯ ಹಬ್ಬವನ್ನು ಕೊಂಡಾಡುವುದು, ಈ ಸಮಯದಲ್ಲಿ ಕುಣಿಯುವುದು, ಹಾಡುಗಳನ್ನು ಹಾಡುವುದು, ಅವಾಚ್ಯ ಶಬ್ದಗಳನ್ನು ಬಳಸುವುದರ ಮೂಲಕ ಮನರಂಜನೆಯನ್ನು ವ್ಯಕ್ತಪಡಿಸುತ್ತಾರೆ. ಇವು ಎಲ್ಲ ಮುಗಿದ ಮೇಲೆ ಹಗಲಿನ ದೃಶ್ಯದಲ್ಲಿ ನೀರಿನಿಂದ ಕೂಡಿನ ನಾನಾ ತರದ ಬಣ್ಣವನ್ನು (ಓಕಳಿ) ಒಬ್ಬರಿಂದ ಒಬ್ಬರಿಗೆ ಗೊಜ್ಜುತ್ತಾರೆ. ಈ ರೀತಿಯಾಗಿ ಗಂಡು, ಹೆಣ್ಣುಗಳು ಮನರಂಜನೆಯಾಗಿ ಹೋಳಿ ಹಬ್ಬವನ್ನು ಆಚರಿಸುತ್ತಾರೆ. ಕಾಮದೇವನ ಸಂಸ್ಕಾರವಾದ ಬೆಂಕಿಯನ್ನು ಮನೆ, ಮನೆಗೆ ತೆಗೆದುಕೊಂಡು ಹೋಗಿ ತಮ್ಮ ಮನೆಯಲ್ಲಿ ವಿಧಿ ನಿಯಮಗಳಿಗನುಗುಣವಾಗಿ ಪೂಜೆಯನ್ನು ಸಲ್ಲಿಸಿ ಒಲೆಯನ್ನು ಹಚ್ಚುತ್ತಾರೆ.

ಆದುದರಿಂದ ಈ ಹಬ್ಬವು ಪುರಾಣ ದೇವ ಚರಿತ್ರೆಯಿಂದ ತಿಳಿದು ಬರುತ್ತದೆ. "ಪಾರ್ವತಿಯು ಶಿವನನ್ನುವರಿಸಬೇಕೆಂದು ಬಯಸಿ, ತಪೊಧರನಾಗಿದ್ದ ಶಿವನ ಪೂಜೆ ಪುನಸ್ಕಾರಗಳನ್ನು ಮಾಡುತ್ತಿದ್ದಳು. ಆದರೂ ತಾರುಣ್ಯ ಸಹಜವಾದ ಆಕೆಯ ಚಂಚಲ ಪ್ರೇಮಕ್ಕೆ ಶಿವ ಒಲಿಯಲಿಲ್ಲ. ದೇವತೆಗಳ ಕೃಪೆಯಿಂದ ಪಾರ್ವತಿಯು ಮನ್ಮಥನ ಸಹಾಯ ಪಡೆದು ಮುಂದುವರಿದಳು. ಮನ್ಮಥನೂ ಸಹ ಕುಸುಮಾಸ್ತ್ರಗಳನ್ನು ಶಿವನ ಮೇಲೆ ಪ್ರಯೋಗಿಸಿದನು. ಆದರೇನು? ಕ್ಷಣಮಾತ್ರದಲ್ಲಿ ಕಣ್ತೆರೆದ ಶಿವನು ತನ್ನ ತಪೋಭಂಗಕ್ಕೆ ಕಾರಣನಾದ ಮನ್ಮಥನನ್ನು ತಕ್ಷಣವೇ ತನ್ನ ಹಣೆಗಣ್ಣಿನ ಬೆಂಕಿಯಿಂದ ಸುಟ್ಟು ಬೂದಿ ಮಾಡಿದನು" ಎಂದು (ಧರ್ಮ ಸಿಂಧು) ಪುರಾಣದಲ್ಲಿ ಹೇಳಿದೆ (ರಂಗಸ್ವಾಮಿ, ೧೯೯೩ : ೧೧೪) ಆದ್ದರಿಂದ ಶಿವನು ಮನ್ಮಥ (ಕಾಮ) ನನ್ನು ಸುಟ್ಟಿದ್ದು ಈ ಹುಣ್ಣಿಮೆಯ ದಿನ ಎಂದು ನಂಬಿ ಕಾಮದೇವ, ಹೋಳಿ ಹಬ್ಬವನ್ನು ಆಚರಿಸುತ್ತಾರೆ.

**೪.೨ ಜೀವನಾವರ್ತನದ ಆಚರಣೆಗಳು :-**

ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರದ ಹಂತಗಳಿರುತ್ತದೆ. ಇಂತಹ ಸಂದರ್ಭದಲ್ಲಿ ನಡೆಯುವ ಆಚರಣೆಗಳನ್ನು ಸ್ಥಿತ್ಯಂತರದ ಆಚರಣೆಗಳು ಅಥವಾ ಪರಿವರ್ತನೆಯ ವಿಧಿಗಳೆಂದು ಕರೆಯಬಹುದು. ಇಂತಹ ವಿಧಿ ಆಚರಣೆಗಳು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ. ಭಾರತೀಯ ಸಂದರ್ಭವನ್ನು ಗಮನಿಸಿ ಹೇಳುವುದಾದರೆ ಹೆಂಗಸರಲ್ಲಿ ಇಂತಹ ಸ್ಥಿತ್ಯಂತರ ಹಾಗೂ ಸ್ಥಿತ್ಯಂತರದ ವಿಧಿಗಳು ಹೆಚ್ಚು, ಹದಿಹರೆಯ, ಮೈನೆರೆಯುವಿಕೆ, ಮದುವೆ, ಸೀಮಂತ, ಹುಟ್ಟಿನ ಆಚರಣೆ, ಸಾವಿನ ಆಚರಣೆ ಹೀಗೆ ವೈವಿಧ್ಯಮಯ ಆಚರಣೆಗಳೆಲ್ಲವು ಜೀವನಾವರ್ತನದ ಆಚರಣೆಗಳಾಗುತ್ತವೆ. ಸಮಾಜವು ಒಬ್ಬ ವ್ಯಕ್ತಿಯನ್ನು ಅಂಗೀಕರಿಸುವಂತೆ ಮಾಡುವಲ್ಲಿ ಈ ಜೀವನಾವರ್ತನದ ಆಚರಣೆಗಳು ನೆರವಾಗುತ್ತವೆ.

ಇಂತಹ ಜೀವನಾವರ್ತನದ ಆಚರಣೆಗಳು ಕರ್ನಾಟಕದ ಮಟ್ಟಿಗೆ ಪ್ರಾದೇಶಿಕವಾಗಿ ಬದಲಾವಣೆಯನ್ನು ಹೊಂದುತ್ತಾ ಬರುತ್ತದೆ. ಅದರಲ್ಲೂ ಶಿವಮೊಗ್ಗಾ ಜಿಲ್ಲೆಯಲ್ಲಿ ಈ ರೀತಿಯ ಆಚರಣೆಗಳು ವಿಭಿನ್ನ ರೀತಿಯಲ್ಲಿ ನಡೆಯುತ್ತವೆ. ಅಂತೆಯೇ ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರು ಆಚರಿಸುವ ಜೀವನಾವರ್ತನದ ಆಚರಣೆಗಳನ್ನು ಕುರಿತು ವಿವೇಚಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಶಿವಮೊಗ್ಗ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ವಾಸಿಸುತ್ತಿರುವ ಬಾಹುಸಾರ ಕ್ಷತ್ರೀಯ ಸಮುದಾಯದವರ ಜೀವನಾವರ್ತನದ ಆಚರಣೆಗಳು ಒಂದೇ ನಮೂನೆಯವಾಗಿದ್ದುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ.

**ಹುಟ್ಟು :-**

ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಯಾವುದೇ ಕುಟುಂಬದಲ್ಲಿ ಒಬ್ಬ ಸ್ತ್ರೀಯು ಮಗುವನ್ನು ಹೆರುವ ಸಂದರ್ಭದ ಮೊದಲಿಗೆ ಬಂಧು-ಬಳಗದವರೆಲ್ಲರೂ ಮತ್ತು ಸೂಲಗಿತ್ತಿಯರು ಸೇರಿಕೊಂಡು ಹಾಗೂ ಮಕ್ಕಳನ್ನು ಹೆತ್ತು ಅನುಭವ ಇರುವವರು ಮೊದಲಿಗೆ ಆಕೆಗೆ ತಿಳುವಳಿಕೆ ಹೇಳುವುದರ ಜೊತೆಗೆ ಧೈರ್ಯವನ್ನು ತುಂಬುತ್ತಿರುತ್ತಾರೆ. ಹೆರಿಗೆಯಾದ ನಂತರ ಗಂಡು ಮಗುವಾದರೆ ಪೇಡಾ ಹಂಚುತ್ತಾರೆ. ತದನಂತರ ಕೂಡಿದಂತಹ ಹೆಂಗಳೆಯರು ಮಗುವನ್ನು ಮತ್ತು ಬಾಣಂತಿಯನ್ನು ಸ್ನಾನಮಾಡಿಸಿ, ತಾವು ಕೂಡಾ ಸ್ನಾನ ಮಾಡಿ ಹೆರಿಗೆಯಾದ ಮನೆಯಲ್ಲಿನ ಬಟ್ಟೆಗಳನ್ನು ಉಟ್ಟುಕೊಂಡು ಉಡಿ ಅಕ್ಕಿ ಹಾಕಿಸಿಕೊಂಡು ಹೋಗುತ್ತಾರೆ.

ಈ ಸಂದರ್ಭದಲ್ಲಿ ಹೆರಿಗೆಯಾದ ಮನೆಗೆ ಸೂತಕ ಸಂಭವಿಸುತ್ತದೆ. ಇಂತಹ ಸೂತಕವನ್ನು ದಿನ ಒಲೆಯನ್ನು ತೆಗೆಯುವ ಕಾರ್ಯಕ್ರಮವೆಂದು ಆಚರಿಸುವುದರ ಮುಖಾಂತರ ಮೈಲಿಗೆಯನ್ನು ಹೋಗಲಾಡಿಸುತ್ತಾರೆ.

ಹಿಂದಿನ ಕಾಲದಲ್ಲಿ ಮನೆಯಲ್ಲಿಯೇ ಕಾಡಿಗೆಯನ್ನು ತಯಾರಿಸಿ ಮಕ್ಕಳಿಗೆ ಹಚ್ಚುತ್ತಿದ್ದರಂತೆ ಆದರೆ ಇಂದು ಈ ಸಮುದಾಯದವರು ಇತರರಂತೆ ಅಂಗಡಿಯಿಂದಲೇ ಕಾಡಿಗೆ ಡಬ್ಬಿಯನ್ನು ತಂದು, ಮಗುವಿಗೆ ದೃಷ್ಟಿ ತಾಕದಿರಲೆಂದು ಕಣ್ಣಿಗೆ, ಕೆನ್ನೆಗೆ, ಅಂಗೈ ಅಂಗಾಲುಗಳಿಗೆ ಹಚ್ಚುವರು.

ಮಗುವು ಹುಟ್ಟಿದ ಎರಡು-ಮೂರು ದಿನಗಳ ಕಾಲ ತಾಯಿಯ ಹಾಲನ್ನು ಕುಡಿಸುತ್ತಿರಲಿಲ್ಲವಂತೆ ಆದರೆ ಈಗ ಜನರು ಸುಧಾರಿಸಿರುವುದರಿಂದ ಮಗು ಹುಟ್ಟಿದ ಒಂದು ಘಂಟೆಯೊಳಗೆ ಹಾಲು ಕುಡಿಸಲು ಪ್ರಾರಂಭಿಸುತ್ತಾರೆ. ಮೊದಲಿಗೆ ಜೇನುತುಪ್ಪವನ್ನು ಬೆರಳಿನಿಂದ ಚೀಪಿಸುತ್ತಿದ್ದರಂತೆ ಅಲ್ಲದೆ ಮಗುವನ್ನು ಐದು ತಿಂಗಳು ಇಲ್ಲವೇ ಒಂಭತ್ತು ತಿಂಗಳ ತನಕವು ಕೊಬ್ಬರಿ ಎಣ್ಣೆಯನ್ನು ಬಿಸಿಮಾಡಿ, ಮೈಗೆಲ್ಲಾ ಹಚ್ಚಿ ತಿಕ್ಕಿ ನೀವುತ್ತಾರೆ. ಎಣ್ಣೆಯಿಂದ ಚೆನ್ನಾಗಿ ನೀವಿದಾಗ ಮಗು ಅರಚಿದರೂ ಬಿಡುವುದಿಲ್ಲ, ಕೈ ಕಾಲುಗಳನ್ನು ಎಳೆದು ನೀವಿ, ಬೆನ್ನ ಮೇಲೆ ಉಜ್ಜಿ ನೀರು ಹಾಕುವರು. ಎಳೆಯ ಮಗುವಾಗಿದ್ದರೂ ಬಹಳಷ್ಟು ಬಿಸಿಯ

ನೀರಿನಿಂದ ಸ್ನಾನ ಮಾಡಿಸುತ್ತಾರೆ. ಇದರಿಂದ ಮಕ್ಕಳ ಅವಯವಗಳು ಚೆನ್ನಾಗಿ ಬೆಳೆದು ಬಲಿಯುತ್ತವೆ, ಬಲಿಷ್ಟಗೊಳ್ಳುತ್ತವೆ, ಎನ್ನುವ ನಂಬಿಕೆಯಿದೆ. ಸ್ನಾನಮಾಡಿಸಿದ ನಂತರ ಮಗುವನ್ನು ಸೀರೆಯಿಂದ ತಯಾರಿಸಿದ ತೊಟ್ಟಿಲಿನಲ್ಲಿ ಮಲಗಿಸುತ್ತಾರೆ. ನೀರೆರೆಯುವುದಕ್ಕೆ ಮುನ್ನ ಬಾಣಂತಿಗೆ ಬೇವು, ಅರಿಷಿಣವನ್ನು ನುಣ್ಣಗೆ ಅರೆದು ಮೈಗೆಲ್ಲ ಹಚ್ಚುತ್ತಾರೆ. ನೀರೆರೆದ ನಂತರ ಹೊರಸಿನ ಮೇಲೆ ಮಲಗಿಸಿ ಬೆಂಕಿ ಕಾಸುವುದು ರೂಢಿ, ಸೆಗಣಿಯ ಕುರುಳಿನಿಂದ ಬೆಂಕಿಯನ್ನು ಮಾಡಿ ಅದರಲ್ಲಿ ಬೆಳ್ಳುಳ್ಳಿಯ ರವದಿಯನ್ನು ಹಾಕಿ, ಮೈಗೆಲ್ಲಾ ಕಾಯಿಸುವುದು ಕಂಡುಬರುತ್ತದೆ.

ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಮಗು ಜನಿಸಿದ ೫ನೇ ದಿನದಂದು ವಿಧಿಮುಂಡಿಯು ಅಂದರೆ ಸೆಟವಿತಾಯಿಯು ಮಗುವಿಗೆ ಹಣೆ ಬರಹವನ್ನು ಬರೆಯುತ್ತಾಳೆಂದು ಈ ಜನರ ನಂಬುಗೆ. ಕಾರಣ ಈ ಸಮುದಾಯದವರು ಮನೆಯಲ್ಲೆಲ್ಲಾ ಸಾರಿಸಿ, ಸ್ವಚ್ಚಗೊಳಿಸಿ ಮನೆಯಲ್ಲಿ ಪೂಜೆಗೆಂದು ಮಾಂಸದ ಅಡಿಗೆಯನ್ನು ಮಾಡಿ ನೈವೇದ್ಯ ಮಾಡುವರು. ನೈವೇದ್ಯ ಮಾಡುವಾಗ ಅನ್ನದಿಂದ ೫ ದೀಪಗಳನ್ನು ಮಾಡಿ ಆರತಿ ಬೆಳಗುತ್ತಾರೆ. ನಂತರ ಎಲ್ಲರೂ ಊಟ ತೀರಿಸಿಕೊಂಡು ರಾತ್ರಿಯೆಲ್ಲಾ ಎದ್ದು ಸೆಟವಿಯು ಬಂದು ಹಣೆಬರಹವನ್ನು ಬರೆದು ಹೋಗುವವರೆಗೂ ಕಾಯುತ್ತಾರೆ, ಅದಕ್ಕಾಗಿ ದೇವರ ಮನೆಯಲ್ಲಿ ಅಥವಾ ಬಾಣಂತಿಯ ಹೊರಸಿನ ಕೆಳಗೆ ಒಂದು ಮೊರದಲ್ಲಿ ಒಂದು ಕಲ್ಲನ್ನು ಇಟ್ಟು ಅದಕ್ಕೆ ಕುಂಚಿಗೆ ಹಾಕಿ. ೫ ದೀಪಗಳನ್ನು ಹಚ್ಚಿ, ಕೇರು ಹರಳು ಅಥವಾ ಒಂದು ಸೂಜಿಯನ್ನು ಇಟ್ಟು ಪೂಜಿಸುತ್ತಾರೆ. ಹೀಗೆ ಪೂಜಿಸಿದ ಕೇರು ಹಳ್ಳಿಗೆ ಸೂಜಿಯನ್ನು ಚುಚ್ಚಿ ಚುಚ್ಚಿ ಮಗುವಿಗೆ ಹಣೆಬರಹವನ್ನು ಬರೆಯುತ್ತಾಳೆ ಎನ್ನುವ ನಂಬಿಕೆ ಈ ಸಮುದಾಯದವರಲ್ಲಿದೆ. ಬಾಣಂತಿಯ ತಲೆದಿಂಬಿನ ಕೆಳಗೆ ನಿಂಬೆ ಹಣ್ಣು, ಕುಡುಗೋಲು ಇಟ್ಟಿರುತ್ತಾರೆ. ಕಾರಣ ಈಕೆಗೆ ಭಯವಾಗದಿರಲೆಂದು ಇವರ ತಿಳುವಳಿಕೆಯಾಗಿದೆ.

ಇವರಲ್ಲಿನ ಇನ್ನೊಂದು ವಿಶೇಷವೆಂದರೆ ಈ ಪೂಜೆಗಾಗಿ ಪ್ರಸಾದವೆಂದು ಮಂಡಕ್ಕಿ, ಅವಲಕ್ಕಿ, ಬೆಲ್ಲ ಕಡ್ಲೆ, ಕೊಬ್ಬರಿಯನ್ನು ಇಟ್ಟಿರುತ್ತಾರೆ. ಹಾಗು ಬಾಣಂತಿಗೆ ೫ನೇ ದಿನ ಈ ಸಮುದಾಯದವರು ಬೇವಿನ ಸೊಪ್ಪನ್ನು ಅರೆದು ಸ್ನಾನಮಾಡಿಸಿ ನಂತರ ಮಗುವಿಗೂ ಹಚ್ಚಿ ಸ್ನಾನ ಮಾಡಿಸುತ್ತಾರೆ. ಜೊತೆಗೆ ೫ ಸಣ್ಣ ಮಕ್ಕಳಿಗೆ ಕರೆದು ಈ ಪೂಜೆ ನಡೆಯುವ ಸಮಯದಲ್ಲಿ ಮಣೆ ಹಾಕಿ ಕೂರಿಸುತ್ತಾರೆ. ಕೂರಿಸಿ ಪೂಜೆಯ ಬಳಿಕ ಈ ೫ ಮಕ್ಕಳಿಗೆ ಉಡಿ ತುಂಬುತ್ತಾರೆ. ಉಡಿ ತುಂಬಿದ ನಂತರ ಆ ೫ ಮಕ್ಕಳ ಕೈಯಿಂದ ಮಗುವಿಗೆ ಹಾಗೂ ಬಾಣಂತಿಗೆ ಅರೆದ ಬೇವಿನ ಸೊಪ್ಪನ್ನು ಹಚ್ಚಿಸುತ್ತಾರೆ. ಆ ಮೇಲೆ ಮಗು ಬಾಣಂತಿಗೆ ಬೇವಿನ ಸೊಪ್ಪು ಸೇವನೆಗೆ ಕೊಡುತ್ತಾರೆ. ನಂತರ ಮಗುವಿಗೆ ಸೆಟವಿಯ ಪೂಜೆ ಎದುರಿಗೆ ಬಟ್ಟೆ ತೆಗೆದು ಮಲಗಿಸುತ್ತಾರೆ. ಆ ದಿನ ರಾತ್ರಿ ಸೆಟವಿಯು ಬಂದು ಹಣೆಬರಹವನ್ನು ಬರೆದು ಹೋಗುತ್ತಾಳೆಂಬುದು ಇವರ ನಂಬಿಕೆ.

ಈ ಸೆಟವಿತಾಯಿಯ ಪೂಜೆ ಆಗುವವರೆಗೂ ಅಂದರೆ ಮಗು ಜನಿಸಿದಂದಿನಿಂದ ಹಳೆ ಬಟ್ಟೆ ಹಾಕುತ್ತಿರುತ್ತಾರೆ. ಸೆಟವಿತಾಯಿಯ ಪೂಜೆ ಮುಗಿದ ನಂತರ ಮಗುವಿಗೆ ಹೊಸಬಟ್ಟೆ ಹಾಕಲು

ಪ್ರಾರಂಭಿಸುತ್ತಾರೆ. ಈ ಪೂಜೆಯ ಬಳಿಕವೇ ಬಾಣಂತಿಯೂ ಸಹ ಕಣ್ಣಿಗೆ ಕಾಡಿಗೆ ಹಚ್ಚಲು ಪ್ರಾರಂಭಿಸುತ್ತಾಳೆ. ಬಂಧು-ಬಳಗದವರೆಲ್ಲ ಕಾರದ ಅಂಟಿನ ಸಾಮಾನುಗಳನ್ನು ಬಾಣಂತಿಗೆ ಈ ಸಂದರ್ಭದಲ್ಲಿ ಉಡಿ ತುಂಬುತ್ತಾರೆ. ಮಗು ಬಾಣಂತಿಗೆ ಉಡುಗೊರೆಗಳನ್ನು ಸಹ ಈ ಸಂದರ್ಭದಲ್ಲೇ ತುಂಬುತ್ತಾರೆ ಇದಿಷ್ಟು ಆಚರಣೆಗಳನ್ನು ಬಾಹುಸಾರ ಕ್ಷತ್ರೀಯ ಸಮುದಾಯದವರು ಸೆಟವಿತಾಯಿ ಪೂಜೆ ಮಾಡುವ ದಿನ ಆಚರಿಸುತ್ತಾರೆ.

ಮಗು ಹುಟ್ಟಿದ ಒಂಭತ್ತನೆಯ ದಿನಕ್ಕೆ ಬಾಣಂತಿಯನ್ನು ಗಂಗೆ ಪೂಜೆಗೆಂದು ಬಾವಿಗೋ, ಹಳ್ಳಕ್ಕೋ, ಕರೆದುಕೊಂಡು ಹೋಗಿ ಪೂಜೆ ಮಾಡಿಕೊಂಡು ಬರುತ್ತಾರೆ. ನಂತರದ ದಿನದಂದು ಬಾಣಂತಿಯು ಹೆರಿಗೆಯ ಕೋಣೆಯಿಂದ ಮನೆಯಲ್ಲೆಲ್ಲಾ ಓಡಾಡಿಕೊಂಡು ಮನೆಯ ಕೆಲಸ ಮಾಡಿಕೊಂಡು ಇರಬಹುದು. ನಂತರ ತಿಂಗಳು ತುಂಬುವುದರೊಳಗೆ ಅಥವಾ ೫ ತಿಂಗಳು ತುಂಬುವುರೊಳಗೆ ತವರಿನಲ್ಲಿಯೇ ಸಾಮಕರಣ ಮಾಡುವುದು ರೂಢಿ, ಕಾರಣ ಈ ಕುಟುಂಬಕ್ಕೆ ಸಂಬಂಧಿಸಿದ ಬಂಧುಬಳಗದವರು, ಅಕ್ಕ-ಪಕ್ಕದವರು ಅಲ್ಲದೇ ಕೂಸಿನ ಅಪ್ಪನ ತಂಗಿ ಇಲ್ಲವೇ ಅಕ್ಕ, ಯಾರಾದರೂ ಸರಿ ಮಗುವಿಗೆ ನಾಮಕರಣ ಮಾಡುತ್ತಾರೆ.

ಗರ್ಭಿಣಿ ಮಹಿಳೆಗೆ ಹೆರಿಗೆ ನೋವು ಬಂದಾಗ ಮನೆಯಲ್ಲಿ ಬಂದುಬಾಂದವರು ಅಪ್ಪ-ಅಮ್ಮಂದಿರು ತಮ್ಮ ಮಗಳಿಗೆ ಸುರಕ್ಷಿತವಾಗಿ ಹೆರಿಗೆಯಾಗುವಂತೆ ತಮ್ಮ ತಮ್ಮ ಕುಲದೇವತೆಗಳಲ್ಲಿ ಮೊರೆಯಿಡುತ್ತಾರೆ. ಪ್ರಾರ್ಥನೆ ಮಾಡಿ ಇಷ್ಟದೈವದ ಆಧಾರವಾಗಿ ಕುಂಕುಮ ಭಸ್ಮವನ್ನು ಹಣೆಗೆ ಹಚ್ಚಿ ತೀರ್ಥದ ನೀರು ಕುಡಿಯಲು ಕೊಡುತ್ತಾರೆ.

ಸೂಲಗಿತ್ತಿಯನ್ನು ಮನೆಗೆ ಕರೆದು ತಂದಿರುತ್ತಾರೆ. ಅನುಭವಸ್ಥ ಈ ಸೂಲಗಿತ್ತಿಯು ಗರ್ಭಿಣಿ ಮಹಿಳೆಗೆ ಹೆರಿಗೆಯನ್ನು ಮಾಡಿಸುತ್ತಾಳೆ. ತಾಯಿಯ ಗರ್ಭದಿಂದ ಮಗುವು ಹೊರಬಂದಾಗ ಕುಡುಗೋಲಿನಿಂದ ಇಲ್ಲವೇ ಹೊಸ ಬ್ಲೇಡಿನಿಂದ ಹೊಕ್ಕಳು ಬಳ್ಳಿಯನ್ನು ಕತ್ತರಿಸಿ ಮಗುವನ್ನು ತಾಯಂದಿರಿಂದ ಬೇರ್ಪಡಿಸಿ ಹಳೆಯ ಚಾಪೆ ಅಥವಾ ಕೌದಿಯ ಮೇಲೆ ಹಾಕುವಳು. ಈ ಮೊದಲೇ ತರಿಸಿ ಇಟ್ಟಿದ್ದ ಮಡಿಕೆಯಲ್ಲಿ ಕರುಳ ಬಳ್ಳಿಯ ಮಾಸವನ್ನು ಗಡಿಗೆಯಲ್ಲಿ ತುಂಬಿ ಮುಚ್ಚಳವನ್ನು ಮುಚ್ಚಿ ಗಡಿಗೆಯನ್ನು ಪೂಜೆ ಮಾಡಿ ಮನೆಯ ಅಂಗಳದಲ್ಲಿ ಗುಂಡಿ ತೋಡಿ ಅದರಲ್ಲಿ ಮುಚ್ಚುತ್ತಾರೆ. ಇಂದು ಬಹುತೇಕ ಆಸ್ಪತ್ರೆಗಳಲ್ಲಿ ಹೆರಿಗೆಯಾಗುತ್ತಿರುವ ಸಮಯದಲ್ಲಿಯೂ ಕೂಡ ಕರುಳ ಬಳ್ಳಿಯ ಮಾಂಸವನ್ನು ಆಸ್ಪತ್ರೆಯಿಂದ ಮನೆಗೆ ತಂದು ಹೂಳಿಡುವುದು ರೂಢಿಯಲ್ಲಿದೆ. ಈ ಕಾರ್ಯ ಮುಗಿದ ನಂತರ ತಾಯಿಗೆ ಬಿಸಿ ನೀರಿನಿಂದ ಸ್ನಾನ ಮಾಡಿಸಿ ಶೀತವಾಗದಂತೆ ತಲೆಗೆ ಕಿವಿಗೆ ಮುಚ್ಚಿಕೊಳ್ಳುವಂತೆ ಹಳೇ ಬಟ್ಟೆಗಳನ್ನು ಸುತ್ತಿ ಕಟ್ಟುತ್ತಾರೆ. ಮಗುವಿಗೂ ಸ್ನಾನ ಮಾಡಿಸಿ ಸ್ವಚ್ಚಗೊಳಿಸುತ್ತಾರೆ. ಗಂಡು ಮಗು ಹುಟ್ಟಿದರೆ ಹೊರಗೆ ಕಾದಿದ್ದವರಿಗೆ ಗೊತ್ತಾಗಲೆಂದು ಕಂಚಿನ ತಾಟು ಬಡಿಯುತ್ತಾರೆ, ಹೆಣ್ಣಾದರೆ ಮೊರವನ್ನು ಬಾರಿಸುತ್ತಾರೆ.

ಸ್ನಾನ ಮಾಡಿದ ಮಗುವನ್ನು ತಂದು ಹಾಸಿಗೆಯಲ್ಲಿ ಅಥವಾ ತೊಟ್ಟಿಲ ಅಥವಾ ತಾಯಿಯ ಬಳಿ ಮಲಗಿಸುತ್ತಾರೆ.

**ಕಿವಿ ಚುಚ್ಚುವುದು :**

ನಿರ್ಧಿಷ್ಟ ಪಡಿಸಿದ ದಿನದಂದು ಸೋದರಮಾವನಿಂದ ಮಗುವಿನ ಕಿವಿಗೆ ಮುಟ್ಟಿಸುತ್ತಾರೆ. ನಂತರ ಬಂಗಾರದಿಂದ ಕಿವಿಯನ್ನು ಚುಚ್ಚಿಸಲಾಗುತ್ತದೆ. ಇಂದಿನ ದಿನಗಳಲ್ಲಿ ಬಂಗಾರದ ಅಂಗಡಿಗೆ ಹೋಗಿ ಕಿವಿ ಚುಚ್ಚಿಸಿಕೊಂಡು ಬರುವುದು ಕಂಡುಬರುತ್ತದೆ. ಮಣೆಯ ಮೇಲೆ ತಾಯಿ ಮಗು ಕೂಡಿಸಿ ಆರತಿ ಮಾಡಿ, ಅಕ್ಷತೆ ಹಾಕಿ ಪೂಜೆ ಮಾಡುತ್ತಾರೆ. ಕಿವಿಯನ್ನು ಚುಚ್ಚಿ ನಂತರ ಬಂದವರೆಲ್ಲ ಮುಯ್ಯಿ ಮಾಡಿ, ಸಿಹಿಊಟ ಮಾಡಿ ಮನೆಗಳಿಗೆ ಹೋಗುತ್ತಾರೆ. ಕಿವಿ ಚುಚ್ಚುವುದರಿಂದ ಮಗುವಿಗೆ ಮುಟ್ಟು ದೋಷ, ಸೂತಕವಾಗದಂತೆ ತಡೆಯಲೂ (ಮಗು ಜನಿಸಿದ ಮೇಲೆ ಬಿಸಿಲಿಗೆ ಮೊರದಲ್ಲಿ ಮಲಗಿಸಿ ಇಡಲಾಗುತ್ತದೆ. ಎಳೆ ಬಿಸಿಲಿನಲ್ಲಿ ಇದ್ದರೆ ಮಗುವಿಗೆ 'ಎ' ವಿಟಮಿನ್ ದೊರೆಯುತ್ತದೆ. ಮತ್ತು ರಕ್ತ ಸಂಚಲನೆ ಆಗುತ್ತದೆ ಎಂಬ ನಂಬಿಕೆ ಇದೆ). ಹೆಣ್ಣು ಮಕ್ಕಳು ಮುಟ್ಟಾದ ಸಂದರ್ಭದಲ್ಲಿ ಅಥವಾ ಯಾವುದೇ ಊರಿಗೆ ಹೋಗುವ ಸಂದರ್ಭದಲ್ಲಿ ಮುಟ್ಟಾದವರ ನೆರಳು ಅಥವಾ ಮಗುವನ್ನು ಮುಟ್ಟಾದವರು ಮುಟ್ಟಿದರೆ ದೋಷವಾಗಿ ಮಗು ಬಳಲುತ್ತದೆ. ಹೆಚ್ಚಾಗಿ ಬೇಧಿ ಮಾಡಿಕೊಳ್ಳುತ್ತದೆ. ಇದನ್ನು ತಡೆಯಲು ಕಿವಿ ಚುಚ್ಚಿದರೆ ಇಂತಹ ದೋಷವಾಗುವುದಿಲ್ಲ ಎಂಬ ನಂಬಿಕೆ ಇಂದಿಗೂ ಇದೆ.

ಮುಟ್ಟು ದೋಷವನ್ನು ಪರಿಹಾರ ಮಾಡಲು ಹಾಗಲಕಾಯಿ ಎಲೆಯನ್ನು ತೆಗೆದುಕೊಂಡು ಮಗುವನ್ನು ಬಾಗಿಲ ಮೇಲೆ ಕೂರಿಸಿ ಅತ್ತೆಯಾದವರು ಅಥವಾ ಚಿಕ್ಕಮ್ಮನವರು ಎಲೆಗಳ ರಸವನ್ನು ನೆತ್ತಿಯ ಮೇಲೆ ಮೂರುದಿನಗಳವರೆಗೆ ಅದು ಗುರುವಾರ ಅಥವಾ ಭಾನುವಾರ ದಿನವೇ ಹಿಂಡಬೇಕಾಗುತ್ತದೆ. ಸಂಜೆ ಸಮಯದಲ್ಲಿ ಇದನ್ನು ಮಾಡಬೇಕು. ಸೊಪ್ಪನ್ನು ನೆತ್ತಿ ಮೇಲೆ ಇಟ್ಟು ಈ ರೀತಿಯಾಗಿ ಮಾಡುವುದರಿಂದ ದೋಷ ಹೋಗುತ್ತದೆ ಎಂಬ ನಂಬಿಕೆ ಇದೆ. ಇದು ಸತ್ಯವೂ ಹೌದು. ಮಗುವಿಗೆ ೫ ವರ್ಷದೊಳಗೆ ಅಥವಾ ೧ ವರ್ಷದೊಳಗೆ ಕಿವಿ ಚುಚ್ಚುವ ಕಾರ್ಯ ಮಾಡಲಾಗುತ್ತದೆ. ಕೆಲವು ಸಂಪ್ರದಾಯಗಳು ಆಧುನಿಕತೆಯ ಪ್ರಭಾವದಿಂದ ಕಡಿಮೆಯಾಗುತ್ತಿರುವುದು ಒಂದು ವಿಪರ್ಯಾಸವೇ ಆಗಿದೆ ಎಂದು ಹೇಳಬಹುದು.

**ನಾಮಕರಣ :-**

ಮಗುವನ್ನು ತೊಟ್ಟಿಲೊಳಕ್ಕೆ ಹಾಕುವುದಕ್ಕೆ ಹೆಸರಿಡುವುದು ಅಥವಾ ನಾಮಕರಣ ಎಂದು ಕರೆಯುತ್ತಾರೆ. ಮಗುವಿಗೆ ಮೂರು ತಿಂಗಳು ಇಲ್ಲವೇ ಐದನೇ ತಿಂಗಳಲ್ಲಿ ತವರು ಮನೆಯಿಂದ ಗಂಡನ ಮನೆಗೆ ಮೊಮ್ಮಗುವಿನ ಜೊತೆಗೆ ತೊಟ್ಟಿಲು ಕೊಟ್ಟು ಕಳಿಸಿ ಕೊಡುತ್ತಾರೆ. ಹೀಗೆ ಕಳುಹಿಸುವಾಗ ತಾಯಿ ಮತ್ತು ಮಗುವಿಗೆ ಬಿಸಿನೀರಿನಲ್ಲಿ ಸ್ನಾನ ಮಾಡಿಸಿ, ಹೊಸಬಟ್ಟೆಯನ್ನು ತೊಡಿಸುತ್ತಾರೆ. ಇನ್ನೇನು ತೊಟ್ಟಿಲು ಕಳಿಸಬೇಕು ಎನ್ನುವುದಕ್ಕೆ ಪೂರ್ವ ದಿನಗಳಲ್ಲಿ ಮಗುವಿಗೆ ಮುರ ಚುಚ್ಚುವ ಪದ್ದತಿ ಇದೆ. ಮಗುವಿಗೆ

ಹಾಲುಗಡಗ, ಗೆಜ್ಜೆ, ಕೊರಳ ಚೈನು ಮುಂತಾದವುಗಳನ್ನು ಉಡುಗೊರೆಯಾಗಿ ಕೊಟ್ಟು ಕಳಿಸುತ್ತಾರೆ. ಜೊತೆಗೆ ಸ್ಥಿತಿವಂತರು ಬೆಳ್ಳಿ ಬಟ್ಟಲು, ಚಮಚ ಕೊಡುತ್ತಾರೆ. ಸಾಮಾನ್ಯರು ಸ್ಟೀಲಿನ ಬಟ್ಟಲು ಚಮಚ ಮಾಪು ರೂಢಿಯಲ್ಲಿ ಬಂದಿದೆ. ಈ ಕಾರಣಕ್ಕಾಗಿಯೇ ತೊಟ್ಲು-ಬಟ್ಲು ಬಂದಾಳ ಎನ್ನುವ ಮಾತು ರೂಢಿಯಲ್ಲಿ ಬಂದಿದೆ.

ಹೀಗೆ ಹೆಸರಿಡುವ ಸಂದರ್ಭದಲ್ಲಿ ಮನೆಯ ಪಡಸಾಲೆಯಲ್ಲಿ ತೊಟ್ಟಿಲನ್ನು ಕಟ್ಟಿ ಉತ್ತರ ದಿಕ್ಕಿಗೆ, ಇಲ್ಲವೆ ಪೂರ್ವದಿಕ್ಕಿಗೆ ಮಗುವನ್ನು ಮುಖ ಮಾಡಿಸಲು ಅನುಕೂಲ ಮಾಡಿರುತ್ತಾರೆ. ತೊಟ್ಟಿಲಿಗೆ ಹೂವು, ರೇಷ್ಮೆ ಸೀರೆಗಳಿಂದ ಅಲಂಕರಿಸಿ, ಬಗೆಬಗೆಯ ಹೂವುಗಳಿಂದ ಅಲಂಕರಿಸಿ, ಬಲೂನುಗಳನ್ನು ಕಟ್ಟಿ ಅಲಂಕರಿಸುತ್ತಾರೆ. ಆಗ ತಾಯಿಯನ್ನು ಕರೆದುಕೊಂಡು ಗಂಗಾಪೂಜೆ ಮಾಡಲು ಬಾವಿಗಳಿಗೆ ಇಲ್ಲವೆ ನಳಗಳ ಬಳಿ ಕರೆತಂದು, ಸಂಪ್ರದಾಯದಂತೆ ಕೊಡವನ್ನು ತುಂಬಿ ಅಂಗನೂಲು, ಕಂಕಣಕಟ್ಟಿ ಶೃಂಗರಿಸಿ ತುಂಬಿದ ಕೊಡವನ್ನು ಮತ್ತು ಬಾವಿಯನ್ನು ಇಲ್ಲವೆ ನಳವನ್ನು ಪೂಜಿಸಿ ನೈವೇದ್ಯ ಮಾಡಿ ಮುತ್ತೈದೆಯರು ಎಲ್ಲರೂ ಕಳಸ ಬೆಳಗಿ ಮಡಿಲೊಳಗೆ ಉಡಿಅಕ್ಕಿ ತುಂಬಿಕೊಂಡು ಬಾಣಂತಿಗೂ ಉಡಿಅಕ್ಕಿ ತುಂಬಿ ಕೊಡವನ್ನು ಹೊರಿಸಿಕೊಂಡು ಗಂಗಮ್ಮನನ್ನು ಒಳಗೆ ಕರೆದೋಯ್ದು ತುಂಬಿದ ಕೊಡವನ್ನು ತೊಟ್ಟಿಲು ಕೆಳಗೆ ಇರಿಸುತ್ತಾರೆ. ಒಂದು ಗುಂಡುಕಲ್ಲು ಸಹಿತ ತೊಟ್ಟಿಲಿನ ಕೆಳಗೆ ತೆಂಗಿನಕಾಯಿಯನ್ನು ಇಟ್ಟಿರುತ್ತಾರೆ. ಮಗುವಿಗೆ ಹೊಸಬಟ್ಟೆಯನ್ನು ತೊಡಿಸಿ ತೊಟ್ಟಿಲಲ್ಲಿ ಮಲಗಿಸುತ್ತಾರೆ. ತೊಟ್ಟಿಲಿನ ನಾಲ್ಕು ಬದಿಯಲ್ಲಿಯೂ ಬಿಳಿಯ ದೋತಿ ಬಟ್ಟೆಯಲ್ಲಿ ಗುಗ್ಗರಿಯನ್ನು ಗಂಟುಕಟ್ಟಿ ಇಟ್ಟಿರುತ್ತಾರೆ. ಬಾಣಂತಿಯನ್ನು ತೊಟ್ಟಿಲಿನ ಪಕ್ಕಕ್ಕೆ ಕೂಡಿಸುತ್ತಾರೆ. ಮುತ್ತೈದೆಯರೆಲ್ಲರೂ ಕುಲದೇವತೆಯನ್ನು ತುಂಬಿದ ಕೊಡವನ್ನು ತೊಟ್ಟಿಲನ್ನು ಪೂಜೆ ಮಾಡುತ್ತಾರೆ.

ಮಗುವಿನ ಸೋದರತ್ತೆ ಅಂದರೆ ಅಪ್ಪನ ತಂಗಿಯರು ಇಲ್ಲವೆ ಅಕ್ಕಂದಿರು ಹೆಸರಿಡುವ ಪದ್ಧತಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ತೊಟ್ಟಿಲಲ್ಲಿ ಮಲಗಿಸಿದ ಮಗುವನ್ನು ಮುತ್ತ್ಯೈದೆಯರು ಎತ್ತಿ ಈ ಬದಿಯಿಂದ ಆ ಬದಿಗೆ ಐದು ಬಾರಿ ಎತ್ತಿ ಇಳಿಸಿ ಪುನಃ ತೊಟ್ಟಿಲಿನಲ್ಲಿ ಹಾಕುತ್ತಾರೆ. ನಂತರ ಸೋದರತ್ತೆಯಿಂದ ಹೆಸರಿಡುವ ಕಾರ್ಯ ನಡೆಯುತ್ತದೆ. ಊರಿನ ಬಂಧು-ಬಳಗದವರು, ಹಿರಿಯರು ಎಲ್ಲರೂ ಅಲ್ಲಿ ಸೇರಿರುತ್ತಾರೆ. ಊರಿನ ಮುತ್ತೈದೆಯರು ಜೋಗುಳ ಹಾಡನ್ನು ಹಾಡುತ್ತಾರೆ.

ಸೋದರತ್ತೆಯು ಹೆಸರಿಡುವಾಗ, ಮುಂಚಿತವಾಗಿಯೇ ಅಣ್ಣನಲ್ಲಿ ಅಥವಾ ತಮ್ಮನಲ್ಲಿ ಅಂದರೆ ಕೂಸಿನ ತಂದೆಯನ್ನು ಕರೆದು ಬೇಡಿಕೆಯನ್ನಿಡುತ್ತಾಳೆ. ತಮಾಷೆಗಾಗಿ ತಂದೆಯನ್ನು ಕರೆದು ಬೇಡಿಕೆಯನ್ನು ನಮ್ಮ ಮಗನಿಗೆ, ಮಗಳನ್ನ ಅಥವಾ ನಿನ್ನ ಮಗನಿಗೆ ನನ್ನ ಮಗಳನ್ನು ತಂದುಕೊಳ್ಳಬೇಕು ಎಂದು ಕೇಳಿಕೊಳ್ಳುವುದರ ಜೊತೆಗೆ ಬಂಗಾರದ ಆಭರಣವನ್ನು ಕೇಳುವುದು ಕಂಡು ಬರುತ್ತದೆ. ಹೀಗೆ ಹೆಸರನ್ನು ಮಗುವಿನ ಕಿವಿಯಲ್ಲಿ ಹೇಳುತ್ತಾಳೆ. ಆಗ ಆಕೆಯು ನಾಲ್ಕು ಬದಿಯಲ್ಲಿ ಇದ್ದಂತಹ ಗುಗ್ಗರಿ ಗಂಟನ್ನು ಬಾಯಲ್ಲಿ ಒಂದೊಂದಾಗಿ ಕಚ್ಚಿಕೊಂಡು ಒಂದೊಂದು ದೇವರ ಹೆಸರನ್ನು ಮಗುವಿಗೆ ಇಟ್ಟು ಹೊರ

ಹೊಸ್ತಿಲು ತನಕ ಹೋಗಿ ಬರಬೇಕು, ಮಗುವಿಗೆ ಹೆಸರಿಡುವಾಗ ಅಲ್ಲಿ ಸೇರಿದ ಮುತ್ತೈದೆಯರೆಲ್ಲ ತೊಟ್ಟಿಲು ತೂಗುತ್ತಾ, ಹೆಸರಿಡಲು ತೊಟ್ಟಿಲೊಳಗೆ ಬಾಗಿದ ಮಗುವಿನ ಅತ್ತೆಯ ಬೆನ್ನಿಗೆ ಗುದ್ದುವುದು. ಸಂಪ್ರದಾಯವಾಗಿ ನಡೆದುಕೊಂಡು ಬಂದಿರುವುದು ಕಂಡುಬರುತ್ತದೆ.

ನಾಮಕರಣದ ನಂತರ ಸೇರಿದವರೆಲ್ಲರೂ ಮಗುವಿಗೆ ಆಯರು ಮಾಡುತ್ತಾರೆ. ಬಾಣಂತಿಗೆ ಕಳಸ ಬೆಳಗಿ ಕುಪ್ಪಸದ ಕಣ ಕೊಡುತ್ತಾರೆ. ಅವರವರ ಅನುಕೂಲಕ್ಕೆ ತಕ್ಕ ಊಟದ ವ್ಯವಸ್ಥೆಯನ್ನು ಅಲ್ಲಿ ಮಾಡಿರುತ್ತಾರೆ.

**ಜವಳ :**

ಒಂದು ವೇಳೆ ಮಗುವಿನ ಜವಳ ತಂದೆಯ ಮನೆಯಲ್ಲಿಯೇ ತೆಗೆಯಿಸುವುದಾದರೆ ಮಗುವಿನ ಮಾವ, ಅಜ್ಜರನ್ನು ಕರಿಯಿಸಿ, ಅವರಿಂದಲೇ ತೆಗೆಸಲಾಗುತ್ತದೆ. ಆಗ ಜವಳ ತೆಗೆದ ವ್ಯಕ್ತಿಗೆ ಪಂಚೆ, ಅಂಗಿ, ಟವೆಲ್ಲುಗಳನ್ನು ಮತ್ತು ಹಣವನ್ನು ಉಡುಗೊರೆಯಾಗಿ ಕೊಡಲಾಗುವುದು. ಈ ಕಾರ್ಯವನ್ನು ಬಹಳ ದಿನಗಳವರೆಗೆ  ಮುಂದೂಡುವುದಿಲ್ಲ. ಒಂದು ವೇಳೆ ಜಡೆಯನ್ನು ತೆಗೆಯದೇ ಹಾಗೆ ಬಿಟ್ಟರೆ ಮಗುವಿನ ಕುತ್ತಿಗೆಯ ಭಾಗ ಸರಿಯಾಗಿ ಬೆಳವಣಿಗೆಯಾಗುವುದಿಲ್ಲ ಎಂದು ನಂಬುತ್ತಾರೆ. ಮಗುವಿಗೆ ವಿವಿಧ ಒಡವೆಗಳನ್ನು ಉಡುಗೊರಿಯಿತ್ತು, ಉಡಿಗೆ ಹಾಕಿ ಕೂಸಿನೊಂದಿಗೆ ಆವಳನ್ನು ಗಂಡನ ಮನೆಗೆ ಕಳಿಸಿಕೊಡುತ್ತಾರೆ. ಗಂಡನ ಊರಿಗೆ ಹೋದ ಮೇಲೆ ಊರ ದೇವರ ಗುಡಿಯಿಂದ ತೊಟ್ಟಿಲ ಬಟ್ಟಲನ್ನು ಮೆರವಣಿಗೆಯೊಂದಿಗೆ ಮನೆಗೆ ಒಯ್ಯುತ್ತಾರೆ.  ಬಾಗಿಲಲ್ಲಿ ಕೂಸಿನ ತೊಟ್ಟಿಲು ಪೂಜೆ ಮಾಡಿ, ಕೂಸಿನ ತಾಯಿಗೆ ನಿವಾಳಿ ತೆಗೆದು ತಮ್ಮ ಮನೆ ಗೃಹಪ್ರವೇಶ ಮಾಡಿಸುತ್ತಾರೆ. ನಂತರ ತೊಟ್ಟಿಲನ್ನು ಹೊತ್ತು ತಂದು ಸೋದರ ಮಾವನಿಗೆ ಹಣ, ಉಡುಗೊರೆಕೊಟ್ಟು ಸತ್ಕರಿಸುವರು. ಇವರಲ್ಲಿಯ ಬಡವರು ಇದ್ದರೆ, ಮಗಳಿಗೆ ಸೀರೆ, ಕುಪ್ಪಸ, ಮಗುವಿಗೆ ಕುಲಾಯಿ (ಮುತ್ತಿನಿಂದ ಹಣೆದ) ಕುಂಚಿಗಿ ಕೊಟ್ಟು ಕಳಿಸುತ್ತಾರೆ. ಈ ಸಂಪ್ರದಾಯ ಮೊದಲನೆಯ ಹೆರಿಗೆಯಾದಾಗ ಮಾತ್ರ ಮಾಡುವರು. ಒಂದು ತಿಂಗಳು ನಂತರ ತವರಿಗೆ ಬಚ್ಚಲ ಬದಲಿಸಲು ಬರುವ ಪದ್ಧತಿ ಇವರಲ್ಲಿ ಎದ್ದು ಕಾಣುತ್ತಿದೆ.

ಇದೇ ಸಮಯದಲ್ಲಿ ಹುಟ್ಟಿದ ಮಗುವಿಗೆ ಗೊಬ್ಬರ, ಮೈಲಿ, ಅಮ್ಮ ಮುಂತಾದ ರೋಗ ರುಜಿನಗಳ ಬಾಧೆ ತಟ್ಟಬಾರದೆಂದು ತನ್ನ ಊರಿನ ಗ್ರಾಮದೇವತೆಗೆ ತುಪ್ಪದ ಅಥವಾ ಎಣ್ಣೆಯ ದೀಪ ಕೊಡುತ್ತಾರೆ. ಒಂದು ವೇಳೆ ಹಾಗೆ ಬಿಟ್ಟರೆ ಮಕ್ಕಳಿಗೆ ಮೈಲಿ, ಅಮ್ಮ ಕಾಣಿಸಿಕೊಂಡು ಕಾಡುತ್ತಾಳೆ ಎಂದು ನಂಬುತ್ತಾರೆ. ಅಂದು ಮಗುವಿಗೆ ಸ್ನಾನ ಮಾಡಿಸಿ, ದೇವರ ಗುಡಿಗೆ ನೈವೇದ್ಯ ಅರ್ಪಿಸಿ, ತುಪ್ಪ ಇಲ್ಲವೆ ಎಣ್ಣೆಯ ದೀಪ ಹಚ್ಚುತ್ತಾರೆ. ಇದಕ್ಕೆ 'ದೀಪ ಕೊಡುವುದು' ಎಂದು ಕರೆಯುತ್ತಾರೆ. ಇದೇ ಕಾರ್ಯ ಬೇರೆ ಬೇರೆ ಸ್ಥಳಗಳಲ್ಲಿ ಮಕ್ಕಳಿಗೆ ಮೈಲಿ ಅಮ್ಮ ಕಾಣಿಸಿಕೊಂಡರೆ ಮಗುವನ್ನು ಮೈ ತೊಳೆದು ಒನಕೆ ಮೇಲೆ ಕುಳ್ಳರಿಸಿ ಪೂಜೆ ಮಾಡಿ ಮಜ್ಜಿಗೆ ಅನ್ನ ಕಲೆಸಿ ಕೈಯಲ್ಲಿ ಊಟಕ್ಕೆ ಕೊಡುತ್ತಾರೆ. ಈ ತೆರನಾಗಿ ಮಾಡಿದರೆ

ಕಾಣಿಸಿಕೊಂಡ ಅಮ್ಮ ಗುಣಮುಖವಾಗುತ್ತದೆಂದು ನಂಬಿಕೆಯಿದೆ. ಆದರೆ ಈ ಎಲ್ಲಾ ವಿಧವಾದ ಪದ್ಧತಿಗಳನ್ನು ಮಾಡಿಯೂ ಸಹ ಆಸ್ಪತ್ರೆಗೆ ಹೋಗಿ ಬಿ.ಸಿ.ಜಿ. (B.C.G.)ಮತ್ತಿತರ ಸೂಜಿ ಹಾಗೂ ಔಷಧೋಪಚಾರ ಮಾಡಿಸುತ್ತಾರೆ.

**ಜವಳ ಇಳಿಸುವುದು (Tonsure Ceremony)**

ಈ ಸಂಸ್ಕಾರವು ನಿಗದಿತ ಅವಧಿಯೊಳಗೆ ಅಂದರೆ ಒಂದು ವರ್ಷದಿಂದ ಹಿಡಿದು ೩, ೫, ೭ ವರ್ಷದೊಳಗೆ ಮಗುವಿನ ಜವಳ (ಜಡೆ ತೆಗೆಯುವ) ಕಾರ್ಯ ಇವರ ಸಮಾಜದಲ್ಲಿ ನಡೆದು ಬಂದಿರುವ ನಿರಂತರ ಕ್ರಿಯೆ. ಮಗು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಅಥವಾ ಗರ್ಭಧರಿಸಿದ ಮೇಲೆ ತಾಯಿಯಾದವಳು ದೇವರಿಗೆ ಮಗುವಿನ ಜಡೆಯನ್ನು ಹರಕೆ ಹೊತ್ತಿಕೊಳ್ಳುವುದು ಈ ಜನರಲ್ಲಿ ಸಾಮಾನ್ಯವಾಗಿಬಿಟ್ಟಿದೆ. ಈ ಜವಳವನ್ನು ಮನೆ ದೇವರ ಹೆಸರಿನಲ್ಲಿ ತೆಗೆಯುತ್ತಾರೆ. ಕೆಲವೊಂದು ಕಡೆ ಹೆಣ್ಣು ಗಂಡು ದೇವರಿಗೆ ಜಡೆಯನ್ನು ಬಿಡುತ್ತಾರೆ. ಜವಳ ತೆಗೆಯುವ ಕಾರ್ಯ ಮಗುವಿನ ಮಾವ ಇಲ್ಲವೇ ತಾಯಿ ಸಂಬಂಧವಿರುವ ಮಾವ ಅಥವಾ  ಗಂಡಂದಿರ ಅಂದರೆ ತಂದೆಯ ಸಂಬಂಧಿಕರಿಂದ ಈ ಕಾರ್ಯ ನೆರವೇರುವುದು. ತವರು ಮನೆಯವರು ತಾಯಿ ಮಗುವಿಗೆ ಹೊಸ ಬಟ್ಟೆಯನ್ನು ತಂದು ಉಡಿಸುತ್ತಾರೆ.  ಇದೇ ಸಮಯದಲ್ಲಿ ಸೋದರ ಮಾವನಿಗೆ ಹೊಸ ಬಟ್ಟೆಯನ್ನು ಕೊಡುತ್ತಾರೆ. ಆ ದಿನ ಮನೆಯಲ್ಲಿ ಅಥವಾ ದೇವರ ಗುಡಿಯಲ್ಲಿಯಾಗಲಿ ದೇವರಿಗೆ ನೈವೇದ್ಯವನ್ನು ಮಾಡುತ್ತಾರೆ. ಸೋದರಮಾವನಾದವನು ಒಂದು ಕರಿಕಂಬಳಿಯನ್ನು ತೆಗೆದುಕೊಂಡು ಅದರಲ್ಲಿ ಅಕ್ಕಿಯ ಕಾಳನ್ನು ಹಾಕಿ ಹೊಸಕ್ಕಿಯನ್ನು ಹೊಸಿಸುತ್ತಾರೆ. ಅದರ ಮೇಲೆ ಮಗುವನ್ನು ಕೂರಿಸುತ್ತಾರೆ. ಅಕ್ಕಿಯ ಜೊತೆಯಲ್ಲಿ ಐದು ವಿಳ್ಯದೆಲೆ ತೆಗೆದುಕೊಂಡು ಅದರಲ್ಲಿ ಅಡಿಕೆ, ಅರಿಶಿಣ, ಕೊಬ್ಬರಿ, ಉತ್ತುತ್ತಿ ಮುಂತಾದ ಐದು ತರಹದ ವಸ್ತುಗಳನ್ನು ಹಾಕುತ್ತಾರೆ. ಅದರಲ್ಲಿ ಒಂದು ವಿಳ್ಯದೆಲೆಯನ್ನು ತೆಗೆದುಕೊಂಡು ಮಗುವಿನ ಮುಂಗೈಗೆ ಕಂಕಣ ಕಟ್ಟಿ ಇನ್ನೊಂದು ಎಲೆಯನ್ನು ತೆಗೆದು ಅದನ್ನು ಅರ್ಧಕತ್ತರಿಸಿ ಮಗುವಿನ ತಲೆಗೂದಲಿಗೆ ಮುಟ್ಟಿಸಿ, ನಂತರ ಐದು ತಲೆಗೂದಲನ್ನು ಎಣಿಸಿ ಸೋದರಮಾವ ಕತ್ತರಿಸುವುದು ವಾಡಿಕೆ. ಈ ರೀತಿ ಕತ್ತರಿಸಿದ ಕೂದಲನ್ನು ಒಂದು ಹೊಸ ಬಟ್ಟೆಯಲ್ಲಿ ಹಾಕಿ ಅದರ ಜೊತೆಯಲ್ಲಿ ಎಲೆ, ಅಡಿಕೆ, ಸ್ವಲ್ಪ ಕಾಣಿಕೆ ಮುಂತಾದವುಗಳನ್ನು ಹಾಕಿ ಅದನ್ನು ನದಿ ಇಲ್ಲವೇ ಹಳ್ಳ ಅಥವಾ ಹರಿಯುವ ನೀರಿನಲ್ಲಿ ಬಿಡುತ್ತಾರೆ. ನಂತರ ದೇವರ ಗುಡಿಯ ಆವರಣದಲ್ಲಿ ಹೊಸ ಅಡುಗೆಯನ್ನು ಮಾಡಿ ದೇವರಿಗೆ ಪೂಜೆಯನ್ನು ಸಲ್ಲಿಸಿ ಬಂದವರೆಲ್ಲ ಒಟ್ಟಿಗೆ ಸೇರಿ ಊಟ ಮಾಡುತ್ತಾರೆ.

**ಋತುಮತಿ :**

ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಜನನದ ಸೂತಕದಂತೆಯೇ, ಈ ಋತುಮತಿಯ ಸೂತಕವನ್ನು ಬಹಳ ಕಟ್ಟುನಿಟ್ಟಾಗಿ ಆಚರಿಸುತ್ತಿದೆ. ಸೂತಕವೆಂದರೆ, ಇದರಿಂದ ಮನೆಯು

ಮೈಲಿಗೆಯಾಯಿತೆಂದೂ ಈ ಮೈಲಿಗೆ ಕಳೆಯಬೇಕಾದರೆ ಮನೆಯನ್ನೆಲ್ಲಾ ಚೊಕ್ಕಟವಾಗಿ ಅವರ ಮನೆ ದೇವತೆಯ ಗುಡಿಯನ್ನು ಸುಣ್ಣ ಬಣ್ಣಗಳಿಂದ ಶುದ್ಧಗೊಳಿಸಿ ಒಂದು ನಿರ್ದಿಷ್ಟಪಡಿಸಿದ ದಿನ ಕುಲ ಪುರೋಹಿತರಿಂದ ಪೂಜಾ ವಿಧಾನಗಳನ್ನು ಆಚರಿಸುತ್ತಾರೆ. ಅಲ್ಲಿಗೆ ಸೂತಕ ಪರಿಹಾರವಾಯಿತೆಂದು ನಂಬಿಕೆ ಉಳ್ಳವರಾಗಿದ್ದಾರೆ. ಈ ಸೂತಕದ ಸಮಯದಲ್ಲಿ ಯಾವುದೇ ದೇವರಿಗೂ ಪೂಜಾದಿಗಳನ್ನು ಮಾಡುವುದಿಲ್ಲ. ತಮ್ಮ ಕುಲದ ಕುಟುಂಬಗಳನ್ನು ಬಿಟ್ಟು ಬೇರೆಯವರ ಮನೆಗೆ ಹೋಗುವುದಿಲ್ಲ. ಈ ಸೂತಕವೂ ಕೇವಲ ಒಂದು ಮನೆಗೆ ಸಂಬಂಧಿಸುವುದಲ್ಲ. ಸೂತಕದ ಮನೆಯ ರಕ್ತ ಸಂಬಂಧಿ ಕುಟುಂಬಗಳಿಗೂ ಸಂಬಂಧಿಸಿರುತ್ತದೆ. ಅವರೂ ಸಹ ಸೂತಕವನ್ನು ಕಳೆದುಕೊಳ್ಳಬೇಕು. ಸೂತಕವನ್ನು ತೆಗೆದ ಮೇಲೆ ದೇವರಿಗೆ ಪೂಜೆ ಮಾಡಲಾಗುತ್ತದೆ.

ಹೆಣ್ಣು ಋತುಮತಿಯಾದಾಗ ತನ್ನ ಬದುಕಿನಲ್ಲಿ ಮೊಟ್ಟ ಮೊದಲ ಬಾರಿಗೆ ಜೈವಿಕ ಬದಲಾವಣೆಗಳನ್ನು ಅನುಭವಿಸುತ್ತಾಳೆ. ಹುಡುಗಿ ಜೀವೋತ್ಪಾದನೆಗೆ ಸಿದ್ಧಳಾದುದನ್ನು ಸೂಚಿಸುವ ಪ್ರಾಯ ಒಂದು ಋತುಮತಿಯಾದಾಗ ಕೆಲವು ನಿಯಮಗಳು ಅಥವಾ ಕಟ್ಟುಕಟ್ಟಳೆಗಳು ಹಿಂದಿನ ಕಾಲದಲ್ಲಿ ನಡೆಯುತ್ತಿತ್ತು. ಇಂದು ಸಹ ಅಲ್ಪಸ್ವಲ್ಪ ಬದಲಾವಣೆಗಳು ಕಂಡುಬರುವುದುಂಟು. ಇಂದಿನ ಕಾಲದಲ್ಲಿ ಕೆಲವರು ಋತುಮತಿಯ ಕಾರ್ಯವನ್ನು ಮಾಡುವುದಿಲ್ಲ ಮುಂದೆ ಮದುವೆಗೆ ಮುಂಚೆಯೇ ಈ ಕಾರ್ಯಕ್ರಮವನ್ನು ಮಾಡಿ ಮದುವೆಯನ್ನು ಮಾಡಲಾಗುತ್ತದೆ. ಹಿಂದೆ ಋತುಮತಿಯಾದಾಗ ಬೇರೆಯದೇ ಗುಡಿಸಿಲಿನಲ್ಲಿ ಇಡುತ್ತಿದ್ದರು ಎಂದು ತಿಳಿಸಲಾಗುತ್ತದೆ. ಮೈನೆರೆದ ಸಂದರ್ಭದಲ್ಲಿ ಹೆಣ್ಣು ಎಲ್ಲಿಗೂ ಹೋಗದೇ ಯಾರ ಕಣ್ಣಿಗೂ ಬೀಳದಂತೆ ನೋಡಿಕೊಳ್ಳಲಾಗುತ್ತದೆ. ಹೊರಗೆ ಹೋಗಬೇಕಾದರೆ ಬೆಳಿಗ್ಗೆ ಬೇಗನೇ ಎದ್ದು ಹೋಗಬೇಕು ಅಥವಾ ರಾತ್ರಿ ಸಮಯದಲ್ಲಿ ಹೋಗಬೇಕಾಗುತ್ತದೆ. ಅಂದರೆ ಯಾರ ಕಣ್ಣಿಗೂ ಬೀಳಬಾರದೆಂಬ ನಂಬಿಕೆ ಇದೆ. ಇದು ಅವಳ ಪಾಲಿಗೊಂದು ಸೆರೆಮನೆಯಾದರೂ, ಮನೆ ಮಂದಿಗೆಲ್ಲಾ ಸಂಭ್ರಮ ಸಂತೋಷದ ವಿಷಯವಾಗಿರುತ್ತದೆ.

ಮೈನೆರೆದ ದಿನದಂದು ಹುಡುಗಿಗೆ ಕೋಣೆಯ ಮೂಲೆಯಲ್ಲಿ ಕೂರಿಸಿ, ಮುತ್ತೈದೆಯರಿಗೆ ಅಥವಾ ಅತ್ತೆ ಇಲ್ಲವೇ ಅಕ್ಕನ ಕೈಯಿಂದ ಹಾಲು, ತುಪ್ಪ, ಮೊಸರು, ಎಣ್ಣೆ ಅರಿಶಿನ ಮೊದಲಾದವನ್ನು ಮೈಗೆಲ್ಲ ಹಚ್ಚಿ ೫ ಜನ ಮುತ್ತೈದೆಯರಿಂದ ಅವಳಿಗೆಮಂಗಳ ಸ್ನಾನ ಮಾಡಿಸುತ್ತಾರೆ. ಅರಿಶಿನದ ನೀರು ಬಿದ್ದ ಮೇಲೆ ಅವಳು ಎಲ್ಲಿಗೂ ಹೋಗುವಂತಿಲ್ಲ. ಹಸಿ ಮೈ ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಅವಳಿಗೆ ಕೈಯಲ್ಲಿ ಒಂದು ಕಬ್ಬಿಣದ ಕತ್ತಿ, ನಿಂಬೆಹಣ್ಣು ಕೊಡಲಾಗುತ್ತದೆ. ಅವಳಿಗೆ ಪ್ರತ್ಯೇಕವಾದ ಹಾಸಿಗೆ, ಊಟದ ತಟ್ಟೆ, ಕುಡಿಯಲು ನೀರು ಪ್ರತ್ಯೇಕವಾಗಿ ನೀಡಲಾಗುತ್ತದೆ. ಕಸಬರಿಕೆಯನ್ನು ಅವಳ ತಲೆಯ ದಿಂಬಿಗೆ ಇಡಲಾಗುತ್ತದೆ. ಇದರಿಂದ ಅವಳಿಗೆ ಯಾವುದೇ ದುಷ್ಟಶಕ್ತಿಯು ತಗಲಬಾರದೆಂದು ಕೆಟ್ಟ ಕನಸು ಬೀಳಬಾರದೆಂದು ಈ ರೀತಿ ಮಾಡಲಾಗುತ್ತದೆ. ಇದಕ್ಕೆ ಏರ್ಯ ಚಂದ್ರಪ್ರಭಾ ಕೆ.ರೈ. ಅವರು 'ಸೌಂದರ್ಯವರ್ಧಕ' ಎಂದು ತಿಳಿಸುತ್ತಾರೆ. ಹೆಣ್ಣಿಗೆ ಅರಿಶಿನ ಚಂದವಾಗಿರುತ್ತದೆ. ಕಳೆಯು ಬರುತ್ತದೆ.

ಅರಶಿನದಲ್ಲಿ ಔಷಧೀಯ ಗುಣವೂ ಹೊಂದಿದೆ. ಇವಳನ್ನು ಋತುಮತಿ, ಪುಷ್ಪವತಿ, ಮೊದಲಾದ ಹೆಸರಿನಲ್ಲಿ ಕರೆಯಲಾಗುತ್ತದೆ.

ಋತುಮತಿಯಾದ ಹುಡುಗಿಗೆ ಮೂರು ದಿನಗಳವರೆಗೆ ಸಿಹಿ ಪದಾರ್ಥಗಳನ್ನು ಕೊಡುತ್ತಾರೆ. ಅಕ್ಕ ಪಕ್ಕದವರು ಸಹ ಹುಡುಗಿಗೆ ತಮ್ಮ ಕೈಲಾದ ಆಹಾರವನ್ನು ತಂದು ಕೊಡುತ್ತಾರೆ. ಈ ಸಂದರ್ಭದಲ್ಲಿ ಋತುಮತಿಯಾದ ಮನೆಗೆ ಪ್ರವೇಶಿಸುವಂತಿಲ್ಲ. ಏಕೆಂದರೆ ಆ ಮನೆಯ ಸೂತಕ ಅಥವಾ ಮುಡುಚಟ್ಟು ಆಗಿರುತ್ತದೆ. ಇವಳಿಗೆ 'ಕಾರದಚ್ಚು' (ಋತುಮತಿಯಾದ ಹುಡುಗಿಗೆ ಬೆಲ್ಲ, ಕೊಬ್ಬರೆ ಮತ್ತು ಉತ್ತತ್ತಿ, ಶುಂಠಿ, ಯಾಲಕ್ಕಿ ಹಾಕಿ ಕುಟ್ಟಿದಂತಹ ಪದಾರ್ಥಕ್ಕೆ 'ಕೊಬ್ಬರಿ ಕಾರ' ಎಂದು ಕರೆಯುತ್ತಾರೆ. ಅದಕ್ಕೆ ತುಪ್ಪ ಸೇರಿಸಿ ತಿನ್ನಲು ಪ್ರತಿದಿನ ೨ ಬಾರಿ ಕೊಡಲಾಗುತ್ತದೆ. ಏಕೆಂದರೆ ಅವಳಿಗೆ ರಕ್ತ ವೃದ್ಧಿಯಾಗಲಿ ಮತ್ತು ಶಕ್ತಿ ಬರಲೆಂದು) ಮೂರು ದಿನಗಳ ನಂತರ ಕೊಡಲಾಗುತ್ತದೆ. ಮನೆಯನ್ನು ೯ ಅಥವಾ ೧೬ ದಿನ ಶುದ್ಧ ಮಾಡಿದ ಮೇಲೆ ಮನೆಯೊಳಗೆ ಬೇರೆಯವರಿಗೆ ಪ್ರವೇಶ ಮಾಡಲಾಗುತ್ತದೆ. ಹಿಂದಿನ ಕಾಲದಲ್ಲಿ ಮನೆಯ ಹೊರಗೆ ಅಂಗಳದಲ್ಲಿ ಗುಡಿಸಲು ಹಾಕಿ ಸೂತಕ ತೆಗೆಯುವವರೆಗೆ ಅಲ್ಲಿಯೇ ಇರಬೇಕಾಗುತ್ತಿತ್ತು. ಈ ದಿನಗಳಲ್ಲಿ ಮನೆಯೊಳಗೆ ಒಂದು ಮೂಲೆಯಲ್ಲಿ ಕೂರಿಸುತ್ತಾರೆ. ಕೆಲವರು ಸೋಬಾನೆ ಪದಗಳನ್ನು ಹಾಡುತ್ತಾರೆ. ಹಿರಿಯರು ಹೋದಂತೆಲ್ಲಾ ಸಾಹಿತ್ಯವೂ ಅವರ ಹಿಂದೆಯೇ ಹೋಯಿತು ಎಂದು ಹೇಳಬಹುದು. ಆಸಕ್ತಿ ಇಲ್ಲದಿರುವುದು, ಹಿರಿಯರು ಹೇಳಿದ್ದನ್ನು ಸರಿಯಾಗಿ ಆಲಿಸದೇ ಇರುವುದು ಕಲಿಯದಿರಲೂ ಕಾರಣವಾಗಿದೆ. ಕ್ಷೇತ್ರ ಕಾರ್ಯದಲ್ಲಿ ಹೋದಾಗ ಹಾಡು ಹೇಳಿಯೆಂದು ಕೇಳಿದರೆ ನಮಗೆ ಬರುವುದಿಲ್ಲ. ನಮ್ಮ ಅಜ್ಜಿಗೆ ಬರುತ್ತದೆ ಎಂದು ಉತ್ತರ ನೀಡುತ್ತಾರೆ. ನಾಚಿಕೆ ಸ್ವಭಾವದವರು ಹೇಳಲು ಹಿಂದೆ ಮುಂದೆ ಮಾಡುವುದು ಕಂಡುಬರುತ್ತದೆ ಎಂದು ಉತ್ತರ ನೀಡುತ್ತಾರೆ. ೫ನೇ ದಿನಗಳಲ್ಲಿ ಸ್ನಾನ ಮಾಡಿಸಿ, ಗಂಗೆ ಪೂಜೆಯನ್ನು ಮಾಡಿಸುತ್ತಾರೆ. ಕೆಲವರು ೧೬ನೆಯ ದಿನದ ಮುಂಜಾನೆಯಲ್ಲಿ ಮಾಡುತ್ತಾರೆ. ನೀರಿನ ಬಿಂದಿಗೆ ತೆಗೆದುಕೊಂಡು ಹೋಗಿ ಬಾವಿಗೆ ಅಥವಾ ಬೋರ್‌ವೆಲ್‌ಗಳಿಗೆ ಪೂಜೆ ಮಾಡಿ ನೀರಿನೊಂದಿಗೆ ಮನೆಗೆ ಬರುತ್ತಾರೆ. ಕೆಲವರು ಮನೆಯಲ್ಲಿಯೇ ನಲ್ಲಿಗಳಿಗೆ ಪೂಜೆಯನ್ನು ಮಾಡುತ್ತಾರೆ. ನಂತರ ಮನೆಗೆ ಸುಣ್ಣ ಬಳಿದು, ಮನೆ ಸಾರಿಸಿ, ಗೋಮೂತ್ರದಿಂದ ಮನೆಯನ್ನು ಚಿಮುಕಿಸಿ ಶುದ್ಧ ಮಾಡಿ, ಪೂಜೆಯನ್ನು ಮಾಡಲಾಗುತ್ತದೆ. ೧೬ನೇ ದಿನ ಮುಂಜಾನೆಯೇ ಎದ್ದು ಮುಳ್ಳುಗಿಡವನ್ನು ಮುಟ್ಟಿ ಅವಳಿಂದ ಪೂಜೆ ಮಾಡಿಸಿ ಅದನ್ನು ಕತ್ತರಿಸಿಕೊಂಡು ಹಾಕಿ ಬರುತ್ತಾರೆ. ಏಕೆಂದರೆ ಯಾವುದಾದರೂ ದೋಷವಿದ್ದರೆ ಆ ಗಿಡಕ್ಕೆ ಹೋಗುತ್ತದೆ ಎಂಬ ನಂಬಿಕೆ ಇದೆ. ಈ ದಿನಗಳಲ್ಲಿ ಅವರು ಚಿಕ್ಕ ಮಕ್ಕಳನ್ನು ಎತ್ತಿಕೊಳ್ಳಬಾರದು, ಇದರಿಂದ ಮಗುವಿಗೆ ಮುಟ್ಟುದೋಷವಾಗುತ್ತದೆ ಅಥವಾ ಮಗು ಒಣಗಿಕೊಂಡು ಹೋಗುತ್ತದೆ ಎಂಬ ನಂಬಿಕೆ ಇದೆ. ಋತುಮತಿಯಾದ ಹುಡುಗಿಗೆ ಪ್ರತಿದಿನವೂ ಸ್ನಾನ ಮಾಡಿಸಲಾಗುತ್ತದೆ. ಮೈಲಿಗೆ ಬಟ್ಟೆಯನ್ನು ಅಗಸರಿಗೆ ಕೊಡಲಾಗುತ್ತದೆ. ಅವರಿಗೆ ಕಾಣಿಕೆ ಅಥವಾ ಅಕ್ಕಿ, ಬೆಲ್ಲ, ಕೊಬ್ಬರಿ ಬಟ್ಟಲು, ಉತ್ತತ್ತಿ, ಬೆಳ್ಳುಳ್ಳಿ ಇಟ್ಟು ಕೊಡಲಾಗುತ್ತದೆ.

ಒಂಬತ್ತು ದಿನ ಅಥವಾ ಹದಿನಾರು ದಿನ ಹುಡುಗಿಯನ್ನು ಎಬ್ಬಿಸುವ ಕಾರ್ಯ ಇರುತ್ತದೆ. ಆ ದಿನಗಳಲ್ಲಿ ಮನೆಯವರಿಗೆ ಅಥವಾ ಬಂಧುಮಿತ್ರರಿಗೆ ಸಡಗರವಾಗಿರುತ್ತದೆ. ಸಂಬಂಧಿಕರಿಗೆಲ್ಲ ಹೇಳಿ ಕಳಿಸಿರುತ್ತಾರೆ. ಮೊದಲ ಸೀರೆಯು ತವರು ಮನೆಯವರದಾಗಿರುತ್ತದೆ. ನಂತರ ಅಜ್ಜಿ ಅಥವಾ ಅತ್ತೆ ಮಡಿಲಿಗೆ 'ಉಡಕ್ಕಿ' ತುಂಬುತ್ತಾರೆ. (ಮಡಿಲಕ್ಕಿ: ಅಕ್ಕಿ, ೨ ಕೊಬ್ಬರಿ ಬಟ್ಟಲು, ಬೆಲ್ಲದ ಚೂರು, ಉತ್ತತ್ತಿ, ೨ ಎಲೆ, ೨ ಅಡಿಕೆ, ಸೀರೆ, ಕುಪ್ಪಸ, ಬಳೆ, ಹೂವು, ಮಡಿಲಿಗೆ ಇಡಲಾಗುತ್ತದೆ). ಇದನ್ನು ಶಾಸ್ತ್ರೋಕ್ತವಾಗಿ ಮಾಡಲಾಗುತ್ತದೆ. ಇಂದಿನ ದಿನಗಳಲ್ಲಿ ಈ ಕಾರ್ಯಕ್ರಮವನ್ನು ವೈಭವವಾಗಿ ಮಾಡುವವರೂ ಇದ್ದಾರೆ, ಸಾಧಾರಣವಾಗಿ ಮಾಡುವವರೂ ಕಂಡು ಬರುತ್ತಾರೆ. ನಂತರ ಬಂದವರೆಲ್ಲರೂ ಕೈಲಾದ ಬಟ್ಟೆ ಬರೆ, ಉಡುಗೊರೆ, ಬಂಗಾರದ ವಸ್ತು ಕೊಟ್ಟು , ಸಿಹಿ ಊಟ ಮಾಡಿಕೊಂಡು ಹೋಗುತ್ತಾರೆ.

ಋತಮತಿಯಾದ ಹುಡುಗಿಯನ್ನು ಹಿಂದೆ ಸ್ನಾನ ಮಾಡಲು ಮನೆಯ ಪಕ್ಕದಲ್ಲಿಯೇ ಗುಂಡಿಯನ್ನು ತೆಗೆದು ಸ್ನಾನ ಮಾಡಿಸುತ್ತಿದ್ದರೂ, ೫ ನೇ ದಿನದ ನಂತರ ಗುಂಡಿಯನ್ನು ಮುಚ್ಚಿ ಪೂಜೆ ಮಾಡಬೇಕೆಂದು ನಿಯಮವಿದೆ. ಇಂದು ಆಧುನಿಕತೆಯ ಪ್ರಭಾವದಿಂದ ಬಚ್ಚಲು ಮನೆಗಳು ಇರುವುದರಿಂದ ಗುಂಡಿ ತೋಡುವ ಅವಶ್ಯಕತೆ ಇಲ್ಲವಾಗಿದೆ. 'ದೊಡ್ಡೋಳಾದ್ಲು' ಎಂದು ಹೇಳಲಾಗುತ್ತದೆ. ನಂತರ ಬಂದ ಎಲ್ಲಾ ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆದುಕೊಳ್ಳುತ್ತಾರೆ. ಬಂದವರೆಲ್ಲ ಕಡಲೆ, ಸಿಹಿ ಪದಾರ್ಥ ತೆಗೆದುಕೊಂಡು ಬಂದಿರುತ್ತಾರೆ. ಬಹುಪಾಲು ಜನರು ಒಣಕೊಬ್ಬರಿ, ಹಣ್ಣು, ಎಳ್ಳಿನಿಂದ ತಯಾರಿಸಿದ ಅಡುಗೆ ಪದಾರ್ಥಗಳನ್ನು ಹುಡುಗಿಗೆ ಉಣಬಡಿಸುತ್ತಾರೆ. ಪ್ರೌಢಾವಸ್ಥೆಯ ಕಾಂತಿ ಹೊರಹೊಮ್ಮಲು ಇದು ಸಹಾಯಕವಾಗುತ್ತದೆ.

**ಶುಕ್ರವಾರದ ದಿನ ಮೈನೆರೆತಾಳೆ**

**ಅಮಪ್ಪ ಹೋರನ ಬೆಸಗೊಂಡು ಕೇಳ್ಯಾನೆ**

**ನೆರೆತ ಗಳಿಗೆಯ**

**ನೆರೆತ ಗಳಿಗೆಯ ಕೇಳಿದರೆ**

**ಹುಟ್ಟಿದ ಮನೆಗೆ ಜಯ ಜಯ**

ಋತುಮತಿಯಾದ ಬಗೆಗೆ ಜೋಯಿಸರಲ್ಲಿ ಕೇಳುತ್ತಾರೆ. ಈ ಹುಟ್ಟಿದ ಮನೆಗೆ ಯಾವುದಾದರೂ ದೋಷ ಇದ್ದರೆ ಪರಿಹಾರ ಕಂಡುಕೊಳ್ಳಲು ಈ ರೀತಿ ಮಾಡಲಾಗುತ್ತದೆ. ದಾನವನ್ನು ಬ್ರಾಹ್ಮಣರಿಗೆ ಕೊಡಲಾಗುತ್ತದೆ.

**ಮದುವೆ :**

ವಿವಾಹವು ಆದಿಕಾಲದಿಂದಲೂ ಬೆಳೆದು ಬಂದಿರುವ ಮಾನವ ಜೀವಿಯ ಒಂದು ಅವಿಭಾಜ್ಯ ಅಂಗವಾದ ಸಾಮಾಜಿಕ ಸಂಸ್ಥೆ. ಇದು ಮಾನವನ ಲೈಂಗಿಕ ತೃಪ್ತಿ ಮತ್ತು ಸಂತಾನೋತ್ಪತ್ತಿಯ ದ್ಯೋತಕವಾಗಿದೆ. ವಿವಾಹವು ಸಮಾಜದಲ್ಲಿ ಸಾರ್ವತ್ರಿಕವಾದುದು. ಜನಾಂಗದ ಉದ್ಧಾರಕ್ಕೋಸ್ಕರ ಈ ವಿವಾಹ ಸಂಸ್ಥೆ ಹುಟ್ಟಿ ಬೆಳೆದು ಮುಂದುವರಿಯುತ್ತಿದೆ. ಸ್ತ್ರೀ ಪುರುಷರಲ್ಲಿ ನಿರಂತರ ಅನ್ಯೋನ್ಯ

ಸಂಬಂಧವನ್ನು ಉಂಟುಮಾಡುವುದೇ ಈ ವಿವಾಹದ ಉದ್ದೇಶವಾಗಿದೆ ಎಂದು ತಿಳಿಸಿದ್ದಾರೆ. ಹಿಂದೂ ಧರ್ಮದ ಪ್ರಕಾರ ವಿವಾಹವು ಜೀವನದ ಅತಿ ಮುಖ್ಯವಾದ ಸಂಸ್ಕಾರಗಳಲ್ಲೊಂದಾಗಿದೆ. ಈ ಸಂಸ್ಕಾರವನ್ನು ಹೊಂದದೆ ಮುಕ್ತಿಯು ಸಿಕ್ಕಲಾರದು ಎಂಬ ನಂಬಿಕೆ ಗಾಢವಾಗಿ ಜನರಲ್ಲಿ ಬೆಳೆದು ಬಂದಿದೆ.

ಗಂಡು ಹೆಣ್ಣಿನ ಸಂಬಂಧವನ್ನು ಕಾನೂನುಬದ್ಧಗೊಳಿಸಿ, ವಂಶ ಬೆಳೆಯುವುದಕ್ಕೆ ಅನುವು ಮಾಡಿಕೊಡುವ ಪ್ರಕ್ರಿಯೆ ಮದುವೆಯ ಮೂಲಕವೇ ನಡೆಯುತ್ತದೆ ಎಂಬ ಮಾತು ಸತ್ಯಸಂಗತಿ. ಕುಟುಂಬದ ಜೀವನ ಪದ್ಧತಿಯನ್ನು ಬಹುಹಿಂದಿನಿಂದಲೂ ಕಾಣಬಹುದು. ಇವರಲ್ಲಿನ ಬೆಡಗುಗಳು ಸ್ವಗೋತ್ರದಲ್ಲಿನ ವಿವಾಹಗಳನ್ನು ಹಿಂದಿನಿಂದಲೂ ತಡೆಹಿಡಿಯುತ್ತಿದ್ದಾರೆ. ಹಿರಿಯರು ಒಪ್ಪಿದ ವಿವಾಹವನ್ನು ಮುರಿಯುತ್ತಿರಲಿಲ್ಲ. ಈಗ ತಮಗೆ ಇಷ್ಟವಾದರೆ  ಮದುವೆಯನ್ನು ಮಾಡಿಕೊಳ್ಳುತ್ತಾರೆ. ಅಂದರೆ ಅತ್ತೆ ಮಗಳು, ಅಕ್ಕನ ಮಗಳು, ಮಾವನ ಮಗಳನ್ನು ವಿವಾಹವಾಗುವುದು ಇಲ್ಲಿ ಅಧಿಕವಾಗಿ ಕಂಡುಬರುತ್ತದೆ.

ಇವರಲ್ಲಿ ಏಕಪತ್ನಿತ್ವದ ಪದ್ಧತಿ ರೂಢಿಯಲ್ಲಿತ್ತು. ಆದರೆ ಮೊದಲನೆ ಹೆಂಡತಿ ಸತ್ತರೆ ಅಥವಾ ಮಕ್ಕಳು ಆಗದಿದ್ದರೆ ಅಂತಹವರು ಮಾತ್ರ ಮದುವೆ ಆಗಬಹುದಾಗಿತ್ತು. ಇದು ಗಂಡಿಗೆ ಮಾತ್ರ ಹೆಣ್ಣಿಗೆ ಒಮ್ಮೆ ಮದುವೆಯಾದರೆ ಇನ್ನೊಮ್ಮೆ ಮದುವೆ ಆಗುವಂತಿಲ್ಲ. ಇದು ಕುಲದ ಪದ್ಧತಿಯಾಗಿದೆ. ಬಾಲ "ಧುರಯಾದರೂ ಹಾಗೆಯೇ ಇರಬೇಕಾಗುತ್ತದೆ. ಈ ಸಮುದಾಯದ ಹೆಣ್ಣು ಮಕ್ಕಳು ಮರುಮದುವೆಯಾಗಿರುವುದು ಕಂಡುಬರುವುದಿಲ್ಲ. ಸಮುದಾಯಕ್ಕೆ ಬೇರೆ ಜಾತಿಯವರನ್ನು ಸೇರಿಸಿಕೊಳ್ಳುವುದಿಲ್ಲ. ತಮಗಿಂತ ಮೇಲುಜಾತಿಯ ಹೆಣ್ಣನ್ನು ಮಾತ್ರ ಕೂಡಿಕೊಂಡರೆ ಆಕೆಯನ್ನು ಕುಲಕ್ಕೆ ತೆಗೆದುಕೊಳ್ಳಲಾಗುತ್ತದೆ. ಮೇಲುಜಾತಿಯ ಗಂಡು ಈ ಜಾತಿಯ ಹೆಣ್ಣನ್ನು ಪ್ರೀತಿಸಿದರೆ ಅಂತಹವರನ್ನು ಬೇರೆಡೆಗೆ ಸೇರಿಸಿಕೊಳ್ಳುತ್ತಾರೆ. ಗಂಡಿನ ಮನೆಯವರು ದೈವದವರ ಸಮ್ಮುಖದಲ್ಲಿಯೇ ವಿವಾಹವನ್ನು ನಿಶ್ಚಯಿಸಿ ಮದುವೆಯನ್ನು ಮಾಡುತ್ತಾರೆ. ಏಕೆಂದರೆ ಮುಂದೆ ಬರುವ ತೊಂದರೆಗಳಿಗೆ ಇವರ ಸಾಕ್ಷಿಯಾಗಿ ದೈವದವರು, ಹಿರಿಯರು ಇರುತ್ತಾರೆ. ಮುಂದೆ ಮದುವೆಯನ್ನು ಮಾಡಿಕೊಳ್ಳುತ್ತಾರೆ.

**ಹೆಣ್ಣು ನೋಡುವುದು :**

ಮೈನೆರೆದ ಮೇಲೆ ಸಮುದಾಯದವರಿಗೆ ಇಂತಹ ಮನೆಯವರ ಹುಡುಗಿ ಪ್ರಾಯಕ್ಕೆ ಬಂದಿದ್ದಾಳೆ ಎಂದು ತಿಳಿದು, ಮದುವೆಗೆ ಸಿದ್ಧ ಮಾಡಲಾಗುತ್ತದೆ. ಆ ಕಡೆಯವರಿಗೆ ಈ ಕಡೆಯವರಿಗೆ ತಿಳಿಸಿ ಹೇಳಿ ಅವರಿಗೆ ಗೋತ್ರ, ಬೆಡಗು ಕೂಡಿ ಬಂದರೆ ಅವಳನ್ನು  ನೋಡಲು ಸಿದ್ಧರಾಗುತ್ತಾರೆ. ಹೆಣ್ಣಿನ ಕಡೆಯವರಿಗೆ ಸಂಬಂಧಿಕರ ಜೊತೆ ಹೇಳಿ ಕಳಿಸುತ್ತಾರೆ. ನಂತರ ಹೆಣ್ಣಿನ ಮನೆಯವರಿಗೆ ಒಪ್ಪಿಗೆಯಾದರೆ ಹೆಣ್ಣುನೋಡಲು ಬರುತ್ತಾರೆ. ಇಂದಿನ ದಿನಗಳಲ್ಲಿ ಬುದ್ಧಿವಂತರು ಮತ್ತು ತಿಳುವಳಿಕೆ ಉಳ್ಳವರು ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತಾರೆ. ಆದರೆ ಬಹಳ ಜನರು ತಮ್ಮ ಅಭಿಪ್ರಾಯವನ್ನು

ತಿಳಿಸುವುದಿಲ್ಲ. ಏಕೆಂದರೆ ತಮ್ಮ ಮನೆಯವರು ಹೇಳಿದಂತೆ ಕೇಳಿಕೊಂಡು ಇರುತ್ತಾರೆ. ಹೆಣ್ಣು ನೋಡಲು ಹೆಣ್ಣಿಗೆ ಸಂಬಂಧವಿರುವವರು ಮತ್ತು ಗಂಡಿನ ಕಡೆಯವರು ಬಂದು ಹೆಣ್ಣು ನೋಡಿಕೊಂಡು ಹೋಗುತ್ತಾರೆ. ಇವರು ಬರುವುದಕ್ಕಿಂತ ಮೊದಲೇ ರೂಢಿಯಂತೆ ಅವಳು ಸಿದ್ಧಳಾಗಿ ಇರಲು ತಿಳಿಸಿರುತ್ತಾರೆ. ಅಕೆ ಗೊಂಬೆಯಂತೆ ಇರಬೇಕಾಗುತ್ತದೆ. ಅವರಿಗೆ ಒಪ್ಪಿಗೆಯಾದರೆ ಮುಂದಿನ ದಿನ ಬಂದು ನಿಶ್ಚಿತಾರ್ಥವನ್ನು ಮಾಡಿಕೊಂಡು ಹೋಗುತ್ತಾರೆ. ಕೆಲವು ನಂಬಿಕೆಯಂತೆ ಹುಡುಗಿಯನ್ನು ನೋಡಿಕೊಂಡು ಹೋದಮೇಲೆ ಗಂಡಿನ ಮನೆಯವರಿಗೆ ಒಳ್ಳೆಯದಾದರೆ, ಅಂತಹ ಹುಡುಗಿಯನ್ನು ಬಿಡುವುದಿಲ್ಲ. ಹೆಣ್ಣಿನ ಮನೆಯವರು ಬಡವರಾಗಿದ್ದರೂ ಸಹ ಅವರಿಗ ಮದುವೆ ಮಾಡಲು ಹಣ ಕೊಟ್ಟು ವಿವಾಹ ಮಾಡಿಕೊಳ್ಳುತ್ತಾರೆ. ಎಲ್ಲ ಮನೆಯವರು ಹಾಗಿರುವುದಿಲ್ಲ. ಮನೆಯ ಸೊಸೆಯು ಲಕ್ಷ್ಮೀ ಇದ್ದಂತೆ ಎಂಬ ಭಾವನೆ ಅವರಲ್ಲಿರುತ್ತದೆ. ಹೆಣ್ಣು ನೋಡಲು ಹಿಂದೆ ಅನೇಕ ಚಪ್ಪಲಿಗಳು ಸವೆಯಬೇಕಾಗಿತ್ತು ಎಂದು ಹುಲಿಗೆಮ್ಮಜ್ಜಿ ಹೇಳುತ್ತಾರೆ. ತಮ್ಮ ಜಾತಿಯವರು ಎಂದು ತಿಳಿದರೆ ಹೆಣ್ಣು ನೋಡಿಕೊಂಡು ವಿವಾಹ ಮಾಡುತ್ತಿದ್ದರು. ಅವಳ ಇಚ್ಛೆಯು ಹಿರಿಯರಿಂದಲೇ ನಿರ್ಧಾರವಾಗುತ್ತಿತ್ತು. ಆದರೆ ಇಂದು ಕೆಲವರು ತಮಗೆ ಇಚ್ಛೆಯಾದರೆ ಮಾತ್ರ ಮದುವೆ ಮಾಡಿಕೊಳ್ಳುತ್ತಾರೆ. ಇಲ್ಲವಾದರೆ ಇಲ್ಲ ಎಂದು ಹೇಳುತ್ತಾರೆ.

**ನಿಶ್ಚಿತಾರ್ಥ :**

ಹೆಣ್ಣು ಗಂಡಿನವರಿಗೆ ಒಪ್ಪಿಗೆಯಾದರೆ ನಂತರ ಎಲೆಶಾಸ್ತ್ರವನ್ನು ಮಾಡಲಾಗುತ್ತದೆ. ಕೆಲವರು ಮದುವೆಯ ಹಿಂದಿನ ದಿನವೇ ಇಳೇವು ಮಾಡಿಕೊಳ್ಳುತ್ತಾರೆ. ಗಂಡಿನ ಮನೆಯವರನ್ನು ಎದುರುಗೊಳ್ಳುತ್ತಾ, ನೀರು ಕೊಟ್ಟು, ಹಾಸಿದ ಕಂಬಳಿ ಅಥವಾ ಜಾಪೆಯ ಮೇಲೆ ಕೂರಿಸುತ್ತಾರೆ. ಹಿರಿಯರೆಲ್ಲರೂ ಮತ್ತು ದೈವದವರು ಸೇರಿ ಮಾತುಕತೆ ಮಾಡುತ್ತಾರೆ. ಈ ಕಾರ್ಯವನ್ನು ರಾತ್ರಿ ವೇಳೆಯಲ್ಲಿ ಮಾಡುತ್ತಾರೆ. ಕೆಲವರು ಋತುಮತಿಯಾದ ದಿನವೇ ನಿಶ್ಚಿತಾರ್ಥ ಮಾಡಿಕೊಳ್ಳುತ್ತಾರೆ. ಗಂಡಿನ ಮನೆಯವರು ನೇರವಾಗಿ ಹೆಣ್ಣಿನ ಮನೆಗೆ ಹೋಗುವುದಿಲ್ಲ. ಮೊದಲು ದೈವದವರ ಮನೆಗೆ ಹೋಗಿ ಅವರ ಜೊತೆಗೆ ನಿಶ್ಚಿತಾರ್ಥದ ಕಾರ್ಯಕ್ಕೆ ಹೋಗುತ್ತಾರೆ. ಆ ದಿನ ಹೆಣ್ಣು ನಿಶ್ಚಿತಾರ್ಥಕ್ಕೆ ತಂದ ಹಸಿರು ಸೀರೆ ಕುಪ್ಪಸ ಉಡಬೇಕಾಗುತ್ತದೆ. ಗಂಡು ಹೆಣ್ಣಿನ ಹಾರವನ್ನು ಬದಲಾಯಿಸಿ ಕೂರಿಸುತ್ತ ಮಾತುಕತೆ ನಡೆಸುತ್ತಾರೆ. ಕೊಡುಕೊಳ್ಳುವುದು ಮಾಡಿಕೊಂಡ ಹೆಣ್ಣು ಗಂಡಿಗೆ ತಂದ ವಸ್ತುಗಳನ್ನು ಅವರಿಗೆ ಕೊಟ್ಟು, ಹೆಣ್ಣಿನ ಉಡಿಗೆ ಅಕ್ಕಿ, ಕೊಬ್ಬರಿ ಬಟ್ಟಲು, ಎಲೆ, ಅಡಿಕೆ, ಕನ್ಯಾಶುಲ್ಕ ಕೊಟ್ಟು ಎಲ್ಲರ ಎದುರಿಗೆ ಮಾತನಾಡಿ ಒಪ್ಪಿಗೆಯ ನಂತರ ಮನೆಯವರ ಮತ್ತು ಗಂಡಿನ ಮನೆಯವರಿಗೆ ಬಾಯಿಗೆ ಸಕ್ಕರೆ ಸಿಹಿ ಮಾಡಿಕೊಳ್ಳುತ್ತಾರೆ. ನಂತರ ಸಂಬಂಧಿಗಳಾಗುತ್ತಾರೆ. ಎಲ್ಲರಿಗೂ ಸಕ್ಕರೆ ಹಂಚಿ, ಎಲೆ ಅಡಿಕೆ ಹಂಚಿ ನಿಶ್ಚಿತಾರ್ಥ ಮಾಡಲಾಗುತ್ತದೆ. ಅಕ್ಕ ಮತ್ತು ಸೋದರ ಮಾವನವರು ಹೆಣ್ಣಿಗೆ ಆರತಿ ಮಾಡಬೇಕಾಗುತ್ತದೆ. ಬಂದವರೆಲ್ಲರೂ ಸಿಹಿ ಊಟ ಮಾಡಿಕೊಂಡು ಮರುದಿನ ಹೋಗುತ್ತಾರೆ. ಇಂತಹ

ಕಾರ್ಯದಲ್ಲಿ ಗಂಡಸರೆಲ್ಲರೂ ತಲೆಗಳಿಗೆ ಟವಲು ಕಟ್ಟಿಕೊಳ್ಳುತ್ತಾರೆ. ಯಾವುದೇ ಕಾರ್ಯಗಳಲ್ಲಿ ಶಿಸ್ತು ಪರಿಪಾಲಿಸುತ್ತಾರೆ. ಇವರಲ್ಲಿ ಕೆಲವರು ಬ್ರಾಹ್ಮಣರನ್ನು ಕರೆತರುತ್ತಾರೆ. ಇಂದಿನ ದಿನಗಳಲ್ಲಿ ವಾದ್ಯಮೇಳಗಳು ಬದಲಾಗುತ್ತಿರುವುದರಿಂದ ಆಧುನಿಕ ವಾದ್ಯಗಳು ಪ್ರಭಾವ ಬೀರುತ್ತಿವೆ. ಸಮುದಾಯದವರು, ಸಮೀಪದ ಸಂಬಂಧದವರು, ರಕ್ತ ಬಾಂಧವರು, ಕುಲದವರು ನೆರವಾಗುತ್ತಾರೆ. ಇಂಥ ವೈವಾಹಿಕ ಸಂಬಂಧದ ಸಂಪ್ರದಾಯ ಸಾಮಾನ್ಯವಾಗಿ ಎಲ್ಲ ಮುಂದುವರೆದ ಸಮಾಜಗಳಲ್ಲಿ, ಎಲ್ಲಾ ಜನಾಂಗಗಳಲ್ಲಿಯೂ ಕಂಡುಬರುವುದು ಒಂದು ವಿಶೇಷ. ಅಕ್ಕನ ಮತ್ತು ಅತ್ತೆಯ ಮಗಳನ್ನು ಇವರು ಮದುವೆಯಾಗುತ್ತಾರೆ. ಆದರೆ ತಂಗಿಯ ಮಗಳನ್ನು ಮದುವೆಯಾಗುವುದಿಲ್ಲ.

ಹಿಂದಿನ ದಿನಗಳಲ್ಲಿ ಮದುವೆಗಳನ್ನು ೫ ದಿನಗಳವರೆಗೆ ಮಾಡುತ್ತಿದ್ದರು ೫ ನೀರು ಹಾಕಲಾಗುತ್ತದೆ. ಕುಡಿದಾಗ ಸಣ್ಣಪುಟ್ಟ ಕಾರಣಗಳಿಂದ ಜಗಳ ಮಾಡುವುದು, ಹೊಡೆದಾಡುವುದು, ಸಾಮಾನ್ಯವೇ ಆಗಿದೆ. ಹಿಂದಿನ ದಿನಗಳಲ್ಲಿ ರಾತ್ರಿ ವೇಳೆಯಲ್ಲಿ ಮದುವೆ ನಡೆಯುತ್ತಿದ್ದವು ಎಂದು ತಿಳಿಸುತ್ತಾರೆ. ಆದರೆ ಇಂದಿನ ದಿನಗಳಲ್ಲಿ ವಿವಾಹಗಳು ಹಗಲಿನಲ್ಲಿಯೇ ನಡೆಯುತ್ತವೆ. ಒಂದು ಮಹೂರ್ತವಿಟ್ಟು, ಲಗ್ನ ಪತ್ರಿಕೆ ಹಾಕಿಸಿ, ನಿಶ್ಚಿತಾರ್ಥ ಮಾಡಿ ವಿವಾಹವನ್ನು ಮಾಡುತ್ತಾರೆ. ಬ್ರಾಹ್ಮಣನಿಂದ ಹೆಸರು ಕೇಳಿಸಿ ಸರಿಹೊಂದುವ ಮುಹೂರ್ತವಿಟ್ಟು ವಿವಾಹಕ್ಕೆ ಸಿದ್ಧ ಮಾಡುತ್ತಾರೆ. ಇಲ್ಲಿ ಸರಿ ಹೊಂದದಿದ್ದರೆ ಹೆಸರನ್ನು ಬದಲಾಯಿಸುತ್ತಾರೆ ವಿನಹ ಮದುವೆ ಬಿಡುವುದಿಲ್ಲ.

**ಚಪ್ಪರ :**

ಮದುವೆಯ ಹಿಂದಿನ ದಿನವೇ ಚಪ್ಪರ ಹಾಕಲಾಗುತ್ತದೆ. ಚಪ್ಪರಗಳನ್ನು ಗಂಡು ಹೆಣ್ಣಿನ ಮನೆಗಳ ಮುಂದೆ ಹಾಕಲಾಗುತ್ತದೆ. ಕೆಲವರು ಮನೆಯ ಮುಂದೆ ಚಪ್ಪರ ಹಾಕುವುದಿಲ್ಲ ಎಂದು ಹೇಳುತ್ತಾರೆ. ಹಿಂದಿನ ಮದುವೆ ಪದ್ಧತಿಯು ಇಂದಿನ ದಿನಗಳಲ್ಲಿ ಬದಲಾಗುತ್ತಿದೆ. ಚಪ್ಪರ ಹಾಕುವಾಗ ಪೂಜೆ ಮಾಡಿ, ಕಾಯಿ ಒಡೆದ ಮೇಲೆ ಚಪ್ಪರ ಹಾಕುತ್ತಾರೆ. ಮದುವೆಯ ಚಪ್ಪರಗಳನ್ನು ಅಲಂಕರಿಸಿ ಸಿದ್ಧಗೊಳಿಸುತ್ತಾರೆ. ತೆಂಗಿನ ಗರಿ, ತಂಗಿನಕಾಯಿ ಚಪ್ಪರದ ಮಧ್ಯೆ ಕಟ್ಟಿರುತ್ತಾರೆ. ಬಾಳೆ ಗಿಡಗಳನ್ನು ಚಪ್ಪರಕ್ಕೆ ಅಲಂಕರಿಸುತ್ತಾರೆ. ಇಲ್ಲಿ ಹಾಲು ಕಂಭವೇ ಮುಖ್ಯವಾಗಿರುತ್ತದೆ. ಕೆಲವರು ಚಪ್ಪರದಲ್ಲಿ, ಗುಡಿಗಳಲ್ಲೇ ಮನೆ ಮುಂದೆ ಅಥವಾ ಕಲ್ಯಾಣ ಮಂಟಪಗಳಲ್ಲಿ ಧಾರೆ ಎರೆಯುತ್ತಾರೆ. ಗಂಡನ ಮನೆಯವರಿಗೆ ಪ್ರತ್ಯೇಕವಾದ ಮನೆಯನ್ನು ಅಥವಾ ಬಿಡಾರದ ಮನೆ ಕೊಡಲಾಗುತ್ತದೆ.

ಶ್ರೀ ಹೆಚ್.ವಿ ನಂಜುಂಡಯ್ಯನವರು ಹಿಂದಿನ ಮದುವೆ ಪದ್ಧತಿಯನ್ನು ವಿವರಿಸುತ್ತಾರೆ. ಇ.ಥರ್ಸ್‌ಟನ್ ಅವರು " On the day fixed for the marriage, two fresh huts are erected, with their doorti opening the cast, one being for the bride and the other for the bridegroom". ಎಂದು ತಿಳಿಸಿದ್ದಾರೆ. ಇಂದಿನ ಬಡವರು ಹಿಂದುಳಿದಿದ್ದರಿಂದ ಅಧಿಕವಾಗಿ ದೇವಸ್ಥಾನದಲ್ಲಿಯೇ ಮದುವೆ ಮಾಡಲಾಗುತ್ತಿದೆ. 'They observer vilya sastra, do not call in

any band of iperil, nor use of bhasinga, marriage chaplet, and some do not wen correct a marriage both' ಎಂದಿದ್ದಾರೆ.

ಹಿಂದೆ ವಾದ್ಯಗಳು ಇರುತ್ತಿರಲಿಲ್ಲ. ಆದರೆ ತಲೆಗೆ ಪೇಟ ಸುತ್ತುತ್ತಾರೆ. ಕೆಲವರು ಬಾಸಿಂಗ ಕಟ್ಟುತ್ತಾರೆ. ಕೆಲವರು ಕಟ್ಟುವುದಿಲ್ಲ. ಧಾರೆಯನ್ನು ಕುಲದ ಹಿರಿಯರೇ ನೆರವೇರಿಸುತ್ತಿದ್ದರು. ಹೆಸರು, ಕುಲದ ಬಗೆಗೆ ಬ್ರಾಹ್ಮಣರನ್ನು ಕೇಳುತ್ತಿದ್ದರು.

ಮದುವೆಯಲ್ಲಿ ಹೆಣ್ಣಿನ ಕಡೆಯವರಿಗೆ ತೆರಿಗೆ ರೂಪದಲ್ಲಿ ಗಂಡಿನ ಕಡೆಯವರು ತೆರವನ್ನು ಕೊಡುತ್ತಾರೆ. ಅದು ಸಾಕಿ ಬೆಳೆಸಿದ ತಂದೆ-ತಾಯಿಗೆ ಹೋಗುತ್ತದೆ. ತಾಯಿಯ ಅಣ್ಣ-ತಮ್ಮಂದಿರಿಗೆ ಕೊಡಲಾಗುತ್ತದೆ. ಏಕೆಂದರೆ ಎಲ್ಲರೂ (ತಾಯಿಯ ತಮ್ಮಂದಿರು ವಿವಾಹವಾಗಿದ್ದರೆ) ಮದುವೆಯಾಗಿದ್ದರೆ ಅವರಿಗೆ ಈ ಹಣವನ್ನು ಕೊಡಲಾಗುತ್ತದೆ. ಅದನ್ನು ಸೋದರಮಾವ ತೆಗೆದುಕೊಂಡು ಇನ್ನು ಸ್ವಲ್ಪ ಹಣ ಸೇರಿಸಿ ಸೊಸೆಗೆ ಯಾವುದಾದರೊಂದು ಸಾಮಾನು ಸರಂಜಾಮು ತಂದುಕೊಡಲಾಗುತ್ತದೆ. ಇಲ್ಲದೆ ತಮ್ಮಲ್ಲಿಯೇ ಇಟ್ಟುಕೊಳ್ಳಬಹುದು. ಹಿಂದೆ ತೆರದಲ್ಲಿ ಸಣ್ಣತೆರ ಮತ್ತು ದೊಡ್ಡ ತೆರ ಎಂದು ಎರಡು ಬಗೆಗಳಿದ್ದವು. ಸಣ್ಣ ತೆರದ ಮೊತ್ತ ಎಪ್ಪತ್ತೊಂದು ರೂಪಾಯಿ ಇದ್ದರೆ ದೊಡ್ಡ ತೆರದ ಮೊತ್ತ ತೊಂಬತ್ತಾರು ರೂಪಾಯಿಗಳು. ಅನುಕೂಲವಿದ್ದವರು ದೊಡ್ಡ ತೆರ ಕೊಟ್ಟರೆ, ಬಡವರು ಸಣ್ಣ ತೆರ ಕೊಡುವ ಪದ್ಧತಿ ಇದೆ. ಇಂದಿಗೂ ಸಹ ತೆರ ಕೊಡುವ ಪದ್ಧತಿಯು ಮದುವೆಯಲ್ಲಿ ಕಂಡುಬರುತ್ತದೆ.

ಹಿಂದೂ ಧರ್ಮಶಾಸ್ತ್ರಗಳ ಪ್ರಕಾರ ಪ್ರತಿಯೊಬ್ಬ ಸ್ತ್ರೀ ಪುರುಷರೂ ವಿವಾಹವಾಗಲೇಬೇಕು. ವ್ಯಕ್ತಿಯ ಜೀವನದಲ್ಲಿ ಮುಖ್ಯ ಋಣಗಳನ್ನು ತೀರಿಸಬೇಕೆಂದು ಧರ್ಮಶಾಸ್ತ್ರಗಳು ಆದೇಶಿಸುತ್ತವೆ. ದೇವ ಋಣ, ಗುರುಋಣ, ಮತ್ತು ಪಿತೃಋಣಗಳೇ ಈ ಮೂರು ಋಣಗಳಾಗಿವೆ. ಈ ಋಣಗಳನ್ನು ಕ್ರಮವಾಗಿ ಯಜ್ಞಯಾಗಾದಿ ವೇದಾಧ್ಯಯನ ಮತ್ತು ಪುತ್ರ ಸಂತತಿಗಳ ಮೂಲಕ ತೀರಿಸಬೇಕೆಂದಿದೆ. ಪುತ್ರನಿಲ್ಲದ ವ್ಯಕ್ತಿಗೆ ಅಥವಾ ಸಂತಾನ ಹೀನನಿಗೆ ಮೋಕ್ಷ ದೊರೆಯಲಾರದೆಂಬ ನಂಬಿಕೆಯು ವಿವಾಹ ಸಂಸ್ಥೆಗೆ ಧಾರ್ಮಿಕ ಸೋಂಕನ್ನು ನೀಡಿದೆ. ವಿವಾಹಗಳು ಸ್ವರ್ಗದಲ್ಲಿ ನೆರವೇರುತ್ತವೆ ಮತ್ತು ಪರಮಾತ್ಮನು ವಿವಾಹ ಸಂಸ್ಥೆಯನ್ನು ಹುಟ್ಟಿಸಿ ಬೆಳೆಸಿದನೆಂಬ ಪ್ರತೀತಿಯು. ವಿವಾಹವು ಅನಾದಿ ಹಾಗೂ ಪವಿತ್ರವಾದುದೆಂಬ ಭಾವನೆ ಜನಮನದಲ್ಲಿ ಬೇರೂರಲು ಕಾರಣವಾಗಿದೆ. ಒಂದು ಹೆಣ್ಣಿಗೆ ಒಂದು ಗಂಡನ್ನು ದೇವರು ಜೋಡಿಸಿರುತ್ತಾನೆ ಎಂದು ಹಿರಿಯರು ಹೇಳುತ್ತಾರೆ.

ಮದುವೆಯ ಹಿಂದಿನ ದಿನ ಮದುಮಗ ಅಥವಾ ಮದುಮಗಳನ್ನು ಅಲಂಕರಿಸುತ್ತಾರೆ. ಅಲ್ಲಿ ಕರಿ ಕಂಬಳಿಯಲ್ಲಿ ಸಾಸುವೆ ಕಟ್ಟೆ ರಚಿಸಿ. ಅದರ ಮೇಲೆ ಕುಳ್ಳಿರಿಸಿ. ಮೈಗೆಲ್ಲ ಅರಿಶಿನ ಹಚ್ಚಿ, ಕುಂಕುಮ ಇಟ್ಟು ಜೊತೆಗೆ ಸೊಸೆಯಾದವಳನ್ನು ಅಥವಾ ಹೆಣ್ಣಿಗೆ ತಂಗಿ ಮತ್ತು ಅಳಿಯನಾಗುವವರನ್ನು ಮದುಮಕ್ಕಳನ್ನಾಗಿ ಮಾಡಲಾಗುತ್ತದೆ. ಎಲ್ಲರೂ ಅಕ್ಷತೆ ಹಾಕಿ, ಆರತಿ ಬೆಳಗುತ್ತಾರೆ. ಅದಾದ ನಂತರ ಸುರಿಗಿ ನೀರು ಹಾಕಲು ಸಿದ್ಧರಾಗುತ್ತಾರೆ. ಹೊರಗಡೆ ಎರಡು ಒನಕೆ ಮೇಲೆ ಕುಳ್ಳಿರಿಸಿ ಸ್ನಾನವನ್ನು

ಮಾಡಿಸಿ, ಹೊಸಬಟ್ಟೆ ತೊಡಿಸಿ, ಆರತಿ ಬೆಳಗಿ ದೇವಾಲಯಕ್ಕೆ ಕರೆದುಕೊಂಡು ಹೋಗುತ್ತಾರೆ. ಅವರ ಕೈಯಲ್ಲಿ ಕತ್ತಿ ನಿಂಬೆಹಣ್ಣು ಇರುತ್ತದೆ. ಹಸಿ ಮೈಯಲ್ಲಿ ಗಾಳಿ ಸೇರಿಕೊಳ್ಳುವುದನ್ನು ತಡೆಗಟ್ಟಲು ಈ ರೀತಿ ಮಾಡಲಾಗುತ್ತದೆ. ಅದೇ ರೀತಿಯಾಗಿ ಮದುಮಗಳು ಸಿದ್ಧಳಾಗುತ್ತಾಳೆ. ಮದುವೆ ಮುಂಚೆಯೇ ಮನೆಯನ್ನು ಸ್ವಚ್ಛ ಮಾಡಲಾಗುತ್ತದೆ. ಕೆಂಪು ಮಣ್ಣು ಅಥವಾ ಸುಣ್ಣದಿಂದ ಕಲಿಸಿದ ಬಣ್ಣದಲ್ಲಿ ಇದನ್ನು ಮಾಡಲು ಯಾರ ಹೆಸರು ಬಂದಿರುತ್ತದೆಯೋ ಅವರ ಎರಡು ಕೈಗಳನ್ನು ಬಣ್ಣದಲ್ಲಿ ಅದ್ದಿ ಮನೆಯ ಗೋಡೆಯ ಮೇಲೆ ಅಥವಾ ಮನೆಯ ಸುತ್ತಲು ಗಂಡು ಹೆಣ್ಣು ಕೈಯಿಂದ ಹಚ್ಚಲಾಗುತ್ತದೆ. ಇದನ್ನು ಬ್ರಾಹ್ಮಣರಿಂದ ಕೇಳಿಸಿ ಯಾರ ಅದೃಷ್ಟ ಇರುತ್ತದೆಯೋ ಅವರಿಂದ ಈ ಕೆಲಸವನ್ನು ಮಾಡಿಸಲಾಗುತ್ತದೆ.

ಮದುವೆ ದಿನ ಬೆಳಿಗ್ಗೆ ಗಂಗೆಗೆ ಹೋಗಲಾಗುತ್ತದೆ. ಬಾವಿಗೆ ಅಥವಾ ಬೋರ್‌ವೆಲ್‌ಗೆ ಹೋಗಿ ಪೂಜೆ ಮಾಡಿಕೊಂಡು ಮದುವೆಯ ಮಂಟಪಕ್ಕೆ ಬರುವುದರೊಳಗೆ ಮಂಟಪದಲ್ಲಿ ಮದುವೆ ಸಿದ್ಧತೆ ಮಾಡಿ ಗಂಡು ಹೆಣ್ಣಿಗೆ ಸ್ನಾನ ಮಾಡಿಸಿ ತಾಳಿ ಕಟ್ಟಲು ಬಿಳಿ ಬಟ್ಟೆಯಿಂದಲೇ ಇರಬೇಕಾಗುತ್ತದೆ. ಬಾಸಿಂಗ ಇವರಲ್ಲಿ ಇರುವುದಿಲ್ಲ ಬದಲಿಗೆ ಟೋಪಿ ಧರಿಸಿರುತ್ತಾರೆ. ಬ್ರಾಹ್ಮಣರಿಂದ ಗೌರಿ ಪೂಜೆ ಮಾಡಿಸಿ ಬಿಳಿ ದಾರದಿಂದ ಸುರುಗೆ ದಾರವನ್ನು ಮಾಡಿ ಅದನ್ನು ಗಂಡಿನ ಕೊರಳಿಗೆ ಹಾಕಲಾಗುತ್ತದೆ. ಕೈಗಳಿಗೆ ಕಂಕಣ ಕಟ್ಟಿ ನಂತರ ಹೆಣ್ಣಿಗೆ ತಾಳಿ ಕಟ್ಟಲಾಗುತ್ತದೆ. ಮುಂದೆ ಕಳಸಕ್ಕೆ ಹೂ ಹಾಕಿ ಸಿಂಗರಿಸಿರುತ್ತಾರೆ. ಕಳಸದ ಚಂಬಿನ ಬಾಯಿಗೆ ಕಂಕಣ ಕಟ್ಟಿರುತ್ತಾರೆ. ಗಂಡಿಗೆ ಕಟ್ಟುವ ಕಂಕಣಕ್ಕೆ ಒಂದು ಅರಿಶಿನ ಕೊಂಬು , ಒಂದು ತಾಮ್ರದ ಉಂಗುರವನ್ನು ಕಟ್ಟಿ ಬಲಗೈಗೆ ಕಟ್ಟುತ್ತಾರೆ. ಶಾಸ್ತ್ರ ನಡೆಯುತ್ತಿರುವಾಗ ಅಲ್ಲಿ ಸೇರಿದ ಹೆಂಗಸರು ಸೋಬಾನ ಪದಗಳನ್ನು ಹೇಳುತ್ತಾರೆ. ಇಂದು ಸೋಬಾನ ಪದ ಹಾಡುವವರ ಸಂಖ್ಯೆ ಕಡಿಮೆಯಾಗಿದೆ. ಹಿಂದಿನ ಕಾಲದಲ್ಲಿ ೫ ಬಾರಿ ನೀರು ಹಾಕಲಾಗುತ್ತದೆ. ಆದರೆ ಇಂದು ಮೂರು ನೀರು ಮಾತ್ರ ಹಾಕಲಾಗುತ್ತದೆ. ಮದುವಣಗಿತ್ತಿ ಶಾಸ್ತ್ರ ಮಾಡುವಾಗ, ಧಾರೆ ಮಹೂರ್ತದ ಮೊದಲು ಗಂಡಿನ ಮನೆಯಲ್ಲಿ ಒಂದು ಬಾರಿ ನೀರು ಹಾಕಲಾಗುತ್ತದೆ. ಗಂಡು ಹೆಣ್ಣಿನ ಜೊತೆ ಕಳಸಗಿತ್ತಿ ಯಾವಾಗಲೂ ಇರುತ್ತಾರೆ. ಕಳಸ ಹಿಡಿದವಳು ಅಕ್ಕ ಇಲ್ಲವೇ ಚಿಕ್ಕಮ್ಮ ಆಗಿರುತ್ತಾಳೆ. ಅವರಿಗೆ ಪ್ರಸ್ತ ಮಾಡುವವರೆಗೆ ಜೊತೆ ಇರಬೇಕಾಗುತ್ತದೆ. ನಂತರ ಗಂಡು ಹೆಣ್ಣು ಮಾತ್ರ ಎಲ್ಲಿಗಾದರೂ ಹೋಗಬಹುದು. ಧಾರೆಯಲ್ಲಿ ಗಂಗೆಪೂಜೆ ಮಾಡಿ ತಂದಂತಹ ನೀರಿನ ಗಡಿಗೆಯನ್ನು ಪೂಜೆ ಮಾಡಲಾಗುತ್ತದೆ. ಅದನ್ನು ೫ ದಿನಗಳ ನಂತರ ಕಾಲುವೆ, ಬಾವಿಗೆ ಹಾಕಲಾಗುತ್ತದೆ. ಒಂದು ತಟ್ಟೆಯಲ್ಲಿ ಕರಿಮಣಿ, ಬಿಳಿದಾರ, ಕೊಬ್ಬರಿ ಬಟ್ಟಲು, ಬೆಲ್ಲ ಇರುತ್ತದೆ. ಗಂಡು ಹೆಣ್ಣಿನ ಕೊರಳಿಗೆ ಹವಳದ ಸರಗಳನ್ನು ಹಾಕಿರುತ್ತಾರೆ. ಮದುಮಗನಿಗೆ ಬಿಳಿ ಪಂಚೆಯು ೧೬ ಗಜ ಆಗಿರಬೇಕು. ಚಪ್ಪರಕ್ಕೆ ಅತ್ತಿಕೊನೆ, ಬಾಳೆ ದಿಂಡು, ಮಾವಿನ ಎಲೆಗಳನ್ನು ಕಟ್ಟಲಾಗುತ್ತದೆ. ಮದುವೆ ಧಾರೆಯಲ್ಲಿ ಸ್ತ್ರೀಯರು ನಾಲ್ಕು ಕಡೆ ಗಡಿಗೆ ಹಿಡಿದುಕೊಂಡು ಕುಳಿತಿರುತ್ತಾರೆ. ಮುಂದೆ ವಾದ್ಯದವರು ಇರುತ್ತಾರೆ. ಹಾಲುಗಂಭಗಳು ಇಲ್ಲಿ ಮುಖ್ಯವಾಗುತ್ತವೆ.

ಆರ್.ಇ.ಎಂಥೋವನ್ ಅವರು ಈ ಬಗೆಗೆ "Then a branch of the Khair or eatechu tree is felled and dropped into the nearest well. At midnight the five married women singing songs go to the well, and , after each has drawn a pot fall of water, take the branch out of the well the branch is then plauted opposite the front door" ಎಂದು ವಿಷಯವನ್ನು ತಿಳಿಸಿದ್ದಾರೆ.

ಹಿಂದೆ ರಾತ್ರಿ ಸಮಯದಲ್ಲಿ ಮದುವೆಗಳನ್ನು ಏಕೆ ಮಾಡುತ್ತಿದ್ದರು ಎಂದು ಕೇಳಿದರೆ, ನಮ್ಮ ಮದುವೆಗಳನ್ನು ಬ್ರಾಹ್ಮಣರು ನೋಡಬಾರದೆಂದು ರಾತ್ರಿಯಲ್ಲಿ ಮದುವೆ ಮಾಡುತ್ತಿದ್ದುದಾಗಿ ಹಿರಿಯರು ಹೇಳುತ್ತಿದ್ದರು ಎನ್ನುತ್ತಾರೆ. ಆದರೆ ಈಗ ಹೆಸರು, ಕುಲ ಮತ್ತು ಮಹೂರ್ತವನ್ನು ಕೇಳಿ ವಿವಾಹ ನಿಶ್ಚಯಿಸುತ್ತಾರೆ. ಈಗೆಲ್ಲ ರಾತ್ರಿ ಮದುವೆಗಳು ನಡೆಯುವುದಿಲ್ಲ. ಧಾರೆಯಲ್ಲಿ ಬ್ರಾಹ್ಮಣರಿಗೆ ಪ್ರವೇಶವಿದೆ. ಅತ್ತಿಗೊನೆ, ಬಾಳೆಗೊನೆ, ಮಾವಿನಕೊನೆಗಳು ಸುಖಶಾಂತಿ ಮತ್ತು ಸಮೃದ್ಧಿಯ ಸಂಕೇತವಾಗಿರುವುದರಿಂದ ಇದನ್ನು ಇಲ್ಲಿ ತರಲಾಗುತ್ತದೆ.

ಹಿಂದೆ ತಾಳಿಗೆ ಬದಲಾಗಿ ಅರಿಶಿನ ಕಟ್ಟಿದ ದಾರವನ್ನು ಅಥವಾ ಕರಿಮಣಿ ಪೋಣಿಸಿದ ದಾರವನ್ನು ಹೆಣ್ಣಿನ ಕುತ್ತಿಗೆಗೆ ಕಟ್ಟುತ್ತಿದ್ದ ಬಗೆಗೆ ದಾಖಲೆಗಳು ಇವೆ. ಇ ಥರ್ಸ್ಟನ್‌ನ ಅವರು ಈ ಬಗೆಗೆ ಒಂದು ಕಥೆಯನ್ನು ಸಂಗ್ರಹಿಸಿದ್ದಾರೆ "Once upon a time a bride groom forget to bring the tali, and he was told off to procure the necessary piece of gold from a gold smith. The parties waited and waited but the youngman did not return, since then the string of beads has been used as a marriage badge". ಇನ್ನೊಂದು ಕಥೆ ನದಿ ದಂಡೆಯ ಮೇಲೆ ಇಟ್ಟು ಬಂದಿದ್ದ ತಾಳಿಯನ್ನು ತರಲು ಹೋದಾಗ ಅದು ಕಾಣೆಯಾಗಿತ್ತಂತೆ. ಅದಕ್ಕಾಗಿ ಮತ್ತೊಂದು ಹೊಸ ತಾಳಿ ತರಲು ಹೋದ ವ್ಯಕ್ತಿ ಮರಳಲಿಲ್ಲವಂತೆ. ಆದ್ದರಿಂದ ಅರಿಶಿನ ತುಂಡು ದಾರದಲ್ಲಿ ಕಟ್ಟಿ ಹಾಕಲಾಗಿತ್ತು ಎಂದು ತಿಳಿದುಬರುತ್ತದೆ.

ತಮಿಳುನಾಡು ಪ್ರದೇಶದಲ್ಲಿರುವ ಮತ್ತು ಆಂಧ್ರಪ್ರದೇಶದಲ್ಲಿರುವ ಜನರು ಅರಿಶಿನದ ದಪ್ಪದಾರದಿಂದ ತಾಳಿಯನ್ನು ಕಟ್ಟಿಕೊಳ್ಳುತ್ತಾರೆ. ಕರ್ನಾಟಕದಲ್ಲಿ ಮಾತ್ರ ಕರಿಮಣಿ ಸರವನ್ನು ಜೊತೆಗೆ ಹವಳವು ಇರುವುದನ್ನು ನೋಡಬಹುದು. ತಂದೆ ಕಡೆ, ಅತ್ತೆ ಕಡೆ ಎರಡು ತಾಳಿ ಕಟ್ಟಲಾಗುತ್ತದೆ. ತಾಳಿ ನಂತರ ಬ್ರಾಹ್ಮಣರು ಅರುಂಧತಿ ನಕ್ಷತ್ರವನ್ನು ಆಕಾಶದಲ್ಲಿ ದಂಪತಿಗಳಿಗೆ ತೋರಿಸುತ್ತಾರೆ. ನಂತರ ಆಶೀರ್ವಾದ ಮಾಡಿ ಮದುವೆ ಊಟ ಮಾಡಿಕೊಂಡು ಮುಯ್ಯಿ ಮಾಡಿ ಹೋಗುತ್ತಾರೆ. ನಂತರ ದಂಪತಿಗಳಿಗೆ ಮನೋರಂಜನೆಗಾಗಿ ಮತ್ತೆ ಅವರಲ್ಲಿ ಅನ್ಯೋನ್ಯತೆ ಬರಲು ಬೆಲ್ಲ, ಕೊಬ್ಬರಿ, ಎಲೆ ಅಡಿಕೆಯ ಶಾಸ್ತ್ರವನ್ನು ಮಾಡಲಾಗುತ್ತದೆ. ಹಾಲಿನಲ್ಲಿ ಉಂಗುರ ಹುಡುಕುವ ಶಾಸ್ತ್ರವು ಇದೆ. ತಾಳಿಯಾದ ಮರುದಿನ ಗಂಡನ ಮನೆಯಲ್ಲಿ ಈ ಶಾಸ್ತ್ರ ನಡೆಸಿ, ಅಲ್ಲಿಯೂ ಮುಯ್ಯಿ ಮಾಡಲಾಗುತ್ತದೆ. ಮರುದಿನ ತವರು ಮನೆಗೆ ಬರಬೇಕಾಗುತ್ತದೆ. ನಂತರ ೫ ದಿನದಲ್ಲಿ ಅವರಿಬ್ಬರೂ ಗಂಗೆ ಪೂಜೆಯನ್ನು

ಮಾಡಿಸುತ್ತಾರೆ. ಒಕಳಿ ನೀರು ಕಲಿಸಿ ಗಂಡು ಹೆಣ್ಣಿಗೆ ಹಾಕುವುದು ಹೆಣ್ಣು ಗಂಡಿಗೆ ನೀರು ಹಾಕುವ ಶಾಸ್ತ್ರ ಮಾಡುತ್ತಾರೆ.

ನಂತರ ಮದುವೆಯಾಗಿ ೯ ದಿನಕ್ಕೆ ಒಳ್ಳೆಯ ಮಹೂರ್ತ ನೋಡಿಕೊಂಡು ಬಂದು ಗಂಡು ಹೆಣ್ಣಿಗೆ ಪ್ರಸ್ತ ಮಾಡಲಾಗುತ್ತದೆ. ಹೆಣ್ಣಿನ ಮನೆಯವರು ಹೊಸ ಹಾಸಿಗೆ, ಹೊದಿಕೆ ತಂದಿರುತ್ತಾರೆ. ಅದನ್ನು ಸೋದರ ಸೊಸೆಯಾದವಳು ಹಾಸಿಗೆ ಹಾಕಿ ಬರಬೇಕಾಗುತ್ತದೆ. ಹೆಣ್ಣು ಗಂಡನ್ನು ಒಂದು ಮನೆಯಲ್ಲಿ ಕೂಡಿ ಹಾಕಿ ಅಲ್ಲಿರುವವರೆಲ್ಲ ಬೇರೆ ಮನೆಯಲ್ಲಿರುತ್ತಾರೆ. ಮುಂಜಾನೆ ಎದ್ದು ದಂಪತಿಗಳಿಗೆ ಸ್ನಾನ ಮಾಡಿಸಿ ದೇವಾಲಯಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಾರೆ. ಹಾಸಿದ ಹೊದಿಕೆಯ ಕೆಳಗೆ ಗಂಡು ತನಗೆ ಎಷ್ಟು ಸಾಧ್ಯವೋ ಅಷ್ಟು ಹಣವನ್ನು ಇಟ್ಟಿರುತ್ತಾನೆ. ಅದು ಹಾಸಿಗೆ ಹಾಕಿದವಳಿಗೆ ಸೇರುತ್ತದೆ. ಅದು ಈ ಸಮುದಾಯದಲ್ಲಿ ಕಂಡುಬರುವ ಪದ್ಧತಿಯಾಗಿದೆ. ದೇವಾಲಯದಿಂದ ಬಂದ ದಂಪತಿಗಳು ದೇವರ ಕೋಣೆಯಲ್ಲಿ ಸಿಹಿ ಊಟವನ್ನು ಮಾಡುತ್ತಾರೆ. ಇಲ್ಲಿಗೆ ಮದುವೆಯ ಪದ್ಧತಿಗಳು ಮುಗಿಯುತ್ತವೆ. ಮುಂದೆ ಆಷಾಢಮಾಸದಲ್ಲಿ ಅತ್ತೆ ಸೊಸೆಯರು ಒಂದೇ ಬಾಗಿಲಿನಲ್ಲಿ ಓಡಾಡಬಾರದೆಂದು ಸೊಸೆಯನ್ನು ತವರುಮನೆಗೆ ಕಳಿಸುವ ಪದ್ಧತಿ ಇದೆ. ಗತ ಜಿದ್ದಾಗ ಹೆಣ್ಣು ತವರು ಮನೆಯಲ್ಲಿರುತ್ತಾಳೆ. ಶುಭ ಸುದ್ದಿ ತಿಳಿದು ಬಂದರೆ, ಅಂದರೆ ಗರ್ಭಿಣಿ ಎಂದು ತಿಳಿದುಬಂದರೆ ಮನೆಯವರಿಗೆಲ್ಲ ಸಂತೋಷ ಸಂಗತಿಯಾಗಿರುತ್ತದೆ. ಐದು ಅಥವಾ ಏಳನೇ ತಿಂಗಳಲ್ಲಿ ತವರು ಮನೆಗೆ ಕಳಿಸಲಾಗುತ್ತದೆ. ಐದನೇ ತಿಂಗಳಲ್ಲಿ ನೀರು ಬುತ್ತಿ ಮಾಡಿಕೊಂಡು ತವರು ಮನೆಯವರು ತೆಗೆದುಕೊಂಡು ಬಂಧುಗಳೊಂದಿಗೆ ಹೋಗುತ್ತಾರೆ. ಆವಳಿಗೆ ಸೀಮಂತ ಮಾಡಿ ೭ ನೇ ತಿಂಗಳಲ್ಲಿ ತವರಿಗೆ ಕರೆತರಲಾಗುತ್ತದೆ. ಹೆರಿಗೆಯಾಗಿ ೫ ನೇ ತಿಂಗಳವರೆಗೆ ತವರು ಮನೆಯಲ್ಲಿಯೇ ಇರುತ್ತಾರೆ.

ಮಾನವ ಜೀವರಾಶಿ ಅಸ್ತಿತ್ವ ಫಲವಂತಿಕೆಯ ಮೇಲೆ ನಿಂತಿದೆ. ಒಂದು ಜೀವ ಮತ್ತೊಂದು ಜೀವಕ್ಕೆ ಜನ್ಮ ನೀಡುವ ಶಕ್ತಿಯೇ ಫಲವಂತಿಕೆ. ಫಲವಂತಿಕೆ ಎಂದರೆ ಗರ್ಭಧಾರಣ ಶಕ್ತಿ. ಇದು ಪ್ರಾಣಿ. ಪಕ್ಷಿ, ಸಸ್ಯ, ಮಾನವ ಎಂಬ ಭೇದವಿಲ್ಲದೆ ಎಲ್ಲಾ ಜೀವರಾಶಿಗಳಲ್ಲಿಯೂ ಗೋಚರಿಸುವ ಸಾಮಾನ್ಯ ಅಂಶ. ನಿಸರ್ಗದ ಅನಂತ ಜೀವರಾಶಿಗಳನ್ನು ಗಮನಿಸಿದಾಗ ಮಾನವ ಭೂಮಿಯನ್ನು ಅದ್ಭುತ ಫಲವಂತಿಕೆಯ ಮೊತ್ತವೆಂದು ಭಾವಿಸಿರುವ ಸಾಧ್ಯತೆಯನ್ನು ಬುಡಕಟ್ಟು ಸಂಸ್ಕೃತಿಯಲ್ಲಿರುವ ಕೆಲವೊಂದು ಆಚರಣೆಗಳಿಂದ ವ್ಯಕ್ತವಾಗುತ್ತದೆ. ಮಹಿಳೆಗೆ ನಿಸರ್ಗ ನೀಡಿದ ವಿಶಿಷ್ಟ ಕೊಡುಗೆಯೆಂದರೆ ಗರ್ಭಧಾರಣಾ ಶಕ್ತಿ. ಆಕೆಗೆ ಸಮಾಜದಲ್ಲಿ ಸ್ಥಾನಮಾನವೇನಾದರೂ ದೊರೆತಿರುವುದು ಈ ಕಾರಣದಿಂದಲೇ ಎಂಬುದು ಸತ್ಯಸಂಗತಿ. ಫಲವಂತಿಕೆಯಿಂದಾಗಿ ಹೆಣ್ಣನ್ನು ನಿಸರ್ಗಕ್ಕೆ ಹೋಲಿಸಲಾಗುತ್ತದೆ. ಹೆಣ್ಣಿನ ಗರ್ಭಧಾರಣ ಶಕ್ತಿ ಮತ್ತು ಭೂಮಿಯ ಸಸ್ಯಧಾರಣ ಶಕ್ತಿಗೂ ಸಂಬಂಧವಿರುವುದನ್ನು ನಾವು ನೋಡುತ್ತೇವೆ.

"ಗದ್ದೆಗೆ ಕೆಸರು ಚಂದ, ಹೆಂಗಸಿಗೆ ಬಸಿರು ಚಂದ" ಎಂಬ ಗಾದೆಯನ್ನು ನೋಡಬಹುದು. ಫಲ ಬಿಡುವ ವೃಕ್ಷಕ್ಕೆ ಹೆಣ್ಣನ್ನು ಹೋಲಿಸಲಾಗುತ್ತದೆ. ಒಂದು ಹೆಣ್ಣು ಋತುಮತಿಯಾದ ಮೇಲೆ

ಮಧ್ಯವಯಸ್ಸಿನಲ್ಲಿ ಆಕೆಯ ಋತುಚಕ್ರ ನಿಲ್ಲುವವರೆಗೆ ಇರುವ ಕಾಲವನ್ನು ಫಲವಂತಿಕೆಯ ಕಾಲ ಎಂದು ಗುರುತಿಸುತ್ತೇವೆ. ಜನಪದರು ತಮ್ಮ ಅನುಭವದಿಂದ ಹೆಣ್ಣಿನ ಸೃಷ್ಟಿಶಕ್ತಿಯನ್ನು ಗುರುತಿಸಿದ್ದರು. ಆದುದರಿಂದಲೆ ಋತುಮತಿ, ವಿವಾಹ, ಗರ್ಭಧಾರಣೆಯಂಥ ಸಂದರ್ಭಗಳಲ್ಲಿ ಕೆಲವೊಂದು ಆಚರಣೆಗಳನ್ನು ಮಾಡಲಾಗುತ್ತದೆ. 'ಕುಂತಾಗ ಬರಬ್ಯಾಡ, ನಿಂತಾಗ ಬರಬ್ಯಾಡ, ಮಲಗಿದಾಗ ಬರಬ್ಯಾಡ' ಎಂಬ ಮಾತನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ.

**ಸೀಮಂತ ಕಾರ್ಯ (Choli ceremony) :**

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವು ಸೀಮಂತ ಕಾರ್ಯವನ್ನು 'ಒಡಲಕ್ಕಿ ಶಾಸ್ತ್ರ' ಚೋಳಿ ಸಾತೋಮ್ಯೆನಾ ಸೀಮಂತೋನ್ನಯನ ಕಾರ್ಯ, ಕುಬಸ ಮುಂತಾದ ಹೆಸರಿನಿಂದ ಕರೆಯುತ್ತಾರೆ. ಈ ಕಾರ್ಯವನ್ನು ಅತಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಮದುವೆಯಾದ ಸ್ತ್ರೀಯು ಮೊದಲನೆಯ ಸಲ (ಚೊಚ್ಚಲು) ಗರ್ಭಧರಿಸಿದರೆ (ಬಸುರಿಯಾದರೆ), ತವರು ಮನೆಯವರಿಗೆ ಸಂಭ್ರಮದ ಸುದ್ದಿಯಾಗುವುದರ ಜೊತೆಗೆ 'ಬಯಕೆ' ಕೊಡುವ ಸಂಪ್ರದಾಯವಿದೆ. ಈ ಸುದ್ದಿಯನ್ನು ತಿಳಿದರೆ ತಾಯಿಯಾದವಳು ಸಂತಸಗೊಂಡು ಮಗಳಿಗೆ ಸಿಹಿ ತಿಂಡಿ, ತಿನಿಸುಗಳನ್ನು ಮಾಡಿಕೊಂಡು ಮಗಳಿಗೆ ತಿನ್ನಿಸುತ್ತಾರೆ. ಇದಕ್ಕೆ 'ಬಯಕೆ ಬುತ್ತಿ', ಬವಕೆ ಬುತ್ತಿ, ಬಾಯಿಕೆ ಬುತ್ತಿ ಮುಂತಾದ ಹೆಸರಿನಿಂದ ಕರೆಯುತ್ತಾರೆ. ಇದನ್ನು ಎರಡು ರೀತಿಯಲ್ಲಿ ಆಚರಿಸುತ್ತಾರೆ. ಮೊದಲನೆಯದು ಕಳ್ಳ ಕುಬಸ, ಎರಡನೆಯದು ದೊಡ್ಡ ಕುಬಸ ವೆಂದು ಆಚರಿಸುತ್ತಾರೆ. ಕಳ್ಳ ಕುಬಸ ವನ್ನು ಮೂರು ಇಲ್ಲವೇ ಐದನೆಯ ತಿಂಗಳಿಗೆ ತವರಿನರಾಗಲಿ ಇಲ್ಲವೇ ಅತ್ತೆಯ (ಗಂಡನ ಮನೆ) ಮನೆಯವರಾಗಲಿ ಈ ಕುಬುಸದ ಕಾರ್ಯವನ್ನು ಮಾಡುತ್ತಾರೆ. ಇದು ಹೆಸರೇ ಹೇಳುವಂತೆ ಕಳ್ಳಕುಬುಸವಾಗಿರುವುದರಿಂದ ಇದನ್ನು ಅದ್ದೂರಿಯಿಂದ ಮಾಡುವುದಿಲ್ಲ. ಕೆಲವೊಂದು ಸಲ ಈ ಬಸಿರು ನಾಶವಾಗುವುದೆಂಬ ಭಯವೂ ಇರುತ್ತದೆ. ಅಂದು ಗರ್ಭಿಣಿ ಸ್ತ್ರೀಗೆ ಹಸಿರು ಬಳೆ, ಹೂವಿನ ದಂಡೆ, ಹಸಿರು ಸೀರೆ, ಹಸಿರು ಕುಪ್ಪಸ ತೊಡಿಸಿ, ಅಕ್ಕಿ, ಎಲೆ ಅಡಿಕೆ, ಕೊಬ್ಬರಿ, ವೀಳ್ಯದೆಲೆ, ತೆಂಗು, ಅರಿಶಿಣ ಮುಂತಾದ ವಸ್ತುಗಳಿಂದ ಉಡಿಯನ್ನು ತುಂಬುತ್ತಾರೆ. ಅವಳ ಕೈಯಲ್ಲಿ ಹಸಿರು ಅಥವಾ ಕೆಂಪು ಕುಪ್ಪಸದ ಖಣ ಕೊಟ್ಟು ಆರತಿಯನ್ನು ಮಾಡುತ್ತಾರೆ. ಕೊನೆಗೆ ಎಲ್ಲರೂ ಸಿಹಿ ಊಟ ಮಾಡುತ್ತಾರೆ.

ದೊಡ್ಡ ಕುಬುಸ, ಇದು ಐದು ಅಥವಾ ನಾಲ್ಕನೇ ತಿಂಗಳಲ್ಲಿ ಮಾಡುತ್ತಾರೆ. ಇದು ಹೆಣ್ಣಿನ ಮನೆಯವರು ಗಂಡಿನಮನೆಯಲ್ಲಿ ಮಾಡುವ ಕಾರ್ಯಕ್ರಮ. ಇದಕ್ಕೆ ತಗಲುವ ವೆಚ್ಚವನ್ನು ಹೆಣ್ಣಿನ ಕಡೆಯವರೇ ಭರಿಸುವುದರ ಜೊತೆಗೆ ಅಳಿಯನಾದವನಿಗೆ ಹೊಸ ಬಟ್ಟೆ ಮತ್ತು ಬಂಗಾರ ಕೊಡುವ ಪದ್ಧತಿಯಿದೆ. ಇದಾದ ನಂತರ ತವರು ಮನೆಗೂ ಕರೆತಂದು ಇಂತಹುದೇ ಆದ ಕಾರ್ಯಕ್ರಮ ಮಾಡುತ್ತಾರೆ.

ಮೇಲೆ ಹೇಳಿದ ಹಾಗೆ ಕಳ್ಳ ಕುಬುಸದಲ್ಲಿ ಮಾಡುವಂತೆ ಇಲ್ಲಿಯೂ ಸಹ ಎಲ್ಲಾ ಸಂಪ್ರದಾಯಗಳನ್ನು ಮಾಡುತ್ತಾರೆ. ಅಂದು ಗರ್ಭಿಣಿ ಸ್ತ್ರೀಯನ್ನು ಸ್ನಾನ ಮಾಡಿಸಿ ತವರು ಮನೆಯವರು ತಂದಿರುವ ಹಸಿರುಸೀರೆ ಉಟ್ಟುಕೊಂಡು, ಮಗು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಅಥವಾ ಗರ್ಭಧರಿಸಿದ ಮೇಲೆ ತಾಯಿಯಾದವಳು ಮಗುವಿನ ಜಡೆಯನ್ನು ದೇವರಿಗೆ ಹರಕೆಹೊತ್ತಿಕೊಳ್ಳುವುದು ಈ ಜನರಲ್ಲಿ ಸಾಮಾನ್ಯವಾಗಿ ಬಿಟ್ಟಿದೆ. ಈ ಜವಳವನ್ನು ಮನೆ ದೇವರ ಹೆಸರಿನಲ್ಲಿ ತೆಗೆಯುತ್ತಾರೆ. ಕೆಲವೊಂದು ಕಡೆ ಹೆಣ್ಣು ಗಂಡು ದೇವರಿಗೆ ಜಡೆಯನ್ನು ಬಿಡುತ್ತಾರೆ. ಜವಳ ತೆಗೆಯುವ ಕಾರ್ಯ ಮಗುವಿನ ಮಾವ ಇಲ್ಲವೆ ತಾಯಿಂದ ಸಂಬಂಧವಿರುವ ಸೋದರ ಮಾವನ ಅಥವಾ ಗಂಡಂದಿರ ಅಂದರೆ ತಾಯಿಯ ಸಂಬಂಧಿಕರಿಂದ ಈ ಕಾರ್ಯ ನೆರವೇರುವುದು. ತವರು ಮನೆಯವರು ತಾಯಿ ಮಗುವಿಗೆ ಹೊಸ ಬಟ್ಟೆಯನ್ನು ತಂದು ಉಡಿಸುತ್ತಾರೆ. ಇದೇ ಸಮಯದಲ್ಲಿ ಸೋದರ ಮಾವನಿಗೆ ಹೊಸ ಬಟ್ಟೆಯನ್ನು ಕೊಡುತ್ತಾರೆ.

**ಸಾವು :**

ಸಾಮಾನ್ಯವಾಗಿ ಎಲ್ಲ ಸಮುದಾಯದವರ ಆಚರಣೆಯಲ್ಲಿರುವಂತೆ, ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲೂ ಸಾವಿನ ಸಂದರ್ಭದಲ್ಲಿ ಕೆಲವು ಆಚರಣೆಗಳಿವೆ. ಯಾವ ಮನೆಯಲ್ಲಿ ಸಾವು ಸಂಭವಿಸುತ್ತದೆಯೋ ಆ ಮನೆಯ ಮುಂದೆ ಬೆಂಕಿ ಹಾಕುತ್ತಾರೆ. ಕೆಲವರು ರಾತ್ರಿ ವೇಳೆಯಲ್ಲಿ ಸತ್ತರೆ ಭಜನೆಯು ನಡೆಯುತ್ತದೆ. ಯಾವುದೇ ವ್ಯಕ್ತಿ ಸತ್ತಾಗ ಅವಳ ಅಥವಾ ಅವನ ತಲೆಯ ಮೇಲೆ ದೀಪ, ಊದುಬತ್ತಿ ಹಚ್ಚುತ್ತಾರೆ, ಅದು ಅವರನ್ನು ಮಣ್ಣು ಮಾಡುವವರೆಗೆ ಹಾಗೆಯೇ ಇರುತ್ತದೆ, ಶವವನ್ನು ಒಂದು ದಿನ ಮಾತ್ರ ಇರಿಸಿಕೊಳ್ಳುತ್ತಾರೆ. ಸತ್ತ ವ್ಯಕ್ತಿಯ ಹೊಟ್ಟೆಯ ಮೇಲೆ ಉಪ್ಪಿನ ಗಂಟು ಇಡಲಾಗುತ್ತದೆ. ಏಕೆಂದರೆ ಹೊಟ್ಟೆ ಉಬ್ಬಿ ಒಡೆಯಬಾರದೆಂದು ಈ ರೀತಿ ಮಾಡಲಾಗುತ್ತದೆ. ಬಂಧು ಬಳಗ, ಮಿತ್ರರುಗಳಿಗೆ ತಿಳಿಸುತ್ತಾರೆ. ಬಂದವರೆಲ್ಲ, ಹೂವು, ಕಾಯಿ ಕರ್ಪೂರ ಊದಿನಕಡ್ಡಿಗಳನ್ನು ಕಡ್ಡಾಯವಾಗಿ ತಂದೆ ತರುತ್ತಾರೆ. ಹಾರ ಹಾಕಿ, ಊದಿನಕಡ್ಡಿ ಬೆಳಗುತ್ತಾರೆ. ಆ ದಿನ ಮನೆಯಲ್ಲಿ ಬೆಂಕಿ ಹಾಕುವುದಿಲ್ಲ, ಅಕ್ಕ ಪಕ್ಕದವರೇ ಅವರಿಗೆ ಟೀ ಕಾಫಿ ತಂದುಕೊಡುತ್ತಾರೆ. ಬಂದವರೆಲ್ಲರೂ ದು:ಖತಪ್ತವಾದ ಕುಟುಂಬಕ್ಕೆ ಸಮಾಧಾನ ಮಾಡುತ್ತಿರುತ್ತಾರೆ. ಎಲ್ಲರೂ ಬಂದ ಮೇಲೆ ಶವ ತೆಗೆದುಕೊಂಡು ಹೋಗಲು ಹೇಳುತ್ತಾರೆ.

ಸತ್ತ ವ್ಯಕ್ತಿಗೆ ಸ್ನಾನ ಮಾಡಿಸಿ ಬಟ್ಟೆ ಉಡಿಸಿ ಹಣೆಗೆ ವಿಭೂತಿ ನಾಮ ಇಟ್ಟು ಕುಂಕುಮ ಇಟ್ಟು ಸಿದ್ದ ಮಾಡಲಾಗುತ್ತದೆ. ಬಾಯಿಗೆ ಎಲೆ ಅಡಿಕೆ ಕುಟ್ಟಿ ಇಟ್ಟಿರುತ್ತಾರೆ. ಹೊಸ ಗಡಿಗೆ, ಮುಚ್ಚಳ ತಂದು ಕೂಳು ಮಾಡಿ (ಅನ್ನಮಾಡಿ)_ ಶವಕ್ಕೆ ಹೂ ಹಾಕಿ ಹೆಂಡತಿಯನ್ನು ಪಕ್ಕಕ್ಕೆ ಕೂರಿಸಿ ಆಕೆಗೆ ಮಡಿಲಕ್ಕಿ ಹಾಕಲಾಗುತ್ತದೆ. ಮುತ್ತೈದೆಯ ಕೊನೆ ಮಡಿಲಕ್ಕಿ ಇದಾಗಿದೆ. ಹಿರಿಯ ಮಗ ಅಥವಾ ಕಿರಿಯ ಮಗನಿಗೆ ಬೆಂಕಿಯ ಕುಂಡವನ್ನು ಕೊಡುತ್ತಾರೆ. ಶವವನ್ನು ಚಟ್ಟದ ಮೇಲೆ ಮಲಗಿಸಿ ತೆಗೆದುಕೊಂಡು ಹೋಗುವಾಗ, ಜೊತೆಗೆ ಹೆಂಡತಿಯು ಹೋಗಬೇಕಾಗುತ್ತದೆ. ಮನೆಯಲ್ಲಿ ಆರೋಗ್ಯ ಸರಿಯಿಲ್ಲದವರು

ಮತ್ತು ಮಕ್ಕಳು ಉಳಿದು ಬಿಡುತ್ತಾರೆ. ದಾರಿಯುದ್ದಕ್ಕೂ ಹಣ, ಹೂವು, ಎಲೆ, ನವಣಕ್ಕಿ, ಮಂಡಕ್ಕಿ ಉಗ್ಗಿಕೊಂಡು ಹೋಗುತ್ತಾರೆ. ಏಕೆಂದರೆ ಸತ್ತ ವ್ಯಕ್ತಿ ಗಾಳಿಯಾಗಿ ಅಥವಾ ದೆವ್ವವಾಗಿ ಮನೆಗೆ ಬರಬಾರದೆಂಬ ನಂಬಿಕೆ ಇಂದಿಗೂ ಇದೆ. ಒಂದು ವೇಳೆ ಆತ್ಮ ಬಂದರೆ ಅವುಗಳನ್ನು ಆರಿಸಿಕೊಂಡು ಬರಲು ಆಗುವುದಿಲ್ಲ ಎಂದು ಪದ್ಮಾವತಮ್ಮ ಹೇಳುತ್ತಾರೆ. ಅತಿಯಾದ ಪ್ರೀತಿ ಇರುವವರು ಇವುಗಳೆಲ್ಲವನ್ನೂ ಆರಿಸಿಕೊಂಡು ಬರುತ್ತಾರೆ.

ಇನ್ನು ವ್ಯಕ್ತಿಯು ಸತ್ತ ಕೂಡಲೇ ಪಂಚಾಂಗವನ್ನು ನೋಡಲಾಗುವುದು. ಪಂಚಾಗದ ಫಲದಲ್ಲಿ ಏನಾದರೂ ಕೆಟ್ಟದ್ದು ಇದ್ದರೆ ಮನೆಯನ್ನು ಸ್ವಲ್ಪ ದಿನಗಳ ಕಾಲ ಬಿಡುವುದು, ಅಥವಾ ಸತ್ತ ಸ್ಥಳವನ್ನು ಮುಚ್ಚುವುದು ರೂಢಿಯಲ್ಲಿದೆ. ಅಂತ್ಯಕ್ರಿಯೆಯ ಸಂದರ್ಭದಲ್ಲಿ ಮನೆಯಲ್ಲಿ ದೀಪವನ್ನು ಹಚ್ಚಿರುತ್ತಾರೆ. ಶವ ಸಂಸ್ಕಾರಕ್ಕೆ ಬಂದವರು ದೀಪವನ್ನು ನೋಡುವಂತಿಲ್ಲ. ನೋಡಿದರೆ ಅವನಿಗೆ ದೋಷ ಬರುತ್ತದೆ. ಎನ್ನುವುದು ಅವರ ತಿಳುವಳಿಕೆ. ಕಾರಣ ಅವರೆಲ್ಲರೂ ಶವಸಂಸ್ಕಾರ ಮುಗಿದ ಕೂಡಲೇ ಅಲ್ಲಿಯೇ ತೋಟ ಗದ್ದೆಗಳಲ್ಲಿ ಬಾವಿ ಹಳ್ಳಗಳಲ್ಲಿ ಸ್ನಾನಮಾಡಿ ಶುದ್ದವಾಗಿ ಶವದ ಮನೆಯವರಿಗೆ ಹೇಳದೆ, ಕೇಳದೆ ತಮ್ಮ ತಮ್ಮ ಊರಿಗೆ ಮನೆಗಳಿಗೆ ತೆರಳುತ್ತಾರೆ.

ಶವ ಸಂಸ್ಕಾರವಾದ ಮೇಲೆ ಬಂದ ಬಂಧುಬಳಗದವರೆಲ್ಲರೂ ಮತ್ತೊಮ್ಮೆ ನಮಸ್ಕರಿಸಿ ಹೊರಡುತ್ತಾರೆ. ಹೊರಡುವಾಗ ಒಳ್ಳೆಯ ವ್ಯಕ್ತಿ ಸತ್ತಿದ್ದರೆ ಎಂತಹ ಪುಣ್ಯಾತ್ಮನಪ್ಪ ಎಂದು ಹೊಗಳಿ ನೊಂದುಕೊಂಡು ಹೇಳುತ್ತಾರೆ. ಅದೇ ಕೆಟ್ಟವ್ಯಕ್ತಿ ಸತ್ತಿದ್ದರೆ ಎಂತಹ ಪಾಪಿನಪ್ಪ ಭೂಮಿಗೆ ಭಾರವಾಗಿದ್ದವನಪ್ಪಾ ಪೀಡೆ ತೊಲಗಿತು ಎಂದು ಹೇಳುವುದುಂಟು. ಸತ್ತ ವ್ಯಕ್ತಿ ಬಳಸುತ್ತಿದ್ದ ವಸ್ತುಗಳನ್ನು ಸ್ಮಶಾನದಲ್ಲಿಯೇ ಬಿಟ್ಟು ಹೋಗುತ್ತಾರೆ. ಸತ್ತ ವ್ಯಕ್ತಿಯನ್ನು ಸಂಸ್ಕಾರ ಮಾಡಿದ ನಂತರ ಹೆಂಡತಿಗೆ ೪ ಜನ ಧುರಯರಿಂದ ಅವಳ ಮುತ್ತೈದೆತನವನ್ನು ಕಳೆದು ಹಾಕುತ್ತಾರೆ. ಹೂ, ಬಳೆ, ಕಾಲುಂಗುರ, ತಾಳಿ, ಕುಂಕುಮವನ್ನು ತೆಗೆದು ಹಾಕುತ್ತಾರೆ. ನಂತರ ಆ ಮಹಿಳೆ ಯಾರಿಗೂ ಕಾಣದಂತೆ ಮುಖವನ್ನು ಮುಚ್ಚಿಕೊಂಡು ಮನೆಗೆ ಬರಬೇಕಾಗುತ್ತದೆ.

ಶವಸಂಸ್ಕಾರ ಮಾಡಿದ ಮೇಲೆ ಬಂಧುಗಳು ದೀಪ ನೋಡಲು ಬರುತ್ತಾರೆ. ಬರುವುದರೊಳಗೆ ಮನೆಯನ್ನು ಸ್ವಚ್ಚಮಾಡಿ, ದೀಪವನ್ನು ಬಾಗಿಲಿಗೆ ಕಾಣುವಂತೆ ಇಡಲಾಗುತ್ತದೆ. ಬಾಗಿಲ ಹೊರಗಡೆ ಹರಳೆಣ್ಣೆ, ನೀರು ಇಟ್ಟಿರುತ್ತಾರೆ. ಬಂದವರೆಲ್ಲರೂ ಕೈಕಾಲು ತೊಳೆದುಕೊಂಡು ಕೈಯನ್ನು ಎಣ್ಣೆಯಲ್ಲಿ ಅದ್ದಿ ದೀಪ ನೋಡಿಕೊಂಡು ಹೋಗುತ್ತಾರೆ. ಮನೆಯಲ್ಲಿರುವವರೆಲ್ಲರೂ ಸ್ನಾನ ಮಾಡಿ ಮನೆ ಸ್ವಚ್ಚಮಾಡಿರಬೇಕು ಕೆಲವರು ಕಾಲುವೆಗಳಲ್ಲಿ ಸ್ನಾನ ಮಾಡಿಕೊಂಡು ಬರುತ್ತಾರೆ.

ಶವ ಮೆರವಣಿಗೆಯು ಜನರಿಗೆ ಎದುರು ಬಂದರೆ ಒಳ್ಳೆಯದು, ಸಂಸ್ಕಾರವಾದ ಮೇಲೆ ಜನ ಬರುವವರನ್ನು ನೋಡಬಾರದು ಎಂದು ಹೇಳುತ್ತಾರೆ. ಇನ್ನು ಯಾವ ವ್ಯಕ್ತಿ ಯಾರ ಮನೆಯಲ್ಲಿ

ಸತ್ತಿರುತ್ತಾನೋ ಆ ಮನೆಯವರು ಮೂರನೇ ದಿನದಂದು ಮೂರು ಕೂಳು ಎಂದು ಮಾಡಿ ಅದರಲ್ಲಿ ಆ ವ್ಯಕ್ತಿಯು ಏನನ್ನು ತಿನ್ನುತ್ತಿದ್ದನೋ ಅಥವಾ ಆತನಿಗೆ ಏನು ಪ್ರಿಯವೋ ಆ ಅಡುಗೆಯನ್ನು ಮಾಡಿರುತ್ತಾರೆ. ಹೊರಗಿನವರು ಆ ಮನೆಯಲ್ಲಿ ಆ ದಿನ ಊಟಮಾಡುವುದಿಲ್ಲ. ಹಾಗೆಯೇ ಸ್ಮಶಾನದಲ್ಲಿದ್ದ ಅನ್ನವನ್ನು ಕಾಗೆಗಳು ಮುಟ್ಟಿದರೆ ಶುಭ ಶಕುನ. ನಂತರ ೧೦, ೧೧ ಮತ್ತು ೧೨ ನೇ ದಿನ ಶ್ರಾದ್ಧವನ್ನು ಮಾಡಿ ಬಂಧು ಬಳಗದವರಿಗೆ ಊಟಮಾಡಿಸಿ ಆ ಒಂದು ಕ್ರಿಯೆಯನ್ನು ಕೊನೆಗೊಳಿಸುತ್ತಾರೆ. ನಂತರ ಆ ಮನೆಗೆ ಸೂತಕ ತಪ್ಪುತ್ತದೆಯಂತೆ.

ಸತ್ತ ವ್ಯಕ್ತಿಯ ಶವಸಂಸ್ಕಾರ ಮಾಡುವಾಗ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಸ್ಮಶಾನದಲ್ಲಿ ಸತ್ತವರಿಗೆ ಎಷ್ಟು ಗಂಡುಮಕ್ಕಳು ಇರುವರೋ ಅಷ್ಟು ಮಕ್ಕಳು ತಲೆ ಕೂದಲು ತೆಗೆಯಿಸಿ ತೆಗೆದ ಕೂದಲನ್ನು ಹೆಣದ ಮೇಲೆ ಹಾಕಿ ಸುಡುತ್ತಾರೆ. ಯಾಕೆಂದರೆ ಇವರ ಸಂಪ್ರದಾಯದ ಪ್ರಕಾರ ಗಂಡು ಮಕ್ಕಳ ಕೂದಲನ್ನು ಇಟ್ಟು ಸತ್ತವರಿಗೆ ಮೋಕ್ಷಪ್ರಾಪ್ತಿ ಎಂಬ ನಂಬಿಕೆಯಿದೆ, ಹಾಗೂ ಸಮುದಾಯದವರಲ್ಲಿ ಕ್ರಿಯಾಕರ್ಮ ಶಾಸ್ತ್ರಗಳನ್ನು ಹಿರಿಯ ಅಥವಾ ಕಿರಿಯ ಮಗ ಮಾಡಬೇಕೆಂಬುದು ಸಂಪ್ರದಾಯ.

ಶವಸಂಸ್ಕಾರ ನಡೆದ ದಿನದಿಂದಲೇ ಸಂಸ್ಕಾರ ನಡೆಸಿದ ಮಗನು ಮಡಿಯಿಂದ ಅಡುಗೆ ಮಾಡಿ ಊಟ ಮಾಡುವ ಮೊದಲು ಒಂದು ತುತ್ತನ್ನು ಸತ್ತ ವ್ಯಕ್ತಿಗೆಂದು ಅರ್ಪಿಸಿ ನಂತರ ಊಟ ಮಾಡಬೇಕೆಂಬ ಶಾಸ್ತ್ರವಿದೆ. ಈ ತುತ್ತು ಅವರಿಗೆ ಅರ್ಪಣೆ ಎಂಬುದು. ಹೀಗೆ ತೆಗೆದಿಟ್ಟ ತುತ್ತನ್ನು ಮೂರನೇ ದಿನ ಬೆಳಿಗ್ಗೆ ಹೊಳೆಯಲ್ಲಿ ಸ್ನಾನ ಮಾಡುವಾಗ ಆ ತುತ್ತನ್ನು ಹಿಡಿದು ಸ್ನಾನ ಮಾಡಿ ಹೊಳೆಗೆ ಅರ್ಪಿಸುತ್ತಾರೆ. ೩ನೇ ದಿನ ಹಿಂದಿನ ದಿನದ ತುತ್ತನ್ನು ತೆಗೆದುಕೊಂಡು ಶವಸಂಸ್ಕಾರ ಮಾಡಿದ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಸುಟ್ಟ ಬೂದಿ ಹಾಗೂ ತುತ್ತನ್ನು ಗಂಗೆಗೆ ಹಾಕಿ ಸ್ನಾನ ಮಾಡಿ ಪೂಜಿಸುತ್ತಾರೆ.

ಹೊಳೆಯಲ್ಲಿ ಸ್ನಾನ ಮಾಡಿ ನಂತರ ಸತ್ತ ವ್ಯಕ್ತಿಗೆ ಇಷ್ಟವಾದ ಅಡುಗೆಯನ್ನು ಹೊಸ ಮಡಕೆಯಲ್ಲಿ ಶವಸಂಸ್ಕಾರ ನಡೆದ ಸ್ಥಳದಲ್ಲಿ ಮಾಡಿ ೩ ಕುಡಿ ಎಲೆಯಲ್ಲಿ ನೈವೇದ್ಯ ಮಾಡಿ ಒಂದನ್ನು ಸಂಸ್ಕಾರ ನಡೆದ ಸ್ಥಳದಲ್ಲಿ ಮತ್ತೊಂದನ್ನು ಆಕಳಿಗೆ ಹಾಗೂ ಇನ್ನೊಂದನ್ನು ಕಾಗೆಗೆ ಮನೆಯ ಮೇಲೆ ಇಡುತ್ತಾರೆ. ಸತ್ತ ವ್ಯಕ್ತಿಯು ಕಾಗೆಯ ರೂಪದಲ್ಲಿ ಬಂದು ಈ ನೈವೇದ್ಯವನ್ನು ಸ್ವೀಕರಿಸುತ್ತಾನೆ ಎಂಬುದು ಈ ಸಮುದಾಯದವರ ನಂಬಿಕೆಯಾಗಿದೆ.

ಕ್ರಿಯಾ ಕರ್ಮಗಳನ್ನು ಮಾಡಿ ಬರುವುದರೊಳಗೆ ಆ ವ್ಯಕ್ತಿಯ ಕುಟುಂಬದವರು ಅಡಿಗೆ ಮಾಡಿ ಮುಗಿಸಿ ಒಲೆಯನ್ನು ಆರಿಸಬೇಕೆಂಬುದು ಈ ಸಮುದಾಯದವರ ಸಂಪ್ರದಾಯವಾಗಿದೆ.

ಈ ಸಮುದಾಯದವರು ಮೂರನೇ ದಿನ ಮಾಡುವ ಅಡುಗೆಗಳೆಂದರೆ ಅಕ್ಕಿಕಡುಬು, ಸೊಪ್ಪಿನ ಪಲ್ಯ, ಕಾಯಿಚಟ್ನಿ ಮತ್ತು ತಿಳಿಸಾರು ಅನ್ನ, ಈ ಅಡುಗೆ ಮಾಡಿಯಾದ ನಂತರ ಮನೆಯ ಹೊರಗೆ

ಮಣೆ ಹಾಕಿ ಅದರ ಮೇಲೆ ತುಂಬಿದ ಕೊಡವಿಟ್ಟು, ಒಂದು ತಟ್ಟೆಯಲ್ಲಿ ಬೂದಿ ಹಾಗೂ ನಾಲ್ಕು ಅಕ್ಕಿ ಕಡುಬಿನಲ್ಲಿ ಸೊಪ್ಪು ಹಾಕಿಡುತ್ತಾರೆ. ಯಾರು ಶವಕ್ಕೆ ಹೆಗಲು ಕೊಟ್ಟಿರುತ್ತಾರೋ ಅವರನ್ನು ಸತ್ತವರ ಮನೆಯವರು ಆ ವ್ಯಕ್ತಿಯ ೨ ಭುಜದಿಂದ ೩ ಸಲ ಅಕ್ಕಿ ಕಡುಬನ್ನು ನಿವಾಳಿಸುವ ಸಂಪ್ರದಾಯವಿದೆ. ಕಾರಣ ಹೆಗಲು ಕೊಟ್ಟವರಿಗೆ ತೊಂದರೆಯಾಗಬಾರದೆಂದು ನಿವಾಳಿಸಿದ ನಂತರ ಕೊಡದ ನೀರನ್ನು ತಲೆಗೆ ಚಿಮುಕಿಸಿಕೊಂಡು ಬೂದಿಯನ್ನು ಹಣೆಗೆ ಹಚ್ಚಿ ಮನೆಯೊಳಗೆ ಬಂದು ಊಟಮಾಡುತ್ತಾರೆ.

೩ನೇ ದಿನದ ಶಾಸ್ತ್ರ ಮುಗಿದ ಮೇಲೆಯೂ ಮೊದಲ ತುತ್ತನ್ನು ಉಂಡೆ ಮಾಡಿ ಕಟ್ಟಿ, ಉಂಡೆ ಒಡೆಯದಂತೆ ಗಟ್ಟಿಯಾಗಿ ಕಟ್ಟಿ ಮೂರನೇ ದಿವಸ ಹೊಳೆ ಸ್ನಾನಕ್ಕೆಂದು ಹೋಗುವಾಗ ಕೈಯಲ್ಲಿ ಹಿಡಿದುಕೊಂಡು ಸ್ನಾನಮಾಡಿ ನದಿಯಲ್ಲಿ ತೇಲಿ ಬಿಡುತ್ತಾರೆ.

ಶವಸಂಸ್ಕಾರ ಮಾಡುವ ಸಂದರ್ಭದಲ್ಲಿ ಮುಖ್ಯ ಶೋಕತಪ್ತ ವ್ಯಕ್ತಿ ಸೀಳಿದ ಬೊಂಬಿನ ತುದಿಯಲ್ಲಿಟ್ಟು ಬೆಂಕಿಯ ಮಡಿಕೆಯನ್ನು ಒಡೆದು ಹಾಕಿ ಸಮಾಧಿಯ ಮೇಲೆ ನೀರಿನ ಮಡಿಕೆಯನ್ನು ಇಡುತ್ತಾರೆ. ರಾತ್ರಿ ವೇಳೆ ನರಿಗಳು ಬಂದು ಶವವನ್ನು ತಿಂದು, ನೀರು ಕುಡಿದು ತಮ್ಮ ಹಸಿವನ್ನು ತೀರಿಸಿಕೊಳ್ಳುತ್ತವೆ. ಇದರಿಂದ ಅವನ ಆತ್ಮ ಬಿಡುಗಡೆ ಪಡೆದು ತನ್ನ ರಾಜ್ಯವನ್ನು ಸೇರಿಕೊಳ್ಳುತ್ತದೆ. ಇನ್ನು ಮೇಲೆ ಸತ್ತವರಿಂದ ಮಕ್ಕಳು, ಹೆಂಗಸರು, ಗಂಡಸರು, ಅಥವಾ ದನಗಳಿಗೆ ಯಾವುದೇ ತೊಂದರೆಯಿಲ್ಲ ಎಂದು ಭಾವಿಸುವರು ಇದನ್ನು ಶುಭ ಶಕುನ ಎಂದು ನಂಬುವರು.

ಈ ಸಮುದಾಯದವರಲ್ಲಿ ಸತ್ತ ವ್ಯಕ್ತಿಗೆ ತೊನ್ನು ಬಂದಿದ್ದರೆ ಅವರನ್ನು ಬೆಂಕಿಯಲ್ಲಿ ಸುಡಲಾಗುತ್ತದೆ. ಏಕೆಂದರೆ ತೊನ್ನು ಇದ್ದವರನ್ನು ಮಣ್ಣು ಮಾಡಿದರೆ ಮಳೆ ಮತ್ತು ಬೆಳೆ ಬೆಳೆಯುವುದಿಲ್ಲ ಎಂಬ ನಂಬಿಕೆಯಿದೆ. ಅವರನ್ನು ಮತ್ತು ಗರ್ಭಿಣಿ ಸ್ತ್ರೀ ಸತ್ತರೆ ಅವಳನ್ನು ಸುಡುವುದು ಕಂಡುಬರುತ್ತದೆ. ಎರಡು ಜೀವವಿರುವುದರಿಂದ ಗರ್ಭದಿಂದ ಮಗುವನ್ನು ತೆಗೆದು ಸುಟ್ಟು ಹಾಕುತ್ತಾರೆ.

ಈ ಪದ್ಧತಿಯನ್ನು ಶ್ರೀ. ಎಚ್.ವಿ ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್ ಅವರು " The dead are buried. As soon ad life if extinet, the body is washed and a name marue in put on the forehead it a male and a kumkuma one if a female. Then it is covered with a new cloth and Carried to the burial ground on a bier of bamboos. The carries must, if possible, be all related as against to the deceased. As usual the body is placed on the 9 chief mourner going round it three times from right to left: brakes a new pot, Standing by the head of the Corpse and throus rise round about the bier. ನಂತರ ಹೆಣ ಹೊತ್ತವರು ಹೆಗಲು ಬದಲಾಯಿಸುವುದು.

ಗಂಡಿಗೆ ಹೆಣವನ್ನು ಇಳಿಸಿ ಪೂಜೆ ಮಾಡುವುದು, ತೆಂಕ ದಿಕ್ಕಿಗೆ ತಲೆ ಇಡುವುದು, ನಂತರ ನೀರಿನ ಹತ್ತಿರ ಹೋಗಿ ಕೈ ಕಾಲು ತೊಳೆದು ಸಾವಿನ ಮನೆಯ ದೀಪ ನೋಡುವ ವಿವರಗಳನ್ನು ಹೇಳಿದ್ದಾರೆ"

ಗಂಡ ಸತ್ತ ವಿಧವೆಯಾದರೆ ೧೨ ದಿನಗಳ ಕಾರ್ಯವಾಗುವವರೆಗೂ ಎಲ್ಲಿಗೂ ಹೋಗುವಂತಿಲ್ಲ. ಸೂತಕ ಮುಗಿದ ನಂತರ ದೇವಾಲಯಕ್ಕೆ ಹೋಗಿ ಪೂಜೆ ಮಾಡಿಕೊಂಡು ತವರು ಮನೆ ಸೀರೆ ಬಳೆ ತೊಟ್ಟುಕೊಂಡ ಮೇಲೆನೇ ಹೊರಗಡೆ ಹೋಗಬಹುದು.

**ತಿಥಿ:**

ತಿಥಿಯನ್ನು ವ್ಯಕ್ತಿ ಸತ್ತ ೧೧ನೇ ದಿನದಂದು ಮಾಡಲಾಗುತ್ತದೆ. ತಿಥಿ ಮಾಡುವಾಗ ೧೧ನೇ ದಿನವೇ ಮನೆಯನ್ನು ಗುಡಿಸಿ ಸ್ವಚ್ಚಮಾಡಿಸಿ ಸೂತಕ ಕಳೆದುಕೊಳ್ಳುತ್ತಾರೆ. ನಂತರ ಅವರಿಗೆ ಪುಣ್ಯದಿನ ಮಾಡಿಸಿ ಸೂತಕ ಕಳೆದುಕೊಳ್ಳುತ್ತಾರೆ. ನಂತರ ಅವರಿಗೆ ಇಷ್ಟವಾದ ಎಲ್ಲ ಪದಾರ್ಥಗಳನ್ನು ಚಾಚೂ ತಪ್ಪದೆಯೇ ಅಲ್ಲಿ ಇಟ್ಟಿರುತ್ತಾರೆ. ಮತ್ತು ಧೂಪ ಹಾಕುತ್ತಾರೆ. ಬಂದ ಬಳಗದವರಿಗೆಲ್ಲ ಸಿಹಿ ಅಡುಗೆ ಮಾಡಿ ಊಟ ಮಾಡಿಸುತ್ತಾರೆ. ಶವ ಸಂಸ್ಕಾರಕ್ಕೆ ಬಂದವರೆಲ್ಲರೂ ಸತ್ತ ವ್ಯಕ್ತಿಯ ಮನೆಯವರಿಗೆ ಬೀಗರು 'ವಿಷಬಾಯಿ' ತೊಳಿಸಬೇಕು (ವಿಷಬಾಯಿ : ಕಡುತೊಂಡ್ ದುವಾಸ್ ಶಾಸ್ತ್ರ). ಸತ್ತ ಮನೆಯ ಅಣ್ಣ ಮಗ ತಮ್ಮಂದಿರುಗಳಿಗೆ ಬೀಗರಾದವರು ಒಂದು ಲೋಟ ನೀರಿನಿಂದ ಬಾಯಿಯನ್ನು ತೊಳಿಸುತ್ತಾರೆ. ಟೀ-ಕಾಫಿ ಕುಡಿಸುವುದಕ್ಕೆ ವಿಷಬಾಯಿ ತೊಳಿಸುವುದು ಎಂದು ಹೇಳುತ್ತಾರೆ.

೧೧ ನೇ ದಿನದಂದು ಸತ್ತವರ ನೆನಪಿಗಾಗಿ ಅವರ ಹೆಸರು ಹಾಕಿಸಿ ಅವರವರ ಅನುಕೂಲಕ್ಕೆ ಉಡುಗೊರೆಯನ್ನು ಕಾರ್ಯಕ್ಕೆ ಬಂದ ಸಂಬಂಧಿಕರಿಗೆಲ್ಲರಿಗೂ ಕೊಡುತ್ತಾರೆ. ಇದೊಂದು ವಿಶೇಷತೆ ಈ ಸಮುದಾಯದವರಲ್ಲಿ ಕಂಡುಬರುತ್ತದೆ.

ಇದಾದ ನಂತರ ೧೨ನೇ ದಿನದಂದು "ಬಾರವೀ ಅಕತ್" ಎಂದು ಆಚರಿಸುತ್ತಾರೆ. ಬಾರವಿ ಎಂದರೆ ಹನ್ನೆರಡನೇ ದಿನದ ತಿಥಿ ಎಂದು. ಈ ಕಾರ್ಯವನ್ನು ಮನೆಯವರು ಬಿಟ್ಟು ನೆಂಟರು ಸಂಬಂಧಿಕರು, ಮನೆ ಹೆಣ್ಣು ಮಕ್ಕಳು ಹಣ ಹಾಕಿ ಸತ್ತವರ ಮನೆಯವರಿಗೆ ದೇವಸ್ಥಾನಕ್ಕೆ ಕರೆದುಕೊಂದು ಹೋಗಿ ಅಲ್ಲಿಂದ ಕರೆತಂದು ಮಾಂಸದೂಟ (ಖಾರ ಅಡಿಗೆ) ಹಾಕುವರು. ಆ ದಿನ ರಾತ್ರಿ ದೇವರಿಗೆ ಹಚ್ಚಿದ ದೀಪ ಮನೆ ಹೆಣ್ಣು ಮಕ್ಕಳು ನೋಡುವ ಹಾಗಿಲ್ಲ. ಸೊಸೆ ಗಂಡು ಮಕ್ಕಳು ನೋಡಬಹುದು ಎಂದು ಸಂಪ್ರದಾಯವಿದೆ.

ಬಾಹುಸಾರ ಕ್ಷತ್ರಿಯ ಸಮಾಜದಲ್ಲಿ ಸತ್ತವರ ಹೆಸರಿನಲ್ಲಿ ವರ್ಷಕ್ಕೆ ಒಮ್ಮೆ ಯುಗಾದಿ, ದೀಪಾವಳಿ, ಮಹಾಲಯ ಅಮವಾಸ್ಯೆಯಂತಹ ಹಬ್ಬ-ಹರಿದಿನಗಳಲ್ಲಿ ತಿಥಿ ಮಾಡುವರು. ಅಂದು ಮನೆಯನ್ನೆಲ್ಲಾ ಸ್ವಚ್ಛಗೊಳಿಸಿ ಪೂರ್ವಜರ, ಸತ್ತವರ ಹೆಸರಿನಲ್ಲಿ ಹೊಸ ಬಟ್ಟೆ ಏರಿಸಿ, ಅವರ ಭಾವಚಿತ್ರವಿಟ್ಟು ಪೂಜೆ

ಮಾಡುತ್ತಾರೆ. ಇದೇ ಸಂದರ್ಭದಲ್ಲಿ, ಸ್ಮಶಾನದಲ್ಲಿರುವ ಸ್ಮಾರಕಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ನಂತರ ಈ ಬಟ್ಟೆಗಳನ್ನು ಮನೆಯ ಜನರು ತೊಡುತ್ತಾರೆ. ಅತೀ ಚಿಕ್ಕಮಕ್ಕಳು ನಿಧನ ಹೊಂದಿದ್ದರೆ ಈ ಕಾರ್ಯವನ್ನು ನೆರವೇರಿಸುವುದಿಲ್ಲ. ವಯಸ್ಕರಿಗೆ ಮಾತ್ರ ಆಚರಿಸುತ್ತಾರೆ.

**ಹಿರಿಯರಲ್ಲಿ ಕೂಡಿಸಿಕೊಳ್ಳುವುದು :**

ವ್ಯಕ್ತಿ ಸತ್ತ ಮೇಲೆ ಸಂಪ್ರದಾಯದಂತೆ ಎಲ್ಲ ಕಾರ್ಯಗಳು ಮಾಡಿದ ಮೇಲೆ ಸತ್ತವರು ನಮ್ಮನ್ನು ಕಾಡುವುದಿಲ್ಲ. ಅಂತ್ಯಕ್ರಿಯೆ ಎಲ್ಲವೂ ಸರಿಯಾಗಿ ಮಾಡಿದ್ದೇವೆ ಎಂದು ತಿಳಿದುಬಂದರೆ ಸತ್ತ ವ್ಯಕ್ತಿಯ ಆತ್ಮವನ್ನು ಆ ವರ್ಷದ ಹಿರಿಯರ ಹಬ್ಬದಲ್ಲಿ ಸೇರಿಸಿಕೊಳ್ಳಲಾಗುತ್ತದೆ. ಅಂದರೆ ತನ್ನ ಪೂರ್ವಜರ ಆತ್ಮಗಳೊಂದಿಗೆ ಸೇರಿಸುವುದು. ಕೆಲವರು ದಸರಾದಲ್ಲಿ ಹಿರಿಯರನ್ನು ಸೇರಿಸಿಕೊಂಡರೆ ಕೆಲವರು ದೀಪಾವಳಿ, ಯುಗಾದಿಯ ಹಬ್ಬದಲ್ಲಿ ಸೇರಿಸಿಕೊಳ್ಳುತಾರೆ. (ಹಬ್ಬಗಳ ದಿನ ವ್ಯಕ್ತಿ ಸತ್ತರೆ ಮೂರು ವರ್ಷಗಳವರೆಗೆ ಹಬ್ಬವನ್ನು ಆಚರಿಸುವಂತಿಲ್ಲ).

ಮುಂದೆ ಪ್ರತಿ ವರ್ಷವೂ ಪೂಜೆ ನಡೆಯುತ್ತಾ ಇರುತ್ತದೆ. ಹಿರಿಯರ ಪೂಜೆ ದಿನ ಹಿರಿಯರಿಗೆ ಬಟ್ಟೆ ತಂದು ಏರಿಸಿ ಮನೆಯವರು ಉಟ್ಟುಕೊಳ್ಳಬೇಕಾಗುತ್ತದೆ. ಹಿರಿಯರಲ್ಲಿ ಸೇರಿಸಿಕೊಂಡ ಮೇಲೆ ಸಾವಿನ ಸಂಪ್ರದಾಯಗಳು ಮುಗಿಯುತ್ತವೆ.

ತಿಥಿಯಾದ ನಂತರ ಮಹಿಳೆಗೆ ತವರು ಮನೆಯವರು ೨೧ನೇ ದಿನದಂದು ದೇವಾಲಯಕ್ಕೆ ಕರೆದುಕೊಂಡು ಹೋಗಿ ಪುಣ್ಯಸ್ನಾನ ಮಾಡಿಸಿ ಅವರಿಗೆ ತವರುಮನೆ ಸೀರೆಯನ್ನು ತೊಡಿಸಲಾಗುತ್ತದೆ, ನಂತರ ತಿಂಗಳ ಒಳಗೆ ಮನೆ ಮಗಳಿಗೆ ಸೀರೆ ನೀಡಿ. ತಾಯಿಗೆ ಐದು ತಿಂಗಳು ಅಥವಾ ಒಂದು ವರ್ಷಗಳವರೆಗೆ ಸೀರೆ ನೀಡಲಾಗುತ್ತದೆ. ಆ ಮಹಿಳೆಗೆ ಶಾಂತಿ ಮಾಡಲಾಗುತ್ತದೆ. ಬಳೆ ತೊಡಿಸುತ್ತಾರೆ. ಹಿಂದಿನ ಕಾಲದವರು ಹಣೆಯಲ್ಲಿ ಕುಂಕುಮ ಹೂವು ಇಡುತ್ತಿರಲಿಲ್ಲ. ಇಂದಿನ ಕಾಲದಲ್ಲಿ ಕೆಲವರಲ್ಲಿ ಕುಂಕುಮ ಹೂ ತೊಡುವುದು ಕಂಡು ಬರುತ್ತದೆ.

ಮದುವೆಯಾಗದ ಹುಡುಗಿಯರು ಸತ್ತರೆ ಅವರನ್ನು ಸೋದರ ಮಾವನಿಂದ ತಾಳಿ ಕಟ್ಟಿಸಿ ಮುತ್ತೈದೆಯಾಗಿ ಹೂಳುತ್ತಾರೆ. ಇತರೆ ಎಲ್ಲ ಆಚರಣೆಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸುತ್ತಾರೆ. ದೋಷವೇನಾದರೂ ಇದ್ದರೆ ಬ್ರಾಹ್ಮಣರಿಂದ ಮನೆಗೆ ಶಾಂತಿ ಮಾಡಿಸುತ್ತಾರೆ. ನವಗ್ರಹಗಳ ಪೂಜೆ ಮಾಡಿಸಲಾಗುತ್ತದೆ. ಮುಂದೆ ಮಕ್ಕಳು ಮರಿಗಳಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳಲಾಗುತ್ತದೆ. ಪೂಜೆಯಲ್ಲಿ ೯ ವಿಧದ ಕಾಳುಗಳನ್ನು ತಂದು ೯ ತೆಂಗಿನಕಾಯಿ ೧ ಮರದಿಂದ ಇಳಿಸಿದ ತೆಂಗಿನಕಾಯಿಯನ್ನು ಒಂದು ಬಿಳಿಬಟ್ಟೆಯಲ್ಲಿ ಕಟ್ಟಿ ಪೂಜೆ ಮಾಡುತ್ತಾರೆ. ೯ ವಿದಧ ಕಾಳುಗಳನ್ನು ಇಡಲು ಪಾತ್ರೆ ಮತ್ತು ಸತ್ತವರ ಪೋಟೋ ತೆಗೆದುಕೊಂಡು ಮೊದಲು ಗಣೇಶ ಪೂಜೆ ಮಾಡಿ ನಂತರ ನವಗ್ರಹ ಪೂಜೆ ಮಾಡಿ ನೀರು ಕಾಯಿ ಮನೆಯ ಬಾಗಿಲ ಮೂಲೆಗೆ ಕಟ್ಟಿ

ಗೋಮೂತ್ರದಿಂದ ಮನೆಯಲ್ಲಿ ಸಿಂಪಡಿಸಿ. ಶುಚಿ ಮಾಡುತ್ತಾರೆ. ಬ್ರಾಹ್ಮಣರಿಗೆ ದಾನವಾಗಿ ಪೂಜೆಗೆ ತಂದ ಎಲ್ಲಾ ವಸ್ತುಗಳನ್ನು ಕೊಡಲಾಗುತ್ತದೆ. ನಂತರ ಮನೆಯಲ್ಲಿ ಪೂಜೆ ಮೊದಲಾದ ಕಾರ್ಯಗಳನ್ನು ಮಾಡಿಕೊಳ್ಳಬಹುದಾಗಿದೆ.

**೪.೩ ನಂಬಿಕೆ, ವಿಧಿ–ನಿಷೇಧಗಳು**

**ನಂಬಿಕೆ**

ಜನಪದರ ಕೆಲಸ, ಆಲೋಚನೆ, ರೂಢಿ, ಜೀವನಕ್ರಮ ಸಂಪ್ರದಾಯ ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹಗಳಲ್ಲಿ ಸಾಮೂಹಿಕ ಮಾನ್ಯತೆ ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. ಪ್ರಕೃತಿಯ ರಹಸ್ಯವನ್ನು ಭೇಧಿಸುವಲ್ಲಿ ಆದಿಮಾನವನ ವಿಫಲತೆ, ಹುಟ್ಟು, ಬದುಕು, ಸಾವುಗಳ ನಿಗೂಢತೆಯನ್ನು ಅರ್ಥೈಸಲಾಗದ ಆತಂಕ, ಜಾತಿ–ಮತ, ಧರ್ಮಗಳು ತಮ್ಮ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ. ಈ ಹಿನ್ನೆಲೆಯಲ್ಲಿ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ.

ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನ. ಹೀಗಾಗಿ ಮಾನವನ ಬದುಕಿಗೂ, ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧವಿದೆ. ನಂಬಿಕೆಯು ಸೂಚನೆ, ನಿಯಮ, ವಿಧಿ–ನಿಷೇಧ, ನಿರ್ದೇಶನ, ಆಗ್ರಹ, ಆದೇಶ, ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ.

ಲೌಕಿಕ ಕ್ರೀಯೆಯನ್ನು ಗಟ್ಟಿಗೊಳಿಸಲು ಅಥವಾ ನಿಷೇಧಿಸಲು ಅದಕ್ಕೆ ಧಾರ್ಮಿಕ ಚೌಕಟ್ಟನ್ನು ಒದಗಿಸುವುದುಂಟು.

೧. ಸಂಜೆ ಹೊತ್ತಲ್ಲಿ ಕಸಗುಡಿಸಿ ಹೊರಹಾಕುವುದರಿಂದ ಲಕ್ಷ್ಮಿ ಹೊರಗೆ ಹೋಗುತ್ತಾಳೆ.
೨. ಅಕ್ಕಿಯ ಕಾಳನ್ನು ತಿಂದರೆ ಮದುವೆಯಲ್ಲಿ ಮಳೆ ಬರುತ್ತದೆ.
೩. ಕಾಲನ್ನು ತೊಳೆಯುವಾಗ ಹಿಂಬಡವನ್ನು ಚೆನ್ನಾಗಿ ತೋಯಿಸಿಕೊಳ್ಳಬೇಕು ಇಲ್ಲದಿದ್ದರೆ ಶನಿ ಹಿಡಿಯುತ್ತದೆ.
೪. ಸಂಜೆಯ ಹೊತ್ತಿನಲ್ಲಿ ಮಹಿಳೆಯರು ಶುಭ್ರವಾಗಿ ಕೈಕಾಲು ಮುಖ ತೊಳೆದು ತಲೆಬಾಚಿಕೊಂಡು ಹಣೆಗೆ ಕುಂಕುಮವನ್ನಿಟ್ಟು, ಮನೆಯಲ್ಲಿ ದೀಪ ಹಚ್ಚಿರಬೇಕು. ಆಗಲೂ ಲಕ್ಷ್ಮಿ ಬರುವುದುಂಟು ಎನ್ನುವುದು.
೫. ಆಷಾಢ ಮಾಸದಲ್ಲಿ ಮತ್ತು ಜೋಕಪ್ಪನ ಅಳಲಿನಲ್ಲಿ ಅತ್ತೆ–ಸೊಸೆ ಒಂದೇ ಮನೆಯಲ್ಲಿ ಓಡಾಡಬಾರದು. ಇತ್ಯಾದಿ ನಂಬಿಕೆಗಳೆಲ್ಲವೂ ದೇಶ,ಕಾಲ ವ್ಯಕ್ತಿಯೊಂದಿಗೆ ಸಾಪೇಕ್ಷ ಸಂಬಂಧ ಹೊಂದಿರುವಂತಹುಗಳು, ಒಂದು ನಂಬಿಕೆಯು ಒಬ್ಬನಿಗೆ ನಂಬಿಕೆಯಾಗಿದ್ದರೆ ಇನ್ನೊಬ್ಬನಿಗೆ

ಅದು ಮೂಢನಂಬಿಕೆಯು ಆಗಬಹುದು. ಮಾನವ ಬದುಕಿನ ಎಲ್ಲಾ ಮಗ್ಗಲುಗಳನ್ನು ಆವರಿಸಿಕೊಂಡಿರುವ ನಂಬಿಕೆಗಳು ಮನುಷ್ಯನ ಜೀವನದೊಂದಿಗೆ ನಿಕಟ ಸಂಬಂಧವನ್ನು ಪಡೆದುಕೊಂಡಿವೆ.

ಒಂದು ಪ್ರದೇಶದಲ್ಲಿ ಬದುಕುವ ಇಡೀ ಜನತೆ ಸಾರ್ವತ್ರಿಕವಾಗಿ ನಂಬುವ ಕೆಲವು ನಂಬಿಕೆಗಳು ಹೇಗಿವೆಯೋ ಹಾಗೆಯೇ ವಿಧಿ-ನಿಷೇಧಗಳುಂಟು ಈ ವಿಧಿ-ನಿಷೇಧಗಳು ಎನ್ನುವ ಕಲ್ಪನೆಯನ್ನು ಇಂದು ಬಹಳ ವಿಶಾಲವಾದ ಅರ್ಥದಲ್ಲಿ ಬಳಸಲಾಗುತ್ತದೆ. ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ನಂಬಿಕೆ, ವಿಧಿ-ನಿಷೇಧಗಳು ಸಂವಿಧಾನ ನಿಯಮಗಳಂತೆ ಇರುತ್ತವೆ. ಇವರು ಈ ನಿಯಮಗಳಿಗೆ ಬದ್ಧರಾಗಿಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವಿಸುತ್ತಾರೆ. ಈ ಪರಿಸರಕ್ಕೆ ಅನುಗುಣವಾಗಿ ಕಾಲಕಾಲಕ್ಕೆ ತಕ್ಕಂತೆ ನಂಬಿಕೆ-ನಿಷೇಧಗಳು ಅನ್ವಯಿಸುವುದಿಲ್ಲವಾದರೂ ಕೆಲವೊಂದು ಕಡ್ಡಾಯವಾಗಿ ಪಾಲಿಸಿಕೊಂಡು ಬಂದಿದ್ದಾರೆ. ಇನ್ನು ಕೆಲವು ನಂಬಿಕೆಗಳು ಈ ಸಮುದಾಯದಲ್ಲಿ ಸಾಂಪ್ರದಾಯಿಕವಾಗಿ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು.

ಯಾವುದೇ ಸಮುದಾಯಗಳು ಹೆಚ್ಚಾಗಿ ದೈವಗಳು ನುಡಿಯುವ ಭವಿಷ್ಯವಾಚಕಗಳ ನಿರ್ಣಯ ಮತ್ತು ನಿರ್ದೇಶನದಂತೆ ನಡೆಯುವುದನ್ನು ಕಾಣುತ್ತೇವೆ. ಇದಕ್ಕೆ ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ ಹೊರತಲ್ಲ. ಇವರುಗಳು ಹಲವು ಭವಿಷ್ಯವಾಚಕಗಳನ್ನು ನಂಬಿ ತಮ್ಮ ಕೆಲಸ ಕಾರ್ಯಗಳನ್ನು ರೂಪಿಸಿಕೊಳ್ಳುವುದುಂಟು.

ಇವರು ಬ್ರಾಹ್ಮಣರು ಹೇಳುವ ಪಂಚಾಂಗ ಭವಿಷ್ಯವನ್ನು ನಂಬುತ್ತಾರೆ. ತಮ್ಮ ಮನೆಗಳಲ್ಲಿ ಏನೇ ಕಾರ್ಯಗಳನ್ನು ಮಾಡಿದರೂ ಮೊದಲು ಬ್ರಾಹ್ಮಣರ ಬಳಿ ಹೋಗಿ ಕೇಳಿಸಿಕೊಂಡು ಬರುತ್ತಾರೆ. ಅವರು ಹೇಳುವ ಪ್ರಕಾರ ದೇವತಾಕಾರ್ಯ, ಪೂಜೆ, ಮದುವೆ, ನಾಮಕರಣದಂತ ಕಾರ್ಯಗಳನ್ನು ಚಾಚೂ ತಪ್ಪದೇ ಪಾಲಿಸುತ್ತಾರೆ. ಶಕುನಗಳನ್ನು ನಂಬುತ್ತಾರೆ. ಒಂಟಿ ಸೀನು ಅವಲಕ್ಷಣ, ಜೋಡಿ ಸೀನು ಶುಭಶಕುನ, ತುಂಬಿದ ಕೊಡ ಎದುರಿಗೆ ಬಂದರೆ ಶುಭಶಕುನ, ಕಟ್ಟಿಗೆಯ ಹೊರೆ ಎದುರಿಗೆ ಬಂದರೆ ಅಪಶಕುನ, ಕಾಗೆ ಕೂಗಿದರೆ ಪೌಣೇರು ಬರುವರೆಂದು ನಂಬಿಕೆ. ಹಲ್ಲಿ ಲೊಚಗುಟ್ಟಿದರೂ ಶಕುನ ಹೇಳುತ್ತಾರೆ. ಇವರು ತಮ್ಮ ವೈಯಕ್ತಿಕ ಸಮಸ್ಯೆಗಳಿಗೆಲ್ಲ ದೇವತೆಗಳ ಮೊರೆ ಹೋಗುತ್ತಾರೆ. ಮಕ್ಕಳ ಫಲಬೇಕೆಂದರೂ, ಗಂಡೂ ಮಗು ಬೇಕಾದರೂ, ಮದುವೆಯಾಗಬೇಕಾದರೂ ಖಾಯಿಲೆ ವಾಸಿಯಾಗಬೇಕಾದರೂ, ಮುತ್ತೈದೆತನ ವೃದ್ಧಿಸಲು ದೇವತೆಗಳಲ್ಲಿ ಮೊರೆ ಹೋಗುತ್ತಾರೆ. ಹಾಗೆಯೇ ಒಳ್ಳೆಯದಾಗಲೆಂದು ಹೂವಿನ ಪ್ರಸಾದ ಕೇಳುವುದು ರೂಢಿಯಾಗಿ ಬಂದಿದೆ. ದೇವತೆಯು ಬಲಭಾಗದಿಂದ ಹೂವನ್ನು ಕೊಟ್ಟರೆ ಅಂದುಕೊಂಡ ಕೆಲಸ ಯಶಸ್ವಿಯಾಗುತ್ತದೆಂದು ನಂಬಿದ್ದಾರೆ. ಒಂದು ವೇಳೆ ಎಡಭಾಗದಿಂದ ಹೂವಿನ ಪ್ರಸಾದ ದೊರೆತಲ್ಲಿ ಕೆಲಸ ಮುಂದುವರೆಯುವುದಿಲ್ಲ.

ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ಅನುಭವದ ನೆಲೆಯಲ್ಲಿ ಹುಟ್ಟಿಕೊಂಡು ಸಾಮೂಹಿಕವಾಗಿ ಮಾನ್ಯತೆ ಪಡೆದುಕೊಂಡರೆ ಅದು ನಂಬಿಕೆಯಾಗುತ್ತದೆ. ಪ್ರಕೃತಿಯ ರಹಸ್ಯವನ್ನು ಬೇಧಿಸುವಲ್ಲಿ ವಿಫಲನಾದ ಮಾನವ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಡೆಸಿದ ಹೋರಾಟ, ಆಚರಣೆಗಳ ಫಲವಾಗಿ ನಂಬಿಕೆಗಳು ಹುಟ್ಟಿಕೊಂಡಿವೆ. ಭಾರತದ ಬಹುತೇಕ ಎಲ್ಲಾ ಗ್ರಾಮಗಳಲ್ಲಿ ಇನ್ನೂ ಕೆಲವು ನಂಬಿಕೆಗಳು ಧಾರ್ಮಿಕ ನೆಲೆಗಟ್ಟನ್ನು ಪಡೆದುಕೊಂಡಿರುವುದರಿಂದ, ಸಾಮಾಜಿಕ ಜೀವನದೊಂದಿಗೆ ಹಾಸು ಹೊಕ್ಕಾಗಿರುವುದರಿಂದ ಇನ್ನೂ ಮುಂದುವರೆದುಕೊಂಡು ಬಂದಿವೆ.

ಮಾನವನ ಇಂತಹ ಎಲ್ಲಾ ನಂಬಿಕೆಗಳನ್ನು ಮೂಢನಂಬಿಕೆಗಳೆಂದು ತಿರಸ್ಕರಿಸಲು ಸಾಧ್ಯವಿಲ್ಲ. ಏಕೆಂದರೆ ಅವು ಮೂಢನಂಬಿಕೆಗಳಾಗಿ ಕಂಡು ಬಂದರೂ ಕೆಲವೊಂದು ನಂಬಿಕೆಗಳು ನಿಷೇಧಗಳು ವೈಜ್ಞಾನಿಕ ಸ್ವರೂಪವನ್ನು ಪಡೆದುಕೊಂಡಿವೆ.

ಇನ್ನು ಭಯ ಮತ್ತು ಭಾವನಾಮೂಲವಾದ ಒಂದು ನಂಬಿಕೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಅಥವಾ ಬಲಗೊಳಿಸವಂತಹದು ನಿಷೇಧವಾಗಿದೆ. ಇದನ್ನು ಮಾಡಬಾರದು, ಇದು ಕೆಡಕು ಎನ್ನುವ ಸಾಮಾಜಿಕ, ಧಾರ್ಮಿಕ, ಪ್ರತಿಬಂಧಕವೇ ನಿಷಿದ್ಧ. ಹೀಗಾಗಿ ಲಿಖಿತ ಕಾನೂನನ್ನು ಮೀರಿಸುವಂತ ಶಕ್ತಿ ನಿಬಂಧನೆಯಾಗಿ ನಿಷೇಧ ಕಾರ್ಯನಿರ್ವಹಿಸುತ್ತದೆ. ನಿಷೇಧಕ್ಕೂ ಮತ್ತು ಸಾಮಾಜಿಕ ನಿಯಮಗಳಿಗೂ ಅವಿನಾಭಾವ ಸಂಬಂಧವಿದೆ. ಏಕೆಂದರೆ ನಿಷೇಧದ ಹಿಂದೆ ಸಾಮಾಜಿಕ ನಿಯಮಗಳು ಇರುತ್ತವೆ. ಅದರಿಂದ ನಿಷೇಧವನ್ನು ಮೀರುವುದೆಂದರೆ, ಸಾಮಾಜಿಕ ನಿಯಮಗಳನ್ನು ಮೀರಿದಂತಾಗುತ್ತದೆ. ಹೀಗೆ ಸಾಮಾಜಿಕ ನಿಯಮಗಳನ್ನು ಉಲ್ಲಂಘಿಸಿದರೆ ನಿಷೇಧವೇ ಸೇಡನ್ನು ತೀರಿಸಿಕೊಳ್ಳುತ್ತದೆ ಎಂದು ತಿಳಿಯಲಾಗುತ್ತದೆ.

ಇಂತಹ ನಿಷೇಧಗಳು ಹಲವಾರು ಉದ್ದೇಶಗಳಿಂದ ಬಳಕೆಗೆ ಬಂದಿರಬಹುದು. ಮೊದಲನೆಯದಾಗಿ ಗ್ರಾಮ. ಹಳ್ಳಿಗಳ ಹಿರಿಯ ಮುಖಂಡರು, ಪೂಜಾರಿಗಳು, ಮೊದಲಾದ ಪ್ರಮುಖರು ತಮ್ಮ ರಕ್ಷಣೆಗಾಗಿ ಮಾಡಿಕೊಂಡಿರುವ ನಿಷೇಧಗಳು. ನಿಗೂಢಶಕ್ತಿಗಳ ಪ್ರಭಾವದಿಂದ ಸಾಮಾನ್ಯ ಮಾನವರು ರಕ್ಷಣೆ ಪಡೆಯುತ್ತಿದ್ದರು. ಉದಾ: ರಾತ್ರಿವೇಳೆಯಲ್ಲಿ ಊಟ ಮಾಡಬಾರದು. ರಾತ್ರಿ ವೇಳೆ ಎಲ್ಲೆಂದರಲ್ಲಿ ಓಡಾಡಬಾರದು ಎನ್ನುವರು.

ನಂಬಿಕೆಗಳು, ವಿಧಿ–ನಿಷೇಧಗಳು ಮತ್ತು ನ್ಯಾಯಪದ್ಧತಿಗಳು ಪ್ರತಿಯೊಂದು ಸಮುದಾಯಗಳಲ್ಲೂ ಏಕಪ್ರಕಾರವಾಗಿ ಕಂಡು ಬರುತ್ತಿದ್ದರೂ ಕೆಲವೊಂದು ನಂಬಿಕೆಗಳು ವಿದಿ–ನಿಷೇಧಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತವೆ.

**ನಂಬಿಕೆಗಳು :**

೧. ಪತ್ನಿ ಗರ್ಭಿಣಿಯಾಗಿದ್ದಾಗ ಪತಿಯಾದವನು ಮರವನ್ನು ಕಡಿಯಬಾರದು, ಕೋಳಿಯನ್ನು ಕೊಯ್ಯಬಾರದು, ಹಾವುಗಳನ್ನು ಹೊಡೆಯಬಾರದು, ಸತ್ತವರ ಮನೆಗಳಿಗೆ ಹೋಗಬಾರದು.

೨. ಪ್ರಾಣಿ ಹಿಂಸೆ ಮಾಡಿದರೆ ಭ್ರೂಣಕ್ಕೂ ಕೇಡುಂಟು.

೩. ಗರ್ಭಿಣಿಯರ ನೆರಳು ಹಾವುಗಳ ಮೇಲೆ ಬೀಳಬಾರದು.

೪. ಯಾವುದೇ ಊರಿಗೆ ಹೋಗುವಾಗ ಎದುರಿಗೆ ವಿಧವೆ ಬರಬಾರದು.

೫. ಮುಖ್ಯ ಕೆಲಸಗಳಿಗೆ ಹೋಗುವಾಗ ಖಾಲಿಕೊಡ ಬರಬಾರದು. ಮನೆಯಲ್ಲಿ ಮಕ್ಕಳು ಹಠ ಮಾಡಬಾರದು.

೬. ಹೆಣ್ಣಿನ ಕಾಲಿನ ಕಿರುಬೆರಳು ನೆಲಕ್ಕೆ ತಾಗಿಕೊಂಡು ಇರದಿದ್ದಲ್ಲಿ ಗಂಡ ಬೇಗನೇ ಸಾಯುತ್ತಾನೆ.

೭. ಹೆಣ್ಣಿನ ಕೂದಲು ಮೊಣಕಾಲಿಗೆ ತಾಗಿದರೆ ಗಂಡನ ಮನೆಗೆ ಕೇಡು.

೮. ಕುದುರೆ ಕಾಲಿನ ಹೆಣ್ಣು ಕುಲಕ್ಕೆ ಕೇಡು.

೯. ಆಷಾಢದಲ್ಲಿ ಹೆಣ್ಣು ಮೈ ನೆರೆತರೆ ಸಂಸಾರಕ್ಕೆ ಕೇಡು.

೧೦. ಹೆಂಡತಿ ಗಂಡನ ಹೆಸರು ಹೇಳಿದರೆ, ಗಂಡನ ಆಯಸ್ಸು ಕಡಿಮೆ ಆಗುತ್ತದೆ.

೧೧. ಶುಕ್ರವಾರ ಹಣವನ್ನು ಯಾರಿಗೂ ಕೊಡಲಾಗುವುದಿಲ್ಲ.

೧೨. ರಾತ್ರಿ ವೇಳೆ ಕಸ ಹೊರಗಡೆ ಹಾಕುವಂತಿಲ್ಲ.

೧೩. ಮನೆಯ ಬಾಗಿಲು ಪೂರ್ವ ಅಥವಾ ಉತ್ತರ ದಿಕ್ಕಿಗೆ ಇರಬೇಕು.

೧೪. ಮನೆಯನ್ನು ಕಟ್ಟುವಾಗ ಸುಣ್ಣದ ಮಡಕೆ, ಬೆದರುಗೊಂಬೆ ಕಟ್ಟಬೇಕು.

೧೫. ಗಂಡಸಿಗೆ ಎಡಹುಬ್ಬು, ಹೆಂಗಸರಿಗೆ ಬಲಹುಬ್ಬು ಹಾರಿದರೆ ಅಪಶಕುನ.

೧೬. ಮನೆಯ ಮುಂದೆ ಕಾಗೆ ಕೂಗಿದರೆ ದರಿದ್ರ.

೧೭. ಕಾಲನ್ನು ತೊಳೆಯುವಾಗ ಓಮ್ಮಡಿ ಪೂರ್ತಿ ನೆನೆಯಬೇಕು. ಇಲ್ಲವಾದರೆ ಶನಿ ಒಳಗಡೆ ಬರುತ್ತಾನೆ.

೧೮. ತಾಳಿ ಬಿಚ್ಚಿ ಹೊಸ್ತಿಲು ದಾಟಬಾರದು.

೧೯. ಸಂಜೆ ದೀಪ ಹೊತ್ತಿಸಿದ ಮೇಲೆ ಸ್ವಲ್ಪ ಹೊತ್ತಾದರೂ ಬಾಗಿಲು ತೆರೆದಿಡಬೇಕು.

೨೦. ಮದುವೆಯಾದ ವರ್ಷದ ಆಷಾಢದಲ್ಲಿ ಅತ್ತೆ ಸೊಸೆ ಒಂದೇ ಬಾಗಿಲಲ್ಲಿ ತಿರುಗಾಡಬಾರದು.

೨೧. ಶುಭ ಕಾರ್ಯಕ್ಕೆ ಮೂರು ಜನ ಹೋಗಬಾರದು.

೨೨. ಹೊರಗಡೆ ಹೊರಟಾಗ ಬೆಕ್ಕು ಬಲದಿಂದ ಎಡಕ್ಕೆ ಹೋದರೆ ಅಶುಭ.

**ಕಣ್ಣು ಹಾರುವುದು :-**

ಮಹಿಳೆಯರಿಗೆ ಎಡಗಡೆಯ ಕಣ್ಣು ಹಾರಿದರೆ ಶುಭ ಶಕುನವೆಂದೂ, ಮನೆಗೆ ಸಂಬಂಧಿಕರು ಬರುವರೆಂದು ನಂಬುತ್ತಾರೆ. ಪುರುಷರಿಗೆ ಬಲಗಣ್ಣು ಹಾರಿದರೆ ಕಾರ್ಯಸಿದ್ಧಿ ಎನ್ನುವ ನಂಬಿಕೆ ಇದೆ.

**ಹಲ್ಲಿ ಶಕುನ :–**

ಮನೆಗಳಲ್ಲಿ ಯಾವುದಾದರೂ ಶುಭಕಾರ್ಯಗಳ ಬಗ್ಗೆ ಮಾತನಾಡುವಾಗ ಬಾಗಿಲ ಮುಂದೆ ಅಥವಾ ಮೇಲೆ ಬೇರೆ ಬೇರೆ ಸ್ಥಳಗಳಲ್ಲಿ ಹಲ್ಲಿ ಲೊಚಗುಟ್ಟಿದಾಗ ಅದು ಲೋಚಗುಟ್ಟುವ ಶಬ್ದಗಳ ಸಂಖ್ಯೆಗಳ ಆಧಾರದ ಮೇಲೆ ಎರಡು ಬಾರಿ ಲೊಚಗುಟ್ಟಿದರೆ ಶುಭವೆಂದು, ಕಾರ್ಯಸಿದ್ದಿಯೆಂದು ಮೂರುಬಾರಿ ಲೋಚಗುಟ್ಟಿದರೆ ಅಶುಭವೆಂದು ಭಾವಿಸುವ ಪ್ರತೀತಿ ಬಾಹುಸಾರ ಕ್ಷತ್ರಿಯ ಸಮುದಾಯಗಳಲ್ಲೂ ಇದೆ.

**ಟಿವುಕದ ಶಕುನ :–**

ಈ ಪಕ್ಷಿಯು ರಾತ್ರಿ ವೇಳೆ ಮನೆಯ ಮೇಲೆ ಅರಚುತ್ತಾ ಮೂರುದಿನ ಹಾರಿದರೆ ಆ ಮನೆಯಲ್ಲಿ ಯಾರಾದರೂ ರೋಗದಿಂದ ಬಳಲುತ್ತಿದ್ದರೆ ಅವರು ಸಾಯುತ್ತಾರೆ. ಇಲ್ಲವೇ ಸುದ್ದಿ ಕೇಳಿ ಬರುತ್ತದೆ. ಎನ್ನುವುದು ಒಂದು ನಂಬಿಕೆಯಾಗಿದೆ.

**ಬೆಕ್ಕು :–**

ಶುಭ ಕೆಲಸಗಳಿಗೆ ಹೋಗುವಾಗ ಬೆಕ್ಕು ಕಾಲಿಗೆ ಅಡ್ಡ ಬಂದರೆ ಇಲ್ಲವೇ ಬಲದಿಂದ ಎಡಕ್ಕೆ ಹಾದು ಹೋದರೆ ಶುಭವಾಗುವುದಿಲ್ಲ. ಹೋದ ಕೆಲಸವೂ ಆಗುವುದಿಲ್ಲ. ಅದಕ್ಕೆ ಆ ಕೆಲಸ ಮಾಡುವುದನ್ನು ಅಲ್ಲಿಗೆ ನಿಲ್ಲಿಸುತ್ತೇವೆ ಎನ್ನುವುದು ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಅಭಿಪ್ರಾಯವಾಗಿದೆ.

**ನಾಲಿಗೆಯ ತುದಿಯಲ್ಲಿ ಮಚ್ಚೆ ಇರುವವರ ನುಡಿಗಳು :–**

ಇಂತಹ ಯಾವುದೇ ಪುರುಷ ಅಥವಾ ಮಹಿಳೆಯರು ಯಾವುದೇ ಕಾರಣಕ್ಕೂ ಅಪ್ಪಿತಪ್ಪಿಯೂ ಈ ಕೆಲಸ ಆಗುವುದಿಲ್ಲ, ಅದು ಉತ್ತಮವಾಗಿಲ್ಲವೆಂದು ಹೇಳಿದರೆ ಅಂತಹ ಯಾವ ಕೆಲಸವೂ ಆಗುವುದಿಲ್ಲ. ಆದ್ದರಿಂದ ಅವರಿಗೆ ಬೈದು ಸುಮ್ಮನಿರಿಸುತ್ತೇವೆ ಎನ್ನುತ್ತಾರೆ ಈ ಸಮುದಾಯದವರು. ನಂಬಿಕೆಗಳನ್ನು ಸಾರಾಸಗಟಾಗಿ ಊಹಾತ್ಮಕ, ವಿಚಾರಹೀನ ಹಾಗೂ ಅವಾಸ್ತವವೆಂದು ಅಲ್ಲಗಳೆಯುವ ಹಾಗಿಲ್ಲ. ದೀರ್ಘಾಲೋಚನೆ ಅನುಭವಗಳ ಫಲವಾಗಿ ಅವು ರೂಪ ಪಡೆದಿರುವುದಂತೂ ಸತ್ಯ, ವ್ಯಕ್ತಿಗಳ ಹಾಗೂ ಸಮಾಜದ ಹಿತರಕ್ಷಣೆಗೆಂದು ಹಿರಿಯರು ನಿಗಧಿಸಿದ ಶೀಲ ನಿಯಮಗಳನ್ನಾಧರಿಸಿ ಹುಟ್ಟಿದ ನಂಬಿಕೆಗಳು ವಿಚಾರಹೀನವಾದವುಗಳೆಂದು ತಿರಸ್ಕರಿಸುವುದು ಸರಿಯಲ್ಲವೆನಿಸುತ್ತದೆ. ವಿಶಾಲವಾದ ಅರ್ಥದಲ್ಲಿ ನಂಬಿಕೆ ಎಂದರೆ ಜ್ಞಾನವೇ ಎಂದು ಗೊತ್ತಾಗುತ್ತದೆ.

ಅನೇಕ ನಂಬಿಕೆಗಳಿಗೆ ಶಾಶ್ವತ ಸಾಂಸ್ಕೃತಿಕ ಮೌಲ್ಯವಿದೆ ಎಂಬುದನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ನಂಬಿಕೆಗಳ ಜಗತ್ತು ಮೇರೆಯಿಲ್ಲದ್ದು, ಬದುಕಿನಷ್ಟೇ ಅದು ವೈವಿಧ್ಯಮಯವಾಗಿದೆ, ವಿಶಾಲವಾಗಿದೆ ಅಂತೆಯೇ ಸಂಕೀರ್ಣವಾಗಿದೆ.

**ಈ ಸಮುದಾಯದ ಕೆಲವು ನಿಷಿದ್ದಗಳು ಇಂತಿವೆ :-**

೧. ಬಂಜೆಯರು ಮಕ್ಕಳನ್ನು ಮುಟ್ಟಬಾರದು.
೨. ಕೂದಲು ಮತ್ತು ಉಗುರುಗಳನ್ನು ಸಿಕ್ಕಲ್ಲಿ ಬಿಸಾಕಬಾರದು.
೩. ಮಕ್ಕಳ ಮೊದಲ ಕೂದಲನ್ನು ದೇವರಿಗೆ ಮುಡಿ ಕೊಡುವುದು.
೪. ಮಲಗಿರುವ ಮಕ್ಕಳಿಗೆ ಅಲಂಕಾರ ಮಾಡಬಾರದು.
೫. ಬೀಸುವ ಕಲ್ಲನ್ನು ಒದೆಯಬಾರದು.
೬. ರಾತ್ರಿ ತಲೆ ಬಾಚಿಕೊಳ್ಳುವುದು ಸರಿಯಲ್ಲ.
೭. ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು ಮತ್ತು ನಿಲ್ಲಬಾರದು.
೮. ಬಸುರಿಯವರ ಆಸೆಯನ್ನು ಪೂರೈಸಬೇಕು, ಇಲ್ಲದಿದ್ದರೆ ಮಗುವಿನ ಕಿವಿ ಸೋರುತ್ತದೆ.
೯. ಮಕ್ಕಳು ಆದರೆ ವರಕೊಟ್ಟ ದೇವರಿಗೆ ಹರಕೆ ಹೊರುವುದು.
೧೦. ಸತ್ತವರಿಗೆ ನೀಡಿದ ಮೂರು ಕೂಳನ್ನು ಕಾಗೆ ಮುಟ್ಟದಿದ್ದರೆ ಅವರಿಗೆ ಮುಕ್ತಿಯಿಲ್ಲ.
೧೧. ಗೂಬೆಯ ಶಬ್ದ ಅಶುಭ
೧೨. ದೀಪ ಹಚ್ಚಿದ ಮೇಲೆ ಮನೆಯಿಂದ ಏನನ್ನು ಕೊಡದಿರುವುದು.
೧೩. ಬೆಕ್ಕು ಅಡ್ಡ ಬಂದರೆ ಪ್ರಯಾಣ ನಿಷಿದ್ದ.
೧೪. ತಲೆಯ ಮೇಲೆ ಕಾಗೆ ಕುಳಿತರೆ ಸಾವಿನ ಸುದ್ದಿ
೧೫. ಕಾಗೆ ಮನೆಯ ಮೇಲೆ ಕುಳಿತು ಕೂಗಿದರೆ ನೆಂಟರು ಬರುತ್ತಾರೆ.
೧೬. ಹಾವುಗಳ ಸಂಭೋಗ ಕ್ರಿಯೆ ನೋಡಿದರೆ ಅಶುಭ.
೧೭. ಬೆಳಗಿನ ಸಮಯದಲ್ಲಿ ನರಿಯನ್ನು ನೋಡಿದರೆ ಶುಭ
೧೮. ಎಲ್ಲಿಗಾದರೂ ಹೊರಟಾಗ ಕತ್ತೆ ಅರಚಿದರೆ ಶುಭ.
೧೯. ಸಂಬಾರ ಕಾಗೆ (ರತ್ನಪಕ್ಷಿ)ಯ ದರುಶನ ಶುಭ.
೨೦. ಬೆಕ್ಕು ಮುಖವನ್ನು ತೊಳದರೆ ಶುಭವಾಗುವುದು.
೨೧. ಮಕ್ಕಳಿಗೆ ಬಂಜೆ ಹೆಣ್ಣಿನ ಎದುರಿಗೆ ಹಾಲುಣಿಸುವುದಿಲ್ಲ.
೨೨. ಶುಕ್ರವಾರ ಮನೆಯ ಸೊಸೆ ತವರು ಮನೆಗೆ ಹೋಗುವಂತಿಲ್ಲ.
೨೩. ದೇವರಲ್ಲಿ ಹೂ ಕೇಳಿದಾಗ ಬಲಗಡೆಯಿಂದ ಕೊಟ್ಟರೆ ಕೆಲಸವಾಗುತ್ತದೆ.
೨೪. ಋತುಮತಿಯಾದ ಹುಡುಗಿಯನ್ನು ಪ್ರತ್ಯೇಕವಾಗಿಡುತ್ತಾರೆ.

೨೫. ಹುಟ್ಟಿದ ಮಗುವಿಗೆ ಎಣ್ಣೆಸ್ನಾನ ಮಾಡಿಸಿ ಮೊರದಲ್ಲಿ ಹಾಕಿಕೊಂಡು ಒಂದು ಬಟ್ಟೆಯಲ್ಲಿ ಹಾಕುತ್ತಾರೆ.

೨೬. ಗರ್ಭಿಣಿ ಮಹಿಳೆ ರಾತ್ರಿ ಹೊತ್ತು ಅಂಗಳದಲ್ಲಿ ಮಲಗುವ ಹಾಗಿಲ್ಲ.

೨೭. ಗರ್ಭಿಣಿ ಮಹಿಳೆ ಬಹಳ ಸುಡುವ ನೀರಸ್ನಾನ ಮಾಡಿದರೆ ನರಗಳು ಸಡಿಲಗೊಂಡು ಸುಲಭ ಹೆರಿಗೆಯಾಗುತ್ತದಂತೆ.

೨೮. ಚಿಕ್ಕ ಮಗುವನ್ನು ಮುಟ್ಟಾದವರು ಎತ್ತಿ ಆಡಿಸುವಂತಿಲ್ಲ.

೨೯. ಋತುಮತಿಯಾದ ಹುಡುಗಿ, ಬಾಣಂತಿಯರು ಮಲಗುವಾಗ ತಲೆದಿಂಬಿನ ಕೆಳಗೆ ಕುಡುಗೋಲು, ನಿಂಬೆಹಣ್ಣು, ಕಸಪೊರಕೆ ಇಟ್ಟುಕೊಂಡು ಮಗಲಬೇಕು.

೩೦. ಮನೆದೇವರಲ್ಲಿ ಮಗುವಿಗೆ ಜವಳ ತೆಗೆಯುವ ತನಕ ಕ್ಷೌರವನ್ನು ಮಾಡಿಸುವಂತಿಲ್ಲ.

೩೧. ಮಗುವಿಗೆ ಐದು ತಿಂಗಳಾಗುವ ತನಕ ಬಾಚಣಿಕೆಯನ್ನು ತಲೆಗೆ ಇಡುವಂತಿಲ್ಲ.

೩೨. ದೈವವು ಹೂವನ್ನು ಪ್ರಸಾದವಾಗಿ ಎಡಗಡೆ ಭಾಗದಿಂದ ನೀಡಿದರೆ ಅಶುಭ.

೩೩. ಮಂಗಳವಾರ ಮಗಳನ್ನು ಮನೆಬಿಟ್ಟು ಗಂಡನ ಮನೆಗೆ ಕಳಿಸುವಂತಿಲ್ಲ.

೩೪. ಅಮಾವಾಸ್ಯೆಯ ದಿನ ಗಂಡು ಹುಟ್ಟಿದರೆ ಚಿಂತೆಗೀಡಾಗುವುದು.

೩೫. ಹುಣ್ಣಿಮೆಯ ದಿನ ಹೆಣ್ಣು ಹುಟ್ಟಿದರೆ ಚಿಂತೆಗೀಡಾಗುವರು.

೩೬. ಹೂವಿನ ಬುಟ್ಟಿ ಎದುರಾದರೆ ಕೆಲಸ ಸುಲಭವಾಗಿ ನಡೆಯುತ್ತದೆ.

೩೭. ದೇವಿಯನ್ನು ನೆನಪಿಸಿಕೊಂಡರೆ ದುಷ್ಟಶಕ್ತಿಗಳು ನಮ್ಮ ಬಳಿ ಸುಳಿಯುವುದಿಲ್ಲ.

೩೮. ಬೇವಿನಕಟ್ಟಿಗೆ ಮತ್ತು ಬನ್ನಿಯ ಕಟ್ಟಿಗೆಯನ್ನು ಉರಿಸಿದರೆ ಕಷ್ಟಗಳು ಬರುತ್ತವೆ.

೩೯. ಕಟ್ಟೆಯ ಮೇಲೆ ಕೂತು ಕಾಲು ತೂಗಬಾರದು.

೪೦. ತೊನ್ನು ರೋಗ ಇರುವ ವ್ಯಕ್ತಿಯನ್ನು ಸುಡುತ್ತಾರೆ.

೪೧. ಬಾಣಂತಿ ಸತ್ತರೆ ಸುಡುತ್ತಾರೆ

೪೨. ಸ್ಥಿರ ಮುತ್ತೈದೆಯರು ಸತ್ತರೆ ಸುಡುತ್ತಾರೆ.

೪೩. ಶವಸಂಸ್ಕಾರ ಹೋದವರು ನೇರವಾಗಿ ಮನೆಗೆ ಬರುವಂತಿಲ್ಲ.

೪೪. ಮೃತ ದೇಹವನ್ನು ಬಹಳ ಹೊತ್ತಿನ ತನಕ ಇಡುವಂತಿಲ್ಲ.

೪೫. ಸಾವು ಸಂಭವಿಸಿದ ಮನೆಗೆ ಸೂತಕ ಬಂದಿರುತ್ತದೆ.

೪೬. ಹೊಸ್ತಿಲ ಮೇಲೆ ಸೀನುವುದು ಒಳಿತಲ್ಲ.

೪೭. ಸ್ತ್ರೀಯರು ಮೂಗಿನ ಬಲಕ್ಕೆ ಮೂಗುತಿ ಧರಿಸುವಂತಿಲ್ಲ

೪೮. ಒಂದೇ ಬೆಡಗುಳ್ಳ ವಧು–ವರರು ವಿವಾಹ ಆಗುವಂತಿಲ್ಲ

೪೯. ಮಗುವು ಮೊರದಲ್ಲಿ ಸೀನಿದರೆ, ಮೊರದ ತುಂಬ ಕಡುಬು ಮಾಡಬೇಕು.

೫೦. ಸ್ತ್ರೀಯರು ಹಣೆಯ ಮೇಲೆ ದುಂಡಾಗಿ ಕುಂಕುಮ ಹಚ್ಚುವುದು.

**ಹರಕೆಗಳು**

ಉಡುಗೊರೆ, ಹರಕೆಗಳು, ಬಲಿಕೊಡುವ ಹರಕೆಗಳು, ನಿರ್ಮಾಣ ಹರಕೆಗಳು, ನಿಗದಿಯಾದ ವಸ್ತುವನ್ನು ಯಥಾವತ್ತಾಗಿ ದೇವರಿಗೆ ಅರ್ಪಿಸುವಂತವುಗಳನ್ನು ಉಡುಗೊರೆ ಎಂದು ಕರೆಯಲಾಗಿದೆ. ಎಲ್ಲ ಬಗೆಯ ಹರಕೆಗಳಿಗಿಂತ ಉಡುಗೊರೆ ಹರಕೆಗಳು ಬಹುವ್ಯಾಪಕ ಮತ್ತು ಸಮೃದ್ಧವಾಗಿದೆ.

ಭಾರತೀಯ ಜನಜೀವನದಲ್ಲಿ ದೈವಭಕ್ತಿ ಪ್ರಧಾನವಾದದ್ದು. ಜನತೆಯಲ್ಲಿ ದೈವ ಮಹಿಮೆ ಭಕ್ತಿ, ಶ್ರದ್ಧೆಗಳ ಪ್ರಕಾಶನಕ್ಕೆ, ಪ್ರಸಾರಕ್ಕೆ ಹಬ್ಬ ಹರಿದಿನ, ವ್ರತ, ಕತೆ, ಪುರಾಣ, ಯಾತ್ರೆ, ಜಾತ್ರೆಗಳೆಲ್ಲ ಪೋಷಕ. ಹಬ್ಬದಾಚರಣೆಯಾದರೂ ಸಾಂಕ್ರಾಮಿಕ. ಒಬ್ಬರು ಮಾಡಿದಂತೆಯೇ ಇನ್ನೊಬ್ಬರು ಮಾಡದಿದ್ದರೂ ಇನ್ನೊಬ್ಬರಿಗಿಂತ ಉತ್ತಮವಾಗಿ ಹಬ್ಬ, ಉತ್ಸವ, ದೈವಾರಾಧನೆಯಿಂದ ಮಾಡಬೇಕೆಂಬ ಹಂಬಲ ಎಲ್ಲಾ ಭಕ್ತಾದಿಗಳಿಗೂ ಉಂಟು. ಬಾಹುಸಾರ ಕ್ಷತ್ರಿಯರಿಗೆ ತಮ್ಮ ತಮ್ಮ ಮನೆ ದೇವರು, ಕುಲದೇವರು, ತಮ್ಮ ಪಿತೃದೇವತೆಗಳು, ತಾವು ಮರೆಬಿದ್ದ ದೇವರು ತಮ್ಮನ್ನು ಮೊರೆಹೊಕ್ಕ ದೇವರು, ಕಾಡಿದ ಬೇಡಿದ ದೇವರು, ಜೋಯಿಸರ ಶಾಸ್ತ್ರದಲ್ಲಿ ಹುಟ್ಟಿದ ದೇವರು, ಇವರೆಲ್ಲರಿಗೂ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಪ್ರಾಕೃತಿಕವಾದ ನೆಲ, ಮಳೆ, ಒಲೆ, ರಾಗೀಕಲ್ಲು, ಮೊರ, ಕಸಬಾರಿಕೆ ಇವೂ ಕೂಡಾ ಇವರಿಗೆ ದೈವವೇ. ನಾಯಿ ನಾರಾಯಣಸ್ವಾಮಿ, ಮೊರ, ಕಸಬಾರಿಕೆ ಇವುಗಳು ಕೂಡಾ ಲಕ್ಷ್ಮಿ ಎಂಬ ನಂಬಿಕೆ. ಈ ಜನ ಮುಸ್ಲೀಮರ ರಂಜಾನ ಹಬ್ಬದಲ್ಲಿ ವೇಷ ಕಟ್ಟುತ್ತಾರೆ. ಹರಕೆಯನ್ನು ಕಟ್ಟಿಕೊಳ್ಳುತ್ತಾರೆ.

ತಮ್ಮ ಬಂಧು ಬಳಗದವರಷ್ಟೇ ಸೇರಿಕೊಂಡು ಮಾಡುವ ಹಬ್ಬ ಹರಿದಿನಗಳು ಉದಾಹರಣೆಗೆ : ಒಂದು ಮನೆ ದೇವತೆ– ಹುಲಿಗೆಮ್ಮ , ಹರಕೆ ಹೊತ್ತುಕೊಂಡು ಪೂಜೆ ಸಲ್ಲಿಸಲಾಗುತ್ತದೆ.

ಬಾಹುಸಾರ ಕ್ಷತ್ರಿಯ ಸಮುದಾಯದವರು ಪ್ರಮುಖವಾಗಿ ಶಕ್ತಿದೇವತೆಗಳನ್ನು ಆರಾಧಿಸುತ್ತಾರೆ. ಮಾರೆಮ್ಮ, ತುಳಜಾಭವಾನಿ, ಯಲ್ಲಮ್ಮ, ತಾಯಮ್ಮ, ಊರಮ್ಮ ಮೊದಲಾದ ದೇವತೆಗಳು ಇವರ ಕುಲದೇವತೆಗಳು ಆಗಿದ್ದಾರೆ. ಎಲ್ಲ ದೇವತೆಗಳನ್ನು ಮಂಗಳವಾರ, ಶುಕ್ರವಾರ ಪೂಜಿಸುವುದು ಈ ತಾಯಮ್ಮ ದೇವತೆ. ಈ ದೇವತೆ ಊರನ್ನು, ತಮ್ಮನ್ನು ಕಾಪಾಡುತ್ತಾಳೆಂದು ನಂಬುತ್ತಾರೆ. ಪೂಜೆಯ ದಿನ ಸ್ನಾನ ಮಾಡಿ ಉಪವಾಸದಿಂದ ಪೂಜಿಸ ಬೇಕಾಗುತ್ತದೆ. ಸಂಜೆ ಮಾತ್ರ ಊಟ ಮಾಡುತ್ತಾರೆ. ಈ ದೇವತೆಗೆ ವರ್ಷಕ್ಕೊಂದು ಸಲ ಕುರಿ ಬಲಿ ಕೊಡುವುದು ಇವರ ಪದ್ಧತಿಯಾಗಿದೆ.

ಕೆಲವರು ಹಲವಾರು ಎಧಗಳಲ್ಲಿ ದೈವಗಳನ್ನು ಆರಾಧಿಸುತ್ತಾರೆ. ಯುಗಾದಿಯ ನಂತರದ ಜಾತ್ರೆ, ದೀಪಾವಳಿ ಸಂದರ್ಭದಲ್ಲಿ ಅಥವಾ ದಸರಾ ಸಂದರ್ಭದಲ್ಲಿ ಮೈಲಾರಲಿಂಗ ದೇವರಿಗೆ ಹೋಗಿ ಬರುವುದು, ನಂತರ ಉರುಳು ಸೇವೆ, ಗಂಡಾವರ್ತಿಸೇವೆ ಮೊದಲಾದವುಗಳು ನಡೆಯುತ್ತವೆ. ಇವರು ದಸರಾ ದೀಪಾವಳಿ, ಯುಗಾದಿಯಂತಹ ವಿಶೇಷ ದಿನಗಳಲ್ಲಿ ತಮ್ಮ ಕುಲದ ಸಾಮಗ್ರಿಗಳನ್ನು ಇಟ್ಟು ಪೂಜೆ ಮಾಡುವುದು, ಕೆಲವರು ಕೋಳಿ ಬಲಿ ಕೊಡುವ ಪರಿಪಾಠವನ್ನು ಇಟ್ಟುಕೊಂಡಿದ್ದಾರೆ. ಆದರೆ ಇಂದು ಬಹುತೇಕವಾಗಿ ಬಾಹುಸಾರ ಕ್ಷತ್ರಿಯ ಸಮುದಾಯದವರು ತಮ್ಮ ಮೂಲ ಕಸುಬಿಗೆ

ದೂರವಾಗುತ್ತಿದ್ದಾರೆ. ಆದರೂ ಸಹ ತಮ್ಮ ಹಬ್ಬ ಹರಿದಿನಗಳಲ್ಲಿ ಒಂದೆಡೆ ಸೇರಿ ಪೂಜೆ ಸಲ್ಲಿಸುವುದನ್ನು ನೋಡಬಹುದಾಗಿದೆ.

ಹಬ್ಬ-ಹರಿದಿನಗಳು ಭಕ್ತಿ, ಧರ್ಮ ಮತ್ತು ವ್ರತಾಚರಣೆ ಸಂಬಂಧಿಸಿದ ಶುಭ ದಿನಗಳು, ಸಾಂಸ್ಕೃತಿಕ ಸಂವರ್ಧಕ ದಿನಗಳೂ ಆಗಿವೆ. ಇವುಗಳ ಆಚರಣೆಯು ಪವಿತ್ರವಾಗಿದೆ. ಹಿಂದುಗಳಾದ ನಮಗೆ ಧರ್ಮವೇ ಬಾಳಿನ ಉಸಿರು ಆಗಿದೆ. ಧರ್ಮದ ಕುಶಲತೆಯೇ ಬಾಳಿನ ತಂತ್ರ, ಜ್ಞಾನಪೂರ್ಣ ಅರಿವೇ ಆಗಿರುತ್ತದೆ. ಅತ್ಯಂತ ಪ್ರಾಚೀನ ಕಾಲದಿಂದಲೂ ಹಬ್ಬ ಹರಿದಿನಗಳನ್ನು ಬಾಹುಸಾರ ಕ್ಷತ್ರಿಯ ಸಮುದಾಯದವರು ಆಚರಿಸಿಕೊಂಡು ಬರುತ್ತಿದ್ದಾರೆ. ಕಾಲಕಾಲಕ್ಕೆ ತಕ್ಕಂತೆ ಅನೇಕ ಬದಲಾವಣೆಗಳು ಸಾಗಿಬಂದಿವೆ. ನಂಬಿಕೆಗಳು ಜೀವನ ಮಾರ್ಗದ ಸಾಧನ ವಿಶೇಷಗಳು, ಜೀವನದ ದಾರಿ ಸಾಗಲು ಇರುವ ದಾರಿಯ ಮೈಲಿಗಲ್ಲುಗಳು.

ಜೀವನದೊಳಗೆ ಕಷ್ಟ-ಕಾರ್ಪಣ್ಯಗಳು ಸಂಭವಿಸಿದಾಗ ಅವುಗಳು ದೂರವಾದರೆ, ನಾನಾರೀತಿಯ ಹರಕೆಗಳನ್ನು ಕಟ್ಟಿಕೊಂಡು ಭಯಭಕ್ತಿಯಿಂದ ಪೂರೈಸುವುದು ರೂಢಿಗತವಾಗಿ ಬಂದಿದೆ. ಬೆಳ್ಳಿಬಂಗಾರದ ಸಾಮಾನುಗಳನ್ನು ಹರಕೆ ಹೊತ್ತವರು ತಮಗೆ ಒದಗದಿದ್ದರೂ ಸಾಲದ ಮೊರೆಹೋಗಿ ಮುಟ್ಟಿಸುವುದುಂಟು. "ಹರಕೆಯು ಹನ್ನೆರಡು ವರುಷ" ಎಂದು ತಿಳಿದ ಇವರು ಹರಕೆಯನ್ನು ತೀರಿಸಲು ದೇವರಿಂದಲೇ ಬೇಡಿಕೊಳ್ಳುತ್ತಾ, ನಮ್ಮಪ್ಪ, ನಮ್ಮವ್ವ, ಈ ವರ್ಷ ನಿನಗೆ ಅಂದುಕೊಂಡ ಹರಕೆ ಮುಟ್ಟಿಸಲು ಆ ಗಲಿಲ್ಲ ನಮಗೆ ಇನ್ನೊಂದು ಕಾಲಾವಕಾಶಕೊಡು ಎಂದು ಪುನಃ ಬೇಡಿಕೊಳ್ಳುತ್ತಾರೆ. ಅದನ್ನು ಮುಂದಿನ ಅವಧಿಯಲ್ಲಿ ತೀರಿಸುತ್ತಾರೆ. ಹೀಗೆ ಏನಾದರೂ ಮನೆಯಲ್ಲಿ ಮಕ್ಕಳಿಗೆ, ಹಿರಿಯರಿಗೂ ಕಾಡಾಟ ಪ್ರಾರಂಭವಾದರೆ ಬೇಡಿದಂತಹ ಹರಕೆಗಳನ್ನು ನೆನಪು ಮಾಡಿಕೊಂಡು, ಅದಕ್ಕೆ ಹೀಗಾಗಿದೆ ಎಂದು ಬೇಗನೆ ಹರಕೆ ತೀರಿಸುವ ಕೆಲಸಕ್ಕೆ ಮುಂದಾಗುತ್ತಾರೆ.

- ತಮ್ಮ ಕುಲದೇವಕ್ಕೆ ದೀಡುನಮಸ್ಕಾರ ಮಾಡುವುದು.
- ಬಹಳ ದಿನದ ನಂತರ ಬೇಡಿಕೊಂಡಂತೆ ಮಕ್ಕಳನ್ನು ಪಡೆದವರು ದೇವಸ್ಥಾನದ ಗೋಡೆಯ ಮೇಲಿಂದ ಕೆಳಕ್ಕೆ ಎಸೆಯುವುದು.
- ದೇವಸ್ಥಾನಗಳಿಗೆ ಸುಣ್ಣ ಬಣ್ಣ ಬಳಿಸುವುದು.
- ದೇವಸ್ಥಾನದಲ್ಲಿ ಚಿತ್ರಗಳನ್ನು ಕಟ್ಟಿಸಿಕೊಡುವುದು.
- ದೀಪಗಳನ್ನು ಒಪ್ಪಿಸುವುದು.
- ಘಂಟೆಗಳನ್ನು ಕೊಡಿಸುವುದು.
- ಪಲ್ಲಕ್ಕಿ ಕೊಡಿಸುವುದು.
- ದೀಪ ಹಚ್ಚುವುದು, ಇಂತಿಷ್ಟು ದಿನಗಳವರೆಗೆ ವಾರದ ದಿವಸ ಉಪವಾಸ.
- ಉರುಳು ಸೇವೆ ಮಾಡುವುದು.

- ದೇವತೆಗಳ ಮೆರವಣಿಗೆಯಲ್ಲಿ ಅಡ್ಡಬೀಳುವುದು.
- ಪ್ರಾಣಿಬಲಿಯನ್ನು ಕೊಡುವುದು.
- ಕುಲದೇವತೆಗೆ ಸೀರಿ ಕುಪ್ಪಸ ಒಪ್ಪಿಸುವುದು.
- ಹನುಮಪ್ಪನಿಗೆ ಕುಂಕುಮ ಪೂಜೆ ಮಾಡಿಸುವುದು.
- ಹನುಮಪ್ಪನಿಗೆ ಎಲೆಪೂಜೆ ಮಾಡಿಸುವುದು.
- ಸ್ತ್ರೀದೇವತೆಗಳಿಗೆ ಕುಂಕುಮಾರ್ಚನೆ ಮಾಡಿಸುವುದು.
- ಜೋಗತಿಯರಿಗೆ ಊಟ ಹಾಕಿಸುವುದು.
- ದೇವಸ್ಥಾನದಲ್ಲಿ ಪ್ರಸಾದ, ದಾಸೋಹ ನೀಡುವುದು.
- ದೇವತೆಗಳಿಗೆ ಹೂವಿನಹಾರ ಒಪ್ಪಿಸುವುದು.
- ಕಾಯಿಯನ್ನು ಒಡೆಯುವುದು.
- ಬೆಳ್ಳಿ, ಬಂಗಾರದ ಸಾಮಾನು ಒಪ್ಪಿಸುವುದು.
- ಕಾರ್ತಿಕ ಹಚ್ಚುವುದು.
- ಮೊದಲ ಬೆಳೆಯ ಒಂದಿಷ್ಟು ಭಾಗ ದೇವರಿಗೆ ಒಪ್ಪಿಸುವುದು.
- ಗಿಣ್ಣದ ಹಾಲು ಒಪ್ಪಿಸುವುದು.
- ಜಾತ್ರೆಯಲ್ಲಿ ಅರವಟ್ಟಿಗೆ ನಡೆಸುವುದು.

ಭಕ್ತನ ಭಕ್ತಿಯು ಪ್ರಾರ್ಥನೆ-ಹರಕೆಗಳೊಡನೆ ಪೂಜಾ ರೂಪದಲ್ಲಿ ಭಗವಂತನ್ನು ಮುಟ್ಟುತ್ತದೆಂಬುದನ್ನು ಜನಪದರ ದೃಢನಂಬಿಕೆ ಅವ್ಯಕ್ತ ಆಂತರಿಕ ಭಾವ ರೂಪದ ಭಕ್ತಿ-ಪ್ರಾರ್ಥನೆ-ಹರಕೆಗಳ ಬಾಹ್ಯ ವ್ಯಕ್ತ ಆಚರಣಾ ರೂಪವೇ ಪೂಜೆ ಯಜ್ಞಗಳು.

ಹರಕೆಗೆ ಸಾಮಾನ್ಯವಾಗಿ ಎರಡು ಅರ್ಥಗಳನ್ನು ನೀಡುವುದಿದೆ. ಒಂದು, ಭಕ್ತ ತಾನು ಮೆಚ್ಚಿದ ದೇವರನ್ನು ಹೊಗಳುವುದು. ಎರಡು, ತನ್ನ ಬೇಡಿಕೆಯ ಇಷ್ಟಾರ್ಥಗಳು ಕೈಗೊಂಡ ಮೇಲೆ ದೇವರಿಗೆ ಅರ್ಪಿಸುವ ಅರ್ಪಣೆ. ಅಂದರೆ ಭಗವಂತ ತನ್ನ ಪ್ರಾರ್ಥನೆಯನ್ನು ಮೆಚ್ಚಿ ಬೇಡಿಕೆಯನ್ನು ಈಡೇರಿಸಿದಾಗ ಪರ್ಯಾಯವಾಗಿ ನೀಡುವ ಕಾಣಿಕೆಯೇ ಹರಕೆ. ಇವು ಬಹುತೇಕ ವ್ಯಕ್ತಿನಿಷ್ಠವಾದವುಗಳು. ಕೌಟುಂಬಿಕ ಹರಕೆಗಳೂ ಉಂಟು. ಕುಲ, ಜನಾಂಗಿಕ ಮತ್ತು ಗ್ರಾಮ ಸಮುದಾಯಗಳ ಸಾಮೂಹಿಕ ಹರಕೆಗಳೂ ಇವೆ. ಇವು ವ್ಯಕ್ತಿನಿಷ್ಠೆ ಮತ್ತು ಕೌಟುಂಬಿಕ ಹರಕೆಗಳಿಗಿಂತ ಭಿನ್ನವಾಗಿ ರೂಢಿ, ಪದ್ಧತಿ, ಸಂಪ್ರದಾಯಗಳಾಗಿ ಆಚರಿಸಲ್ಪಡುವುದೇ ಹೆಚ್ಚು. ವೈಯಕ್ತಿಕ ಮತ್ತು ಕೌಟುಂಬಿಕ ಹರಕೆಗಳು ಜನಪದರಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿವೆ. ಎಲ್ಲಮ್ಮನ ಬಗೆಗಿನ ಹರಕೆಗಳು ಎಲ್ಲಮ್ಮನಿಗಷ್ಟೇ ಸೀಮಿತವೇನಲ್ಲ. ಇತರ

ಗ್ರಾಮದೇವತೆಗಳಿಗೆ ಅರ್ಪಿತವಾಗುವ ಎಲ್ಲಾ ಬಗೆಯ ಹರಕೆಗಳು ಎಲ್ಲಮ್ಮನಿಗೂ ಅನ್ವಯವಾಗುತ್ತವೆ. ಆದರೆ ಇವಳಿಗರ್ಪಿತವಾಗುತ್ತಿರುವ ಕೆಳವರ್ಗದವರ ವೈಯಕ್ತಿಕ ಹರಕೆಗಳು ಉಳಿದ ಗ್ರಾಮ ದೇವತೆಗಳಿಗೆ ಇದೇ ಮಟ್ಟದಲ್ಲಿ ಅರ್ಪಿತವಾದಂತೆ ಕಾಣುವುದಿಲ್ಲ. ಇದಕ್ಕೆ ಗ್ರಾಮ ದೇವತೆಗಳ ಪ್ರಭಾವವಿರುವ ಭೌಗೋಳಿಕ ವ್ಯಾಪ್ತಿ ಕಾರಣವಾಗುತ್ತದೆ. ಒಂದು ಅಥವಾ ಹಲವು ಹಳ್ಳಿಗಳ ಒಂದು ವೃತ್ತದಲ್ಲಿಯೇ ಪ್ರಚಾರದಲ್ಲಿರುವ ಗ್ರಾಮ ದೇವತೆಗಳಿಗೆ ಅಷ್ಟೇ ಸೀಮಿತವಾದ ಭಕ್ತ ವರ್ಗವಿದ್ದು ಹರಕೆ ಪೂಜಾದಿಗಳು ಆಯಾ ಸ್ಥಳಗಳಿಗೆ ಮಾತ್ರ ಸೀಮಿತವಾಗಿ ಬಿಡುತ್ತವೆ. ಗ್ರಾಮದೇವತೆಗಳ ಈ ಪ್ರಭಾವದ ದೃಷ್ಟಿಯಿಂದ ಡಾ॥ ಸಿದ್ದಲಿಂಗಯ್ಯನವರು ಗ್ರಾಮ ದೇವತೆಗಳನ್ನು ಸ್ಥಳೀಯ, ರಾಜ್ಯ ಮತ್ತು ರಾಷ್ಟ್ರಮಟ್ಟದ ದೇವತೆಗಳೆಂದು ಮೂರು ಪ್ರಧಾನ ಗುಂಪುಗಳಾಗಿ ವರ್ಗೀಕರಿಸಿರುವುದು ಸೂಕ್ತವಾಗಿದೆ. ಎಲ್ಲಮ್ಮನ ಭೌಗೋಳಿಕ ವ್ಯಾಪ್ತಿಯನ್ನು ಇಡೀ ರಾಷ್ಟ್ರಕ್ಕೆ ಅನ್ವಯಿಸಬಹುದು. ರೇಣುಕೆಯ ಪ್ರಚಾರ ಖ್ಯಾತಿಗಳು ದಕ್ಷಿಣ ಭಾರತದಲ್ಲಿರುವಷ್ಟು ಉತ್ತರ ಭಾರತದಲ್ಲಿ ಇಲ್ಲ. ಕಾಶ್ಮೀರದಲ್ಲಿ ಈಕೆಯ ಒಂದು ದೇವಸ್ಥಾನವಿದೆಯಂತೆ. ಉಳಿದಂತೆ ಎಲ್ಲಿಯೂ ಈಕೆಯ ಅಥವಾ ಗಂಡ ಜಮದಗ್ನಿಯ ಅಥವಾ ಮಗ ಪರಶುರಾಮನ ಗುಡಿಗಳಿದ್ದಂತೆ ಕಾಣುವುದಿಲ್ಲ. ದಕ್ಷಿಣ ಭಾರತದಲ್ಲಿ ಎಲ್ಲಮ್ಮ ಪ್ರಖ್ಯಾತಳಾಗಿ ಪ್ರಚಾರದಲ್ಲಿರುವಂತೆ ಉತ್ತರ ಭಾರತದಲ್ಲಿ 'ಮಾನಸ'ಳೆಂಬ ಪಾರ್ವತಿಯ ಅವತಾರಿಯಾದ ಗ್ರಾಮದೇವಿ ಪ್ರಸಿದ್ಧಳಾಗಿ ಪ್ರಚಾರದಲ್ಲಿರುವುದಾಗಿ ತೆಲುಗು ಜಾನಪದ ವಿದ್ವಾಂಸರಾದ ಡಾ॥ ರಾ.ವಿ. ಪ್ರೇಮಲತರು ಬರೆಯುತ್ತಾರೆ. ರೇಣುಕೆಯ ಕಥೆ, ಎಲ್ಲಾ ಭಾಷೆಗಳಲ್ಲಿದೆ. ಈ ಪುರಾಣದ ಕಥೆಗೆ ದಕ್ಷಿಣ ಭಾರತದಲ್ಲಿ ಅದರಲ್ಲಿಯೂ ಮುಖ್ಯವಾಗಿ ಕರ್ನಾಟಕದಲ್ಲಿ ಎಲ್ಲಮ್ಮನ ಪ್ರಖ್ಯಾತಿ ಹೆಚ್ಚಾಗಿದ್ದು ಸಂಸ್ಕೃತೀಕರಣಗೊಂಡು ರೇಣುಕಾಯಲ್ಲಮ್ಮನಾಗಿದ್ದಾಳೆ. ಇದರಿಂದ ಎಲ್ಲಮ್ಮನಿಗೆ ಹರಕೆ ಹೊರುವವರು ಬಹು ಸಂಖ್ಯಾತರಾಗಿದ್ದಾರೆ. ಈಕೆಯ ಜಾತ್ರೆ-ಉತ್ಸವಗಳಲ್ಲಿ ಆಯಾ ಸ್ಥಳಗಳಿಗೆ ಅನ್ವಯವಾಗುವಂತೆ ಸಾವಿರದಿಂದ ಹಿಡಿದು ಹತ್ತು ಸಾವಿರ ಲಕ್ಷದವರೆಗೆ ಜನ ಸೇರುವ ವರದಿಗಳ ದಾಖಲೆಗಳಿವೆ. ಇವಳ ಭಕ್ತರಲ್ಲಿ ಶಾಖಾಹಾರಿಗಳು-ಮಾಂಸಾಹಾರಿಗಳು ಇದ್ದಾರೆ. ಎಲ್ಲಾ ವರ್ಗದ ಜನರೂ ಇವಳನ್ನು ಪೂಜಿಸಿದರೂ, ಹರಕೆ ಹೊತ್ತರೂ, ಪಂಚಮರು ಪಾಲ್ಗೊಳ್ಳುವುದೇ ಹೆಚ್ಚು. ಇದರಿಂದ ಇವಳ ಹರಕೆ ಪೂಜಾ ವಿಧಾನಗಳಿಗಿಂತ ಸ್ವಲ್ಪ ಮಟ್ಟಿಗೆ ಭಿನ್ನವಾಗಿದೆ. ಜಾನಪದ ತಜ್ಞರಾದ ಪ್ರೋ. ಡಿ. ಲಿಂಗಯ್ಯನವರು ಮಂಡ್ಯ ಜಿಲ್ಲೆಯ ಅವರ ಸ್ವಗ್ರಾಮವಾದ ಹೀಹಳ್ಳಿಯಲ್ಲಿ ಬಲಿಯರ್ಪಣೆ ಇಲ್ಲದ, ಹರಿಜನರಿಂದಲೇ ಪೂಜಿಸಲ್ಪಡುತ್ತಿರುವ ಬರಿಯ ಶಾಖಾಹಾರದ ದೇವತೆ ಇರುವುದಾಗಿ ತಿಳಿಸಿದ್ದಾರೆ. ಬ್ರಾಹ್ಮಣ ಪೂಜಾರಿಗಳು ಲಾಭ ಇರುವ ಕಡೆ ಮಾತ್ರ ಗ್ರಾಮದೇವತೆಗಳ ದೇವಾಲಯಗಳ ಪುರೋಹಿತ್ಯವನ್ನು ವಹಿಸಿದ್ದಾರೆಂದು ಡಾ॥ ಚೆನ್ನಣ್ಣ ವಾಲೀಕಾರರು ಬರೆದು, ಅಲ್ಲಿಯೂ ಬಲಿಯರ್ಪಣೆಯನ್ನು ಹರಿಜನರು, ತಳವಾರರು, ವಡ್ಡರೇ ಮೊದಲಾದ ಕೆಳವರ್ಗದವರೇ ನಿರ್ವಹಿಸುತ್ತಾರೆಂದು ದಾಖಲಿಸಿದ್ದಾರೆ. ಸಾಮಾನ್ಯವಾಗಿ ಗ್ರಾಮದೇವತೆಗಳ ಪೂಜಾರಿಗಳು ಹರಿಜನರು. ಪೂಜೆ ಉತ್ಸವಾದಿಗಳಲ್ಲಿ ಇವರದ್ದೇ ಮೇಲುಗೈ. ಅನೇಕ ಕಡೆ ಪೂಜೆ

ಉತ್ಸವಾದಿಗಳ ಸಂದರ್ಭದ ಮಟ್ಟಿಗೆ ಸ್ಥಳೀಯ ಮೇಲ್ವರ್ಗದವರು ಇವರನ್ನು (ಅಗತ್ಯವಿದ್ದರೆ ಜನಿವಾರ ಹಾಕಿ) ಸಮಾನರೆಂದು ಭಾವಿಸಿ ಕೈ ಮುಗಿದು ಭಕ್ತಿಯನ್ನು ತೋರಿಸುವುದೂ ಉಂಟು.

ಜಾನಪದ ವಿದ್ವಾಂಸರು ಗ್ರಾಮ ದೇವತೆಗಳಿಗೆ ಅರ್ಪಿಸುವ ಹರಕೆಗಳನ್ನು ಸಾಮಾನ್ಯವಾಗಿ ಮೂರು ಬಗೆಗಳಾಗಿ ವರ್ಗೀಕರಿಸುತ್ತಾರೆ. ೧. ಬಹುಮಾನ ಅಥವಾ ಉಡುಗೊರೆ ಹರಕೆಗಳು, ೨. ನಿಯಂತ್ರಣ ಅಥವಾ ಶಿಕ್ಷಾ ಹರಕೆಗಳು, ೩. ಬಲಿಯರ್ಪಣೆಯ ಹರಕೆಗಳು. ಎಲ್ಲಮ್ಮನಿಗೆ ಮೊದಲು ಬಲಿ ಮತ್ತು ಶಿಕ್ಷಾ ಹರಕೆಗಳೇ ಹೆಚ್ಚು ರೂಢಿಯಲ್ಲಿದ್ದು ಉಡುಗೊರೆಯ ಹರಕೆಗಳು ಕ್ರಮೇಣ ಸೇರಿಕೊಂಡಂತಿವೆ. ಈ ಹರಕೆಗಳನ್ನು ರೋಗರುಜಿನುಗಳು ನಿವಾರಣೆಯಾದಾಗ, ಒಳ್ಳೆಯ ಮಳೆ-ಬೆಳೆಯಾದಾಗ, ಸಂತಾನ ಪ್ರಾಪ್ತವಾದಾಗ, ಮಗಳಿಗೆ ಗಂಡು ನಿಶ್ಚಯವಾದಾಗ, ಮಗನಿಗೆ ವಿಶ್ವವಿದ್ಯಾಲಯದಲ್ಲಿ ಪ್ರವೇಶ ಸಿಕ್ಕಾಗ, ವಿದ್ಯಾಭ್ಯಾಸ ಮುಗಿಸಿದಾಗ, ಕೆಲಸ ಸಿಕ್ಕಾಗ, ಬಡ್ತಿ ದೊರೆತಾಗ, ವರ್ಗಾವಣೆಯಾದಾಗ ಹೀಗೆ ಜೀವನದ ಹಲವು ನೋವು ನಲಿವುಗಳ ಸಂದರ್ಭಗಳಲ್ಲಿ ಎಲ್ಲಮ್ಮನಿಗೆ ಹರಕೆ ಹೊರುವುದುಂಟು. ಸಾಮಾನ್ಯವಾಗಿ ಇಷ್ಟಾರ್ಥ ಪೂರೈಕೆಯಾದ ತಕ್ಷಣ ಅಥವಾ ನಿರ್ದಿಷ್ಟ ಜಾತ್ರೆ-ಉತ್ಸವಗಳಲ್ಲಿ ಹರಕೆಯನ್ನೊಪ್ಪಿಸುವುದು ವಾಡಿಕೆ. ಉಡುಗೊರೆಯ ಹರಕೆಗಳಲ್ಲಿ ಸೀರೆ-ಕುಪ್ಪಸ, ಬಳೆಹಾರ, ಆಭರಣಗಳು, ತಾಮ್ರ, ಕಂಚು, ಬೆಳ್ಳಿ, ಬಂಗಾರದ ಮೂರ್ತಿಗಳು, ಗುಡಿಕಟ್ಟಿಸುವುದು, ಗೋಪುರ ನಿರ್ಮಿಸುವುದು, ಪಲ್ಲಕ್ಕಿ, ರಥಗಳನ್ನು ಮಾಡಿಸುವುದು, ದೇವಿಯ ವಿವಿಧ ಅಂಗಾಂಗಗಳನ್ನು ವಿವಿಧ ಲೋಹಗಳಿಂದ ಮಾಡಿಸಿ ಅಲಂಕರಿಸುವುದು ಮೊದಲಾದವು ಕಂಡು ಬರುತ್ತವೆ. ಎಲ್ಲಮ್ಮನಿಗೆ ಈ ಶ್ರೇಣೀಕೃತ ಸಮಾಜದ ಎಲ್ಲಾ ವರ್ಗಗಳ ಭಕ್ತರು ಇರುವುದರಿಂದ ಕೊಡುವ ಮನಸ್ಸಿದ್ದರೂ ಕೊಡಲು ಗತಿ ಇಲ್ಲದ ಅತಿ ಬಡವರಿಂದ ಹಿಡಿದು ಲಕ್ಷಾಂತರ ರೂಪಾಯಿಗಳ ಕೊಡುವ, ನೀಡುವ ಸಾಮರ್ಥ್ಯವುಳ್ಳ ಶ್ರೀಮಂತರವರೆಗೆ ಈಕೆಯ ಭಕ್ತ ಕೋಟಿ ವಿಸ್ತಾರವಾಗಿದೆ. ಆದರೆ ಇವರಲ್ಲಿ ಶೇಕಡ ತೊಂಬತ್ತರಷ್ಟು ಜನ ಕೆಳವರ್ಗದ ಬಡವರು ಮತ್ತು ಮಧ್ಯಮ ವರ್ಗದವರಿರುವುದು ಗಮನಾರ್ಹವಾದ ಸಂಗತಿ.

**ದೀಪದ ಹರಕೆ :**

ಹಿಂದೆ ದೇವಸ್ಥಾನಗಳಲ್ಲಿ ಪ್ರತಿದಿನ ದೀಪಹಚ್ಚಲು ಪೂಜೆ ಪುನಸ್ಕಾರಗಳನ್ನು ನಡೆಸಲು ಪೂಜಾರಿಗಳಿಗೆ ಧಾರ್ಮಿಕ ದತ್ತಿಗಳನ್ನು, ಉಂಬಳಿ, ಬಹುಮಾನ, ಇನಾಂತಿಗಳನ್ನು ರಾಜಮಹಾರಾಜರು ಸ್ಥಿತಿವಂತರು ನೀಡುತ್ತಿದ್ದರು. ಶಿಷ್ಟ ಸಮಾಜದ ವ್ಯವಸ್ಥಿತ ಏರ್ಪಾಡಿದು. ಇವು ಯಾವು ಇಲ್ಲದೆ ಪ್ರಸಿದ್ಧರಾದ ಜನಪದ ದೇವತೆಗಳಿಗೆ ಸಂಪಾದನೆ ಇರುವುದು ಕಂಡು ಬಂದಾಗ ಪುರೋಹಿತರೇ ಮುಂದಾಗಿ ಈ ಹೊಣೆಯನ್ನು ವಹಿಸಿಕೊಂಡಿರುವುದಿದೆ. ಆದರೆ ಶ್ರೀ ಸಾಮಾನ್ಯನಿಗೆ ನಿತ್ಯ ಪೂಜೆ ಮಾಡುವ ಅಥವಾ ಮಾಡಿಸುವ ಅಭ್ಯಾಸವಿಲ್ಲ. ವರ್ಷವಿಡೀ ಗುಡಿಯಲ್ಲಿ ದೀಪಉರಿಸುವ ಪದ್ಧತಿ ಇರಲಿಲ್ಲ. ಹಬ್ಬ ಹರಿದಿನ, ಮದುವೆ-ಮುಂಜಿ, ಜಾತ್ರೆ, ಉತ್ಸವ, ಹರಕೆಗಳಂದು ಮಾತ್ರ ಗ್ರಾಮದೇವಿಯರ

ಗುಡಿಗಳಲ್ಲಿ ದೀಪ ಹಚ್ಚುವುದು ರೂಢಿ. ತುಪ್ಪದ ದೀಪ ಹಚ್ಚುವ, ಎಣ್ಣೆ ದೀಪ ಹಚ್ಚುವ ಹರಕೆಗಳು ಸಾಮಾನ್ಯವಾದವುಗಳು.

**ಮೀಸಲು ಕಟ್ಟುವ ಹರಕೆ :**

ಇದನ್ನು ಬಡವರ ಭಾಗ್ಯದ ಹರಕೆಯೆಂದೇ ಕರೆಯಬೇಕು. ಸಾಮಾನ್ಯವಾದ ತಲೆನೋವಿನಿಂದ ಹಿಡಿದು ಪರಿಹರಿಸಲು ಸಾಧ್ಯವಾಗದ ರೋಗರುಜಿನಗಳವರೆಗೆ, ಜನನ, ಮದುವೆಯಿಂದ ಹಿಡಿದು ಜೀವನದ ಎಲ್ಲಾ ಏರಿಳಿತಗಳ ದುಃಖ ದುಮ್ಮಾನಗಳಲ್ಲಿ ಬಡವನಿಗೆ ಸಾಂತ್ವನ ನೀಡುವುದು ಈ ಮೀಸಲು ಕಟ್ಟುವ ಹರಕೆ. ಇದು ಕರ್ನಾಟಕದ ಕೋಲಾರ, ಬೆಂಗಳೂರು, ಬೆಂಗಳೂರು ಗ್ರಾಮಾಂತರ, ತುಮಕೂರು, ಚಿತ್ರದುರ್ಗ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಮತ್ತು ನೆರೆರಾಜ್ಯವಾದ ಆಂಧ್ರಪ್ರದೇಶದ ಚಿತ್ತೂರು, ಕಡಪ, ತಮಿಳುನಾಡಿನ ಧರ್ಮಪುರಿ, ಡೆಂಕಣಿ ಕೋಟೆ ಹೊಸೂರುಗಳಲ್ಲಿ ಪ್ರಚಾರದಲ್ಲಿದೆ. ಹರಕೆ ಹೊರುವ ದಿನ ಚೌಕಾಕಾರದ ಅರಿಶಿಣದ ಬಟ್ಟೆಗೆ ನಾಲ್ಕು ಮೂಲೆಗಳಲ್ಲಿ ಕುಂಕುಮ ಹಚ್ಚಿ ಮನೆಯಲ್ಲಿ ಲಭ್ಯವಿರುವ ದವಸ ಧಾನ್ಯಗಳನ್ನು ತಾಮ್ರದ ನಾಣ್ಯದೊಡನೆ ಹಾಕಿ ಕಟ್ಟಿ ಧೂಪ ಹಾಕಿ ಹೊಸ್ತಿಲಿನ ಮೇಲೆ ಅಥವಾ ದೇವಿಯ ಗುಡಿಯಲ್ಲಿ ಕಟ್ಟುತ್ತಾರೆ. ಹಬ್ಬ, ಉತ್ಸವ, ಜಾತ್ರೆಗಳಂದು ದೇವಿಗರ್ಪಿಸುತ್ತಾರೆ. ವಿಶೇಷವಾದ ಉಡುಗೊರೆಗಳನ್ನು ಕೊಡಲು ಸಾಧ್ಯವಿಲ್ಲದ ಕೆಳವರ್ಗದ ಜನ ಇದನ್ನು ತಮ್ಮ ಬಡತನದ ಧ್ಯೋತಕವೋ ಎಂಬಂತೆ ಆಚರಿಸುತ್ತಾರೆ. ಶ್ರೀಮಂತರು ಮತ್ತು ಮಧ್ಯಮವರ್ಗದವರೂ ಈ ಹರಕೆ ಹೊರುವುದುಂಟು.

**ಉಪ್ಪಿನ ಹರಕೆ :**

ಎಲ್ಲಮ್ಮನಿಗೆ ಹುಟ್ಟಿನಿಂದಲೋ ಅಥವಾ ಗಂಡನ ಶಾಪದಿಂದಲೋ ಅಂತೂ ಕುಷ್ಠರೋಗವಿದ್ದ ಸಂಗತಿ ಎಲ್ಲಾ ಕಥೆಗಳಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಏಕಯ್ಯ-ಜೋಗಯ್ಯರ ಅನುಗ್ರಹದಿಂದ ರೋಗ ನಿವಾರಣೆಯಾದಂತೆ ತಿಳಿಯುತ್ತದೆ. ಈಕೆಯ ರೋಗ ನಿವಾರಣೆಯಾದ ಹಿನ್ನೆಲೆಯಲ್ಲಿ ಈ ಉಪ್ಪಿನ ಹರಕೆ ರೂಢಿಗೆ ಬಂದಂತೆ ಕಾಣುತ್ತದೆ. ಇದು ಉತ್ತರ ಕರ್ನಾಟಕದಲ್ಲಿ ಹೆಚ್ಚು ಜನಪ್ರಿಯವಾದುದಾಗಿದೆ. ಸಿದ್ಧರು ರೋಗನಿವಾರಣೆ ಮಾಡಿದಾಗ ಎಲ್ಲಮ್ಮ ಸ್ವತಃ ಋಣ ಪರಿಹಾರಕ್ಕಾಗಿ ಉಪ್ಪನ್ನು ಅರ್ಪಿಸಿದಳೆಂದೂ ಹೇಳುತ್ತಾರೆ. ಹೊಸ ಬಟ್ಟೆಯಲ್ಲಿ ಮೀಸಲು ಕಟ್ಟಿದಂತೆ ಉಪ್ಪನ್ನು ಮಾತ್ರ ಹಾಕಿ ಕಟ್ಟಿ ಧೂಪ ಹಾಕಿ ದೇವಿಯ ಪಾದಗಳ ಮೇಲಿಡುತ್ತಾರೆ ಅಥವಾ ದೇವಾಲಯದ ಛಾವಣಿ ಮೇಲೆ ಎಸೆಯುತ್ತಾರೆ. ದೀಪ ಹಚ್ಚುವ ಹರಕೆಯಂತೆ ಉಪ್ಪಿನ ಹರಕೆ ಕೆಳವರ್ಗದ ಜನರಲ್ಲಿ ಕೋಲಾರ, ಬೆಂಗಳೂರು ಗ್ರಾಮಾಂತರ, ಧರ್ಮಪುರಿ, ಡೆಂಕಣಿಕೋಟೆ, ಹೊಸೂರು, ಮದನಪಲ್ಲಿ, ಕಲಕರಿ, ಸಿ.ಟಿ.ಎಂ. ಗಳಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ.

**ಮುಡುಪು ಹರಕೆ :**

ಕನ್ನಡದಲ್ಲಿ 'ಮೀಸಲು ಕಟ್ಟುವುದು' ಎಂದು ಕರೆಯುವುದನ್ನು ತೆಲುಗಿನಲ್ಲಿ 'ಮುಡುಪು' ಎನ್ನುತ್ತಾರೆ. ದೇವಿಯ ಹೆಸರಿನಲ್ಲಿ ಕಟ್ಟಿದ ಮುಡುಪು ಹಣವನ್ನು ವರ್ಷದ ಕೊನೆಗೆ ಅಥವಾ ಹಲವು ವರ್ಷಗಳ ನಂತರ ಹುಂಡಿಯನ್ನು ತಲೆಯಮೇಲೆ ಹೊತ್ತುಕೊಂಡು ಪಾದಯಾತ್ರೆಯಲ್ಲಿ ಗುಡಿಗೆ ಹೋಗಿ ಹುಂಡಿಗೆ ಹಾಕುವುದೋ ಅಥವಾ ಗುರುತಿಗಾಗಿ ಯಾವುದಾದರೊಂದು ಶಾಶ್ವತ ಉಡುಗೊರೆಯನ್ನೋ ನೀಡಿ ಬರುತ್ತಾರೆ. ಇದು ತಿರುಪತಿ ತಿಮ್ಮಪ್ಪನ ಒಕ್ಕಲಿನ ಅನುಕರಣೆಯಂತೆ ಕಾಣುತ್ತದೆ.

**ಶಿಕ್ಷಾ ಹರಕೆಗಳು :**

ಉಗ್ರ ಸೇವೆಯಿಂದ ದೇವಿ ಜೇಗ ಒಲಿಯುತ್ತಾಳೆಂದು ಜನಪದರ ಮುಗ್ಧ ನಂಬಿಕೆಯ ದ್ಯೋತಕವಾಗಿ ಕಾಣುವುದು. ಈ ಶಿಕ್ಷಾಹರಕೆಗಳು, ಹರಕೆಗಳಲ್ಲಿ ಇವು ವಿಶಿಷ್ಟ ಸ್ಥಾನವನ್ನು ಪಡೆಯುತ್ತವೆ. ದೇವಿಯನ್ನು ತಮ್ಮ ತಪ್ಪು ಮನ್ನಿಸಿ ಕಾಪಾಡಿ ಎಂದು ಬೇಡಿಕೊಳ್ಳುವುದು ಶಿಷ್ಟರ ಸಾಮಾನ್ಯ ಬೇಡಿಕೆ. ಮನ್ನಿಸುವುದು ಬಿಡುವುದು ದೇವತೆಗಳಿಗೆ ಬಿಟ್ಟ ವಿಚಾರ. ಆದರೆ ಜನಪದರಲ್ಲಿ ಹಾಗಲ್ಲ. ಸ್ವಯಂ ನಿಯಂತ್ರಣಕ್ಕೆ ಒಳಪಟ್ಟು ತಪ್ಪಿಗೆ ಶಿಕ್ಷೆಯನ್ನು ತಾನೇ ವಿಧಿಸಿಕೊಂಡು ದೇವಿಯ ಎದುರಿಗೆ ಸಂತೋಷದಿಂದ ಶಿಕ್ಷೆಯನ್ನು ಅನುಭವಿಸುತ್ತಾನೆ. ಶಿಕ್ಷಾಹರಕೆಗಳಲ್ಲಿ ದೈಹಿಕ ಮತ್ತು ಮಾನಸಿಕವೆಂಬ ಎರಡು ಬಗೆಗಳಿವೆ. ಉರುಳುಸೇವೆ, ಪಾದಯಾತ್ರೆ, ಉಪವಾಸ, ಸಿಡಿಯಾಟ, ಕೆಂಡ ತುಳಿಯುವುದೇ ಮೊದಲಾದವು ದೈಹಿಕ ಶಿಕ್ಷಾ ಹರಕೆಗಳು, ಜೋಗಿತಿ-ಜೋಗಪ್ಪಗಳಾಗುವುದು, ಬೆತ್ತಲೆ ಸೇವೆ ಮೊದಲಾದವು ಮಾನಸಿಕ ಶಿಕ್ಷಾ ಹರಕೆಗಳು.

**ಉರುಳು ಸೇವೆ :**

ಎಲ್ಲಮ್ಮನ ಹೆಸರು ಹೇಳಿಕೊಂಡು ಗುಡಿಯ ಸುತ್ತ ಉರುಳುವುದು ಈಕೆಯ ಭಕ್ತರಿಗೆ ವಿಶೇಷವಾದ ಆನಂದೋತ್ಸಾಹಗಳನ್ನು ನೀಡುವ ಹರಕೆ. ಮೂರರಿಂದ ಹಿಡಿದು ನೂರೊಂದು ಸುತ್ತುಗಳವರೆಗೆ ಅವರವರ ದೈಹಿಕ ಸಾಮರ್ಥ್ಯವನ್ನು ಅವಲಂಬಿಸಿ ಉರುಳು ಸೇವೆ ನಡೆಯುತ್ತದೆ. ಸ್ನಾನ ಮಾಡಿ ಮಡಿಯುಟ್ಟು ಹಣೆಯಲ್ಲಿ ಭಂಡಾರವನ್ನು ಧರಿಸಿ ತಮ್ಮ ಪಾಪ ಪರಿಹಾರವಾಗಲೆಂದು ದೇವಿಯನ್ನು ಜಪಿಸುತ್ತಾ ಗುಡಿಯನ್ನು ಪ್ರದಕ್ಷಿಣೆ ಹಾಕುವ ಈ ಸೇವೆ ಎಲ್ಲಾ ಕಡೆ ರೂಢಿಯಲ್ಲಿದೆ. ಸವದತ್ತಿ, ಚಂದ್ರಗುತ್ತಿ, ಮೊದಲಾದ ಪ್ರಸಿದ್ಧ ಗುಡಿಗಳಿಗೆ ಹೋಗಿ ಉರುಳು ಸೇವೆ ಸಲ್ಲಿಸುವ ಹರಕೆಯನ್ನು ಶಿವಮೊಗ್ಗ ನಗರಗದಲ್ಲಿರುವ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿರುವ ಎಲ್ಲಮ್ಮನ ಭಕ್ತರು ಹೊರುವುದುಂಟು.

**ಉಪವಾಸ :**

ಈಕೆಯ ಭಕ್ತರಿಗೆ ದೇವಿಯ ಹೆಸರಿನಲ್ಲಿ ಉಪವಾಸವಿರುವುದೂ ಒಂದು ಹರಕೆಯಂತೆ ಕಾಣುತ್ತದೆ. ಮಂಗಳವಾರ, ಶುಕ್ರವಾರಗಳು ದೇವಿ ದಿನಗಳೆಂದು ಪ್ರಸಿದ್ಧವಾಗಿರುವುದರಿಂದ ಆ ದಿನಗಳಲ್ಲಿ ಉಪವಾಸವಿದ್ದು ದೇವಿ ಸೇವೆಯನ್ನು ಮಾಡುವುದುಂಟು.

**ಕೆಂಡ ತುಳಿಯುವುದು :**

ದೇವಿಯ ಗುಡಿಯ ಮುಂದೆ ೪-೫ ಅಡಿ ಅಗಲದ ಸಾಕಷ್ಟು ಆಳವಾದ ವರ್ತುಲಾಕಾರದ ಗುಂಡಿ ತೆಗೆದು ಸೌದೆ ತುಂಬಿ ಬೆಂಕಿ ಹಾಕಿ ಕೆಂಡ ಮಾಡಿದ ಮೇಲೆ ಬರಿಗಾಲಿನಲ್ಲಿ ತುಳಿಯುತ್ತಾ ದೇವಿಯನ್ನು ಸ್ತುತಿಸುವುದೇ ಕೆಂಡ ತುಳಿಯುವಾಟ. ಬೆಳಗಿನಿಂದ ಉಪವಾಸವಿದ್ದು ತಂಬಿಟ್ಟಿನ ದೀಪವನ್ನು ತಲೆಯಮೇಲೆ ಹೊತ್ತು ಸುಮಾರು ಮೂರು ಅಡಿ ಅಗಲದ ೩೦-೪೦ ಅಡಿ ಉದ್ದವಾದ ಕೆಂಡದ ಹಾದಿಯನ್ನು ತುಳಿಯುತ್ತಾ ದೇವಿಯ ಮುಂದೆ ಬಂದು ದೀಪ ಬೆಳಗಿ ಹರಕೆಯನ್ನೊಪ್ಪಿಸುತ್ತಾರೆ.

**ಬಲಿಯರ್ಪಣೆಯ ಹರಕೆಗಳು :**

ಗ್ರಾಮದೇವತೆಗಳು ಮಾಂಸಾಹಾರಿಗಳು. ಬಲಿ ಇವರಿಗೆ ಬಹಳ ಪ್ರಿಯವಾದುದು. ಬಲಿ ಇಲ್ಲದೇ ಇವಳು ತೃಪ್ತಳಾಗುವುದೇ ಇಲ್ಲ. ಕುರಿ, ಕೋಳಿ, ಮೇಕೆಗಳ ಬಲಿಯರ್ಪಣೆ ಎಲ್ಲ ಗ್ರಾಮ ದೇವತೆಗಳಂತೆ ಎಲ್ಲಮ್ಮನಿಗೂ ಅರ್ಪಿತವಾಗುತ್ತವೆ. ಬಲಿಗಳಲ್ಲಿ ನರಬಲಿಯೇ ಅತ್ಯುತ್ತಮವಾದುದೆಂಬ ನಂಬಿಕೆ ಪ್ರಾಚೀನ ಕಾಲದಿಂದಲೂ ಆದಿವಾಸಿ ಬುಡಕಟ್ಟುಗಳಲ್ಲಿದೆ. ಮುಂಡ, ಓರಾನ್, ನಾಗ, ಸಂತಾಲ್ ಮೊದಲಾದ ಬುಡಕಟ್ಟುಗಳಲ್ಲಿ ತೀರಾ ಇತ್ತೀಚಿನವರೆಗೂ ಈ ನಂಬಿಕೆ ಇತ್ತೆಂಬ ಮಾಹಿತಿ ಇದೆ. ಮಾತೃ ಪ್ರಧಾನವಾದ ಆದಿವಾಸಿ ಮುಂಡ ಸಮಾಜದಲ್ಲಿ ಈ ನರಬಲಿಗೆ ಪುರುಷರೇ ಬಲಿಯಾಗುತ್ತಿದ್ದರೆಂದು ಎಸ್.ಸಿ.ರಾಯ್ 'ಮುಂಡ ಮತ್ತು ಅವರ ದೇಶ' ದಲ್ಲಿ ಬರೆದಿದ್ದಾರೆ. ಹೆಣ್ಣನ್ನು ಬಲಿಗೊಟ್ಟಿರುವ ವರದಿಗಳಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಪುರುಷ ಪ್ರಧಾನವಾದ ಸಮಾಜದಲ್ಲಿ ಕೆರೆಗೆ ಹಾರವಾಗಿ, ಕೋಟೆಕೊತ್ತಲ, ದೇವಾಲಯಗಳಿಗೆ 'ಹೆಣ್ಣನ್ನೇ' ಬಲಿಗೊಟ್ಟಿರುವ ಅನೇಕ ದೃಷ್ಟಾಂತಗಳು ಸಿಗುತ್ತವೆ. ಇದು ಪಿತೃ ಪ್ರಧಾನ ಸಮಾಜ ಮಾತೃ ಪ್ರಧಾನ ಸಮಾಜದ ಮೇಲ ಸೇಡು ತೀರಿಸಿಕೊಂಡಿರುವುದರ ಸಂಕೇತ.

ಗ್ರಾಮ ದೇವತೆಗಳಿಗೆ ಅರ್ಪಿಸುವ ಕುರಿ, ಮೇಕೆ, ಕೋಳಿ, ಕೋಣಗಳ ಬಲಿಗಳ ಹಿಂದಿನ ರೂಪವೇ ನರಬಲಿ. 'ಕೊಂಡ' ರೆಂಬ ಬುಡಕಟ್ಟೊಂದು ಇದೆ. ಇವರಲ್ಲಿ ನರಬಲಿ ಹೆಚ್ಚಿಗೆ ಇದೆ. ಇವರಲ್ಲಿ ಪ್ರಚಾರದಲ್ಲಿರುವ ಐತಿಹ್ಯ ಒಂದರಂತೆ ಭೂಗರ್ಭದಿಂದ ಹುಟ್ಟಿದ ಇಬ್ಬರು ಮಹಿಳೆಯರಿಗೆ ಇಬ್ಬರು ಮಕ್ಕಳಾಗುತ್ತಾರೆ. ಕರಿಬೂದಿ ಎಂಬುವವಳು ಕಟ್ಟಿಗೆ ಕಡಿಯುವಾಗ ಬೆರಳು ಕತ್ತರಿಸಿಕೊಂಡು ರಕ್ತ ಸೋರುತ್ತದೆ. ಹದವಾಗಿದ್ದ ಭೂಮಿ ಒಣಗಿ ಗಟ್ಟಿಯಾಗಿ ಹೋಯಿತು. ರಕ್ತ ಸುರಿದಿದ್ದರಿಂದಲೇ

ಹದವಾಗಿದ್ದ ಭೂಮಿ ಒಣಗಿತೆಂದು ಭಾವಿಸಿದ ತಾಯಿ ಕರಿ ಬೂದಿ ಮಗನನ್ನು ಕರೆದು ತನ್ನ ಬೆನ್ನನ್ನು ಕಡಿದು ಮಾಂಸವನ್ನು ಭೂಮಿಯಲ್ಲಿ ಹುಗಿಯಲು ಹೇಳುತ್ತಾಳೆ. ಮಗ ಅದೇ ರೀತಿ ಮಾಡಲು ಕೆಲಸಮಯದ ನಂತರ ಭೂಮಿಯಲ್ಲಿ ಅನೇಕ ಸಸ್ಯಗಳು ಹುಟ್ಟಿದವು. ಕೆಲ ಸಮಯದ ನಂತರ ಬಲಿಯರ್ಪಿತಳಾದ ಕರಿಬೂದಿ ಕೊಂಡರ ಹಿರಿಯನೊಬ್ಬನ ಕನಸಿನಲ್ಲಿ ಬಂದು 'ನರಬಲಿ'ಯನ್ನು ಕೊಟ್ಟರೆ ಮಾತ್ರ ಭೂಮಿ ಫಲವತ್ತಾಗಿ ಹುಲುಸಾದ ಬೆಳೆ ನೀಡುವುದೆಂದೂ, ದನಕರುಗಳು ವೃದ್ಧಿಯಾಗುವುದೆಂದೂ ಹೇಳಿದ್ದರಿಂದ ಕೊಂಡರಲ್ಲಿ ನರಬಲಿ ಪದ್ಧತಿ ರೂಢಿಗೆ ಬಂದಿದೆಯೆನ್ನುತ್ತಾರೆ. ಮುಂಡ, ಓರಾನ್ ರಲ್ಲಿಯೂ ಇಂತಹ ಐತಿಹ್ಯಗಳಿವೆ. ಭೂಮಿಯನ್ನು ಮೊದಲು ಉಳುವಾಗ ಮತ್ತು ಬೀಜ ಬಿತ್ತುವಾಗ 'ನರಬಲಿ' ಕೊಡುವ ಪದ್ಧತಿ ಮುಂಡ ಮತ್ತು ಓರಾನ್‌ನಲ್ಲಿ ಇಂದೂ ರೂಢಿಯಲ್ಲಿರುವುದಾಗಿ ಎ.ಬಿ. ಸಾರನ್ ರವರು 'Murder and Sucidide among Munda and Orans' ಎಂಬ ಕೃತಿಯಲ್ಲಿ ಸಾದರಪಡಿಸಿದ್ದಾರೆ. ಭೂತಾರಾಧನೆಯ ತಾಂತ್ರಿಕ ಪಂಥದ ವಾಮಾಚಾರದಲ್ಲಿಯೂ ನರಬಲಿ ಇದೆ. ಮಾರಮ್ಮ ಮೊದಲಾದ ಕ್ಷುದ್ರ ದೇವತೆಗಳಿಗೆ ನರಬಲಿ ಕೊಡುವುದು ಕಂಡು ಬಂದರೆ ಎಲ್ಲಮ್ಮನಿಗೆ ಇರುವಂತೆ ತಿಳಿದಿಲ್ಲ. ಕುರಿ, ಕೋಳಿ, ಕೋಣ, ಮೇಕೆಗಳ ಬಲಿ ನೀಡುವುದಿದೆ.

**ಕೊಡದ ಪೂಜೆ :**

ಎಲ್ಲಮ್ಮ ಫಲೋತ್ಪತ್ತಿಯ ದೇವತೆ. ಇವಳಿಗೆ ಕೊಡಹೊರುವ ಪೂಜಾಪದ್ಧತಿ ರೂಢಿಯಲ್ಲಿದೆ. ಪ್ರಾಚೀನ ಕಾಲದಲ್ಲಿ ಜಗತ್ತಿನ ಎಲ್ಲಾ ಆದಿವಾಸಿ ಸಮುದಾಯಗಳು ಮಗು ತಾಯಿಯ ಗರ್ಭದಿಂದ ಹುಟ್ಟುತ್ತದೆಂದು ನಂಬಿದ್ದರು. ಶಿಶು ಜನನದ ಕ್ಷೇತ್ರ ಭೂಮಿಯೆಂದು ಗರ್ಭವನ್ನು ಪೂಜಿಸುತ್ತಿದ್ದರು. ಮುಂದೆ ಮಗು ಜನಿಸುವುದು ಹೆಣ್ಣಿನ ಯೋನಿಯಿಂದ ಎಂದು ತಿಳಿದ ಮೇಲೆ ಗರ್ಭಪೂಜೆಯಂತೆ ಯೋನಿಪೂಜೆಯೂ ಪ್ರಾರಂಭವಾಯಿತು. ಸಿಂಧೂ ಸಂಸ್ಕೃತಿಯ ಅಗೆತಗಳಲ್ಲಿ ಯೋನಿ ಪೂಜೆಯ ವಿಗ್ರಹಗಳು ಸಿಕ್ಕಿವೆ. ಹೆಣ್ಣಿನ ಯೋನಿಯೊಳಗಿನಿಂದ ಚಿಗುರೊಡೆಯುತ್ತಿರುವ ವಿಗ್ರಹ ಗಮನಾರ್ಹವಾದುದು. ಆದಿವಾಸಿಗಳ ಈ ಗರ್ಭ-ಯೋನಿ ಪೂಜೆಗಳೇ ವೈದಿಕರಲ್ಲಿ ಕುಂಭ ಪೂಜೆಯಾಗಿ ಪರಿವರ್ತಿತವಾಗಿದೆ. ಜನಪದರು ಫಲೋತ್ಪತ್ತಿಯ ಸಂಕೇತವಾಗಿ ಕೊಡದ ಪೂಜೆಯನ್ನು ಉಳಿಸಿಕೊಂಡಿದ್ದಾರೆ. ಕೊಡ ಹೊರುವ ಶಾಸ್ತ್ರ ವಿವಾಹ ವಿಧಿಗಳಲ್ಲಿ ಒಂದಾಗಿದೆ. ಇದರಿಂದ ಲಗ್ನವಾಗುವ ವಧುವಿಗೆ ಬೇಗ ಸಂತಾನವಾಗುತ್ತದೆಂದು ನಂಬಿಕೆಯಿಂದ ಕುಂಬಾರರ ಮನೆಯಿಂದ ಮಡಿಕೆಯನ್ನು ತರಿಸಿ ತೊಳೆದು ಎಣ್ಣೆ ಸವರಿ ಸಣ್ಣ ಸಣ್ಣ ಬೊಟ್ಟುಗಳನ್ನಿಡುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಮುತ್ತೈದೆಯರು, ಉತ್ತರ ಕರ್ನಾಟಕದಲ್ಲಿ ಮಾತಂಗಿಯರು ಕೊಡದ ಪೂಜೆ ಮಾಡುತ್ತಾರೆ. ಎಲ್ಲಮ್ಮನಿಗೆ ಮಕ್ಕಳಾಗಲಿಲ, ಬಂಜೆಯಾಗಿದ್ದಳು. ಶಿವನ ವರಪ್ರಸಾದದಿಂದ ಪರಶುರಾಮನನ್ನು ಪಡೆದಳು ಎಂಬ ಕಥೆ

ಇದೆ. (ಇದರ ಸಂಕೇತವಾಗಿ ಆ ಕೊಡದ ಪೂಜೆ ಮಾಡುವುದಾಗಿ ಶಿಕಾರಿಪುರದ ಶ್ರೀಮತಿ ಲಕ್ಷ್ಮಮ್ಮ ತಿಳಿಸಿದರು.)

**ಪಾದುಕೆಗಳ ಪೂಜೆ :**

ಜನಪದ ಕಥೆಗಳಲ್ಲಿ ಹುಟ್ಟಿನಿಂದಲೋ ಅಥವಾ ಪತಿಯ ಶಾಪದಿಂದಲೋ ಎಲ್ಲಮ್ಮನಿಗೆ ಕುಷ್ಠರೋಗವಿರುವ ವಿಚಾರವಿದೆ. ರೋಗ ನಿವಾರಣಾರ್ಥವಾಗಿ ಅಲೆಯುತ್ತಾ ಎಕ್ಕಯ್ಯ-ಜೋಗಯ್ಯರ ಗವಿಯಬಳಿ ಹೋದಾಗ ಮರದಮೇಲೆ ಅವರ ಪಾದುಕೆಗಳಿದ್ದವು. ಮಳೆ ಬಂದು ಮರದ ಕೆಳಗೆ ಇದ್ದ ಎಲ್ಲಮ್ಮನ ಮೇಲೆ ಮಡಿಕೆಯಿಂದ ಸುರಿದ ಹನಿಗಳು ಬಿದ್ದು ರೋಗ ನಿವಾರಣೆಯಾಯಿತೆಂದು ಒಂದು ಕಥೆಯಲ್ಲಿ ಹೇಳಿದೆ. ಮಹಾಭಾರತದಲ್ಲಿ ರೇಣುಕೆ ನಾನಾ ಕಷ್ಟಗಳನ್ನು ಅನುಭವಿಸುವಾಗ ಒಮ್ಮೆ ಉರಿ ಬಿಸಿಲಿನಲ್ಲಿ ನಡೆಯುತ್ತಿರಲು ಭೂಮಿ ಚೆನ್ನಾಗಿ ಕಾದು ಕೆಂಡದಂತಾಗಿತ್ತು. ಹೋಗುವುದು ಕಷ್ಟವೆಂದು ಉಸ್ಸೆಂದು ಕುಳಿತಾಗ ಮಾವ ಭೃಗು ಮಹರ್ಷಿಗಳು ಸೊಸೆಯ ಮೇಲೆ ಕರುಣೆ ತೋರಿ ಪಾದುಕೆ ಛತ್ರಗಳನ್ನು ಕೊಟ್ಟು ಸಂತೈಸಿದನಂತೆ. ಸಿದ್ಧರ ಪಾದುಕೆಗಳಾಗಿರಲಿ ಅಥವಾ ಭೃಗು ಮಹರ್ಷಿಗಳು ಕೊಟ್ಟ ಪಾದುಕೆಗಳಾಗಿರಲಿ ಎಲ್ಲಮ್ಮನಿಗೆ ನಡೆದುಕೊಳ್ಳುವವರು ಪಾದುಕೆಗಳನ್ನು ಕೊರಳಲ್ಲಿ ಕಟ್ಟಿಕೊಳ್ಳುವುದು. ಎಲ್ಲಮ್ಮನ ಮುಂದಿಟ್ಟು ಪೂಜಿಸುವುದು ವಾಡಿಕೆಯಲ್ಲಿದೆ. ಇದು ಶಿವಮೊಗ್ಗಾ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿದೆ.

ಅಡಿಟಪ್ಪಣಿ: ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ, ಪ್ರೋ. ಎನ್.ಚಂದ್ರಪ್ಪ, ಮುಂಡ ಪ್ರಕಾಶನ, ಬೆಂಗಳೂರು, ಪು.ಸಂ. ೨೦೨-೨೧೩

## ಅಧ್ಯಾಯ ೫

## ಬಾಹುಸಾರ ಕ್ಷತ್ರಿಯ ಸಮುದಾಯದ ಜನಪದ ಸಾಹಿತ್ಯ

೫.೧ ಹಾಡುಗಳು

೫.೧.೧ ಹಂತಿಯ ಹಾಡುಗಳು

೫.೧.೨ ಕುಟ್ಟುವ ಹಾಡುಗಳು

೫.೧.೩ ಹೋಳಿ ಹುಣ್ಣಿಮೆಯಲ್ಲಿ ಹಾಡುವ ಪದಗಳು

೫.೧.೪ ಸೋಬಾನೆ ಹಾಡುಗಳು

೫.೧.೫ ಲಾವಣಿ ಪದಗಳು

೫.೧.೬ ಮದುವೆಯಲ್ಲಿ ಹಾಡುವ ಪದಗಳು

೫.೧.೭ ಜೋಗಳ ಹಾಡುಗಳು

೫.೨ ಕಥೆಗಳು

೫.೩ ಗಾದೆಗಳು

೫.೪ ಒಗಟುಗಳು ಮತ್ತು ಒಡಪುಗಳು

# ಅಧ್ಯಾಯ ೫

# ಬಾಹುಸಾರ ಕ್ಷತ್ರಿಯ ಸಮುದಾಯದ ಜನಪದ ಸಾಹಿತ್ಯ

## ಜನಪದ ಸಾಹಿತ್ಯ

ಜನಪದ ಕಲಾಪ್ರಪಂಚ ಜನಜೀವನದಷ್ಟೇ ವಿಶಾಲವಾದದ್ದು, ವ್ಯಾಪಕವಾದದ್ದು, ಪ್ರಾಚೀನವಾದದ್ದು, ಆಯಾ ಕಾಲದ ಮಾನವನ ಅಗತ್ಯಗಳು ಕಲೆಗಳ ಉಗಮ ವಿಕಾಸ ವೈವಿಧ್ಯಗಳಿಗೆ ಕಾರಣವಾಗಿವೆ. ನಿಜವಾದ ಕಲೆ ಪುಸ್ತಕ ಜ್ಞಾನದಿಂದಾಗಲಿ, ಶಾಲೆ ಕಲಿಕೆಯಿಂದಾಗಲೀ ಅವಿರ್ಭವಿಸುವಂಥಲ್ಲ. ಅಂತಃ ಸ್ಪೂರ್ತಿಯಿಂದ, ಲೋಕಾನುಭವದಿಂದ ಉದಯವಾಗತಕ್ಕದ್ದು ಎಂಬುದಕ್ಕೆ ಇವು ನಿದರ್ಶನವಾಗಿದೆ. ಜನಪದ ಹಾಡು-ಕುಣಿತಗಳು ಜಲಮೂಲ, ನಮ್ಮ ಅನಕ್ಷರಸ್ಥ ಗ್ರಾಮೀಣರ ಅಂತರಂಗ, ಅವು ಬೆಳೆದುದು ಲೋಕಕ್ಕೆ ಅನ್ನ ಬೆಳೆದುಕೊಡುವ ರೈತರ ಅಂಗಳದಲ್ಲಿ ನಮ್ಮ ಜನಪದ ಬದುಕಿಗೆ ಹುಟ್ಟಿದ ಪರಿಸರವೇ ಶಾಲೆ, ಪಟ್ಟ ಅನುಭವವೇ ಗುರು.

ಸಾಹಿತ್ಯವು ರಸಾನುಭವದ ಸುಂದರವಾದ ಅಭಿವ್ಯಕ್ತಿಯಾಗಿದೆ. ಜನಪದ ಸಾಹಿತ್ಯ ಗ್ರಂಥಸ್ಥ ಸಾಹಿತ್ಯವಲ್ಲ. ಜನರ ಬಾಯಿಂದ ಬಾಯಿಗೆ ಹರಿಯುತ್ತಾ, ಜೀವನದ ಬದಲಾವಣೆಗಳಿಗನುಗುಣವಾಗಿ ಬೆಳೆಯುತ್ತಾ ಬಂದದ್ದು. ಇದು ಒಬ್ಬ ವ್ಯಕ್ತಿಯ ಕೃಷಿಯಾಗದೆ ಸಮಷ್ಟಿ ಮನಸ್ಸಿನ ಪ್ರತಿನಿಧಿಯಾಗಿ, ಸಮಷ್ಟಿ ಸಂಸ್ಕೃತಿಯ ನಿಧಿ ಎನಿಸಿದೆ. ಎಂತಲೇ ರಾಜ್ಯದ ಅಥವಾ ರಾಷ್ಟ್ರೀಯ ಜೀವನದ ದಾಖಲೆ ಇತಿಹಾಸವಾದರೆ, ಜನಪದ ಸಾಹಿತ್ಯವು ಪ್ರಾಗ್ಯೈತಿಹಾಸಿಕ ಜೀವನದ ಪರಂಪರಾಗತ ಸಂಗತಿಯಾಗಿದೆ ಎಂದಿದ್ದಾರೆ. 'ಜೇಮ್ಸ್ ಹೇಸ್ಟಿಂಗರು'

ಜನಪದ ಸಾಹಿತ್ಯ ಸೃಷ್ಟಿಗೆ ಮುಖ್ಯವಾಗಿ ಹಿನ್ನೆಲೆಯಾದ ಪರಿಸರ ಅಂದರೆ ಹಳ್ಳಿಯ ಜೀವನ. ಆ ಜೀವನ ಏಕಮುಖವಾದುದಲ್ಲ. ಅನೇಕ ಮನೋಧರ್ಮಗಳ, ಸಂಸ್ಕಾರಗಳ ಜನ ಅಲ್ಲಿ ಕಾಣುತ್ತಾರೆ. ಅನೇಕ ಉದ್ಯೋಗಗಳನ್ನು ಕೈಗೊಂಡ ಜನ ಸಹಜೀವನದ ತತ್ವವನ್ನು ಅವಲಂಬಿಸಿ ಒಂದು ಕಡೆ ಬಾಳುತ್ತಾರೆ. ಈ ಎಲ್ಲ ವೈವಿಧ್ಯಗಳಿಗೆ ಅನುಗುಣವಾಗಿ ರೂಪುಗೊಳ್ಳುತ್ತದೆ ಜನಪದ ಸಾಹಿತ್ಯ. ಆದುದರಿಂದ ಜೀವನದಲ್ಲಿರುವಷ್ಟು ವಿಪುಲತೆ ವೈವಿಧ್ಯತೆಯನ್ನು ಕಾಣುತ್ತೇವೆ. ಆದುದರಿಂದಲೇ "ಒಂದು ಜನಾಂಗದ ಸಂಸ್ಕೃತಿಯ ಒರೆಗಲ್ಲು. ಕಲಿತ ನಾಲ್ಕಾರು ಜನ ಪಂಡಿತರಲ್ಲ, ಕಲಿಯದ ಸಾವಿರಾರು ಜನಸಾಮಾನ್ಯರು" ಎಂದು ಹೆಚ್. ತಿಪ್ಪೇರುದ್ರಸ್ವಾಮಿ ಹೇಳಿದ್ದಾರೆ.

ವೈವಿಧ್ಯತೆಯ ಆಗರವಾದ ಜನಪದ ಸಾಹಿತ್ಯದ ಕ್ಷೇತ್ರ ಸೀಮಿತವಾಗಿಲ್ಲ. ಅದು ಕೈಯಾಡಿಸದ ವಿಷಯವಿಲ್ಲ. ಹಾಯ್ದು ಬರದ ಕ್ಷೇತ್ರವಿಲ್ಲ. ಒಂದರೊಳು ಬಂದಿಲ್ಲ, ಒಂದರೊಳು ಕುಂದಿಲ್ಲ, ಎಲ್ಲವೂ ತಮ್ಮ ತಮ್ಮದೇ ಆದ ವೈಶಿಷ್ಟ್ಯವನ್ನು ಪಡೆದಿವೆ.

ಮೊಟ್ಟಮೊದಲು ಬಳಸಿಕೊಂಡ ನಾದ ರೂಪದ ಗೀತೆಗಳೇ ಜನಪದ ಸಾಹಿತ್ಯದ ಮೂಲರೂಪಗಳಾಗಿವೆ. ಎರಡನೆಯದಾಗಿ ಜನಪದ ಸಾಹಿತ್ಯ ಕತೆಗಳು, ಆಟಗಳು, ನಾಟಕಗಳು, ಒಡಪು, ಒಗಟು, ಗಾದೆ ಇತ್ಯಾದಿ ಎಲ್ಲ ಸಂಗತಿಗಳನ್ನೊಳಗೊಂಡಿವೆ. ಜಾನಪದ ಪ್ರಪಂಚ ದೊಡ್ಡದಾಗಿದೆ ಅದರ ಸಂಪತ್ತು ಅಪಾರ, ಭಾಷಾ ವಿಜ್ಞಾನ, ಸಮಾಜ ವಿಜ್ಞಾನ, ಮಾನವಿಕ ವಿಜ್ಞಾನ, ಮನೋ ವಿಜ್ಞಾನ, ವೈದ್ಯ ವಿಜ್ಞಾನ, ತಾಂತ್ರಿಕ ವಿಜ್ಞಾನ, ಗೃಹ ವಿಜ್ಞಾನ, ಸಾಹಿತ್ಯ, ಕಲೆ, ಸಂಗೀತ, ವ್ಯಾಕರಣ, ಧರ್ಮ, ಕಾನೂನು ಮುಂತಾದವುಗಳು ಪುಷ್ಟಿಗೊಳ್ಳುವಷ್ಟು ಜೀವಂತ ಸಾಮಗ್ರಿ ಅದರಲ್ಲಿವೆ.

ಒಂದು ಸಂದರ್ಭದಲ್ಲಿ ನಿಂತುಕೊಂಡು ನೋಡಿದರೆ ನಾವೆಲ್ಲ ಜನಪದರೇ, ನಾಗರೀಕ ವೇಷ ತೊಟ್ಟಿರಬಹುದು. ಮುಂದುವರಿದ ಸಂಸ್ಕೃತಿ ಎಂಬ ಸೋಗುಹಾಕಬಹುದು. ಶಿಷ್ಟ ಸಂಸ್ಕೃತಿಯರೆಂದು ಕಂಡುಬಂದರೂ ಜನಪದ ನೆಲೆಗಳಲ್ಲಿ ಹುಟ್ಟಿ ಬೆಳೆದ ನಾವುಗಳು ಅವುಗಳನ್ನು ಬಿಟ್ಟು ಬದುಕಲಾದೀತೆ. ಕುಲದೇವತಾ ಆರಾಧನೆ, ಗ್ರಾಮ ದೇವತೆಗಳ ಆರಾಧನೆಗಳು ಮದುವೆ ಮುಂಜಿಗಳಲ್ಲಿ ಅಷ್ಟೇ ಏಕೆ ಹೆಚ್ಚು ಹೆಚ್ಚಾಗಿ ವಿಶೇಷ ಸಮಾರಂಭಗಳಲ್ಲಿ ಮತ್ತೆ ಮತ್ತೆ ನೆನಪಿಗೆ ಬರುತ್ತವೆ. ಸಂಸ್ಕೃತದ ಮಂತ್ರಗಳೆಲ್ಲ ಮೊದಲು ಹೇಳುವುದು ಗ್ರಾಮದೇವತಾಭ್ಯೋನಮಃ ಕುಲದೇವತಾಭ್ಯೋನಮಃ ಎಂದು. ಹೀಗಾಗಿ ದಿಲ್ಲಿಯಲ್ಲಿದ್ದರೂ ಇಂದಿನ ವಿಜ್ಞಾನ ಯುಗದಲ್ಲಿಯೂ ಕೂಡ ಒಂದಲ್ಲಾ ಒಂದು ದಿನ ಹಳ್ಳಿಗೆ ಬರಬೇಕಲ್ಲವೇ. ಒಟ್ಟಿನಲ್ಲಿ ಜಾನಪದ ಅಧ್ಯಯನಕ್ಕೆ ಪ್ರೇರಣೆ ದೊರತದ್ದು ಜರ್ಮನ್ ತತ್ವಶಾಸ್ತ್ರಜ್ಞ ಹರ್ಡರ್‌ರಿಂದ ಹಾಗೂ ಯೂರೋಪ್‌ನಲ್ಲಿ ಕೈಗಾರಿಕಾ ಕ್ರಾಂತಿಯ ಕಾರಣದಿಂದ ಗ್ರಾಮೀಣ ಪ್ರದೇಶದ ಜನ ನಗರಗಳಿಗೆ ವಲಸೆ ಹೋಗಲು ಆರಂಭಿಸಿದ ಮೇಲೆ ಹೊಸ ನಗರ, ವಾತಾವರಣ ಒತ್ತಡಗಳಿಗೆ ಒಳಗಾಗಿ ಗ್ರಾಮಗಳಲ್ಲಿ ಆಟ, ಊಟೋಪಚಾರಗಳನ್ನು ಕೈಬಿಡಲಾರಂಭಿಸಿದರು. ಅವರ ನೆಲೆಗಟ್ಟುಗಳನ್ನು ವಿಶೇಷವಾಗಿ ಕಂಡುಹಿಡಿದು ಅವರ ಆಚರಣೆಗಳನ್ನು, ಸಂಪ್ರದಾಯವನ್ನು ಅಭ್ಯಾಸಿಸುವುದು ಇಂದಿನ ಈ ವೈಜ್ಞಾನಿಕ ಯುಗದಲ್ಲಿ ಅತ್ಯಂತ ಅವಶ್ಯವಾದುದು ಮತ್ತು ಯೋಗ್ಯವಾದುದಾಗಿದೆ.

ಒಟ್ಟಿನಲ್ಲಿ ಜನಪದ ಸಾಹಿತ್ಯ ಜನರ ಜೀವನದ ಜೀವನಾಡಿ ಇದ್ದಂತೆ. ನೇರವಾಗಿ ಭಟ್ಟಿ ಇಳಿದ ಸಾಹಿತ್ಯ ಅನುಭವದ ಮೂಸೆಯಲ್ಲಿಂದ ಹೊರಬಂದದ್ದು. ಜಡವಬಲ್ಲಿದ ಎಂಬ ಭೇದವಿಲ್ಲದೆ ಸರ್ವವ್ಯಾಪಿಯಾದದ್ದು. ಈ ಜನಪದ ಸಾಹಿತ್ಯ ಪ್ರಾಚೀನ–ಅರ್ವಾಚೀನಗಳೆರಡೂ ಇಲ್ಲಿ ಪರಸ್ಪರ ಸಂಧಿಸಿ ಕೈ ಕುಲುಕುತ್ತವೆ. ಹರಿಯ ಬಾಯಲ್ಲಿ ಬ್ರಹ್ಮಾಂಡ ಅಡಗಿದಂತೆ ಜನಪದ ಕಕ್ಷೆಯಲ್ಲಿ ಎಲ್ಲವು ಅಡಗಿದೆ. ಆದರೆ ಅದರ ಅರಿವು ನಮಗಿರದೇ ಹೋದಾಗ ಅದನ್ನು ಮರೆತಾಗ ಅದನ್ನು ನೆನಪಿಸಿದ ಶ್ರೇಯಸ್ಸು ಪಾಶ್ಚಾತ್ಯ ವಿದ್ವಾಂಸರಿಗೆ ಮೊದಲು ಸೇರಬೇಕು. ಅದರ ನಂತರ ನಮ್ಮಲ್ಲಿ ಬೇಟಗೇರಿ ಕೃಷ್ಣಶರ್ಮ, ಹಲಸಂಗಿ ಸಹೋದರರು, ಮಾಸ್ತಿ, ಬಿ.ಎಂ.ಶ್ರೀ. ಹಾಗೂ ಇನ್ನಿತರರ ದುಡುಮೆಯ ಫಲವಾಗಿ ಜನಪದ ಸಾಹಿತ್ಯವನ್ನು ಉದಾಸೀನ ಮಾಡಬೇಡಿ ಎಂದು ವಿಶ್ವ ಕರ್ನಾಟಕ ಪತ್ರಿಕೆ ಮೂಲಕ ಮನವಿ ಮಾಡಬೇಕಾಯಿತು ಎಂಬ ಹೇಳಿಕೆ ಗಣನೀಯವಾದುದು. ಆದರೆ ಜನಪದ ಸಾಹಿತ್ಯ ಅಳಿಸಿ

ಹೋಗಿರಲಿಲ್ಲ, ಮರೆತು ಹೋಗಿತ್ತು. ಆದರೆ ಅಲ್ಲಲ್ಲಿ ಜನಪದ ಸಾಹಿತ್ಯದ ಸೊಗಡನ್ನು ತಮ್ಮ ಕಾವ್ಯಗಳಲ್ಲಿ, ಬರಹಗಳಲ್ಲಿ, ಕೀರ್ತನ ಸಾಹಿತ್ಯದಲ್ಲಿ ಬಳಸಿಕೊಂಡು ತಮ್ಮ ತಮ್ಮ ಕಾವ್ಯದ ಸತ್ವವನ್ನು ಬೆಳೆಸಿಕೊಂಡು ಜನಪದ ಸಾಹಿತ್ಯವನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದ ಶಿಷ್ಟಕವಿಗಳಿಗೆ, ಹರಿದಾಸರಿಗೆ, ವಚನಕಾರರಿಗೆ, ಅವರೆಲ್ಲರಿಗೂ ನಮ್ಮ ನಮನಗಳನ್ನು ಸಲ್ಲಿಸಬೇಕು.

**ಜಾನಪದ ನೆಲೆ**

ನಮ್ಮ ಮನೆತನದ ಮೂಲ ಇತಿಹಾಸ ತಿಳಿಯಬೇಕಾದರೆ ನಾವು ಹೆಳವರನ್ನು ಹುಡುಕಿಕೊಂಡು ಹೋಗಬೇಕು. ಆತ ಮನೆಗೆ ಭಾರವಾಗಿ ಬದುಕಲಾರ ಬುದ್ಧಿವಂತ. ಒಂದು ಕುಟುಂಬದ ಆಗುಹೋಗುಗಳನ್ನು ತನ್ನ ಕಡತದಲ್ಲಿ ಬರೆದುಕೊಂಡು ಅಂದಿನಿಂದ ಇಂದಿನವರೆಗೂ ಬಂದು ಓದಿ ಹೇಳುತ್ತಾ ಈತ ಧಾನ್ಯಗಳನ್ನು ಮಾತ್ರವಲ್ಲ ಸಾಕು ಪ್ರಾಣಿಗಳನ್ನು ಕೂಡ ಬೇಡುತ್ತಾನೆ.

ಇನ್ನು ಯಾವುದೇ ಶುಭ ಕಾರ್ಯವಾದ ಮೇಲೆ ಕೆಲವು ಮನೆತನಗಳಲ್ಲಿ ಶಕ್ತಿ ಆರಾಧನೆ ಇದ್ದವರ ಮನೆಗಳಲ್ಲಿ ಗೊಂದಲ ಹಾಕುವುದು ಸಂಪ್ರದಾಯ. ಗೊಂದಲಿಗರು ಹಾಡುವುದನ್ನೇ ಕಸುಬನ್ನಾಗಿ ಮಾಡಿಕೊಂಡವರು. ಜನಪದ ಹಾಡುಗಳನ್ನು ಇವರು ಹಾಡುತ್ತಾರೆ. ಗೊಂದಲ ಒಂದು ಪೂಜಾ ವಿಧಾನ. ಗೊಂದಲಿಗರ ಆರಾಧ್ಯ ದೈವ ಅಂಬಾ ಭವಾನಿ, ತಮ್ಮ ದೈವದ ಮುಂದೆ ಬೆಳಕು ಹರಿಯುವವರೆಗೆ ಕಥೆಯನ್ನು ಹಾಡುತ್ತಾ, ಕುಣಿಯುತ್ತಾ, ಇರುವುದೇ ಪೂಜಾ ವಿಧಾನ. ಇದನ್ನು ಗೊಂದಲ ಹಾಕುವುದು ಎಂದು ಕರೆಯುತ್ತಾರೆ.

ಮರಾಠ, ಶಿಂಪಿ, ಸೋವಾರ ಹಾಗೂ ಡೆಕ್ಕನ್ ಪ್ರದೇಶದ ಇತರ ಜಾತಿಯವರ ಶುಭ ಸಂದರ್ಭಗಳಲ್ಲಿ ಗೊಂದಲವನ್ನು ಏರ್ಪಡಿಸುವ ಸಂಪ್ರದಾಯವಿದೆ. ಗೊಂದಲ ಹಾಕುವ ಸಮಯದಲ್ಲಿ ಗಂಡಸರು ಮುಂಡಾಸು ಬಟ್ಟೆಯಿಂದ ಕಪ್ಪಾದ ಅಂಗಿ, ಝಗ, ಕೊರಳಲ್ಲಿ ಕವಡೆಸರ, ನಡುಪಟ್ಟಿ ಹಿತ್ತಾಳೆ ಅಥವಾ ಬೆಳ್ಳಿ ಕೆತ್ತನೆಯ ವಿಗ್ರಹ, ಕಾಲುಗೆಜ್ಜೆ ಹಾಗೂ ಹೆಂಗಸರು ಸೀರೆ ರವಿಕೆ ಆಭರಣಗಳನ್ನು ಧರಿಸುತ್ತಾರೆ. ಇವರಲ್ಲಿ ಬಾಲ್ಯ ವಿವಾಹ ಪದ್ಧತಿ ಇತ್ತು. ಮಾಂಸಹಾರಿಗಳಾದ ಇವರು ಹಿಂದೂ ಮುಸ್ಲಿಂ ಎರಡೂ ಹಬ್ಬಗಳನ್ನು ಆಚರಿಸುತ್ತಾರೆ.

ಅಂದಿನ ಆಚರಣೆಗಳು ಇಂದಿಗೂ ಉಳಿದುಕೊಂಡಿವೆ. ಅದರ ಬೇರುಗಳನ್ನು ಹುಡುಕಿಕೊಂಡು ಹೋದಾಗ ನಮಗೆ ಕಾಣುವುದು ನಿರಾಶೆ. ಕಾರಣ ಏನು? ಎಂಬ ಪ್ರಶ್ನೆಗೆ ಉತ್ತರಿಸುವವರಾರು? ಶಿಕ್ಷಣದ ಗಾಳಿ ಜನಪದರ ಮೂಲ ಬೇರುಗಳನ್ನು ಅಲಗಿಸತೊಡಗಿ ಅವರಿಗೆ ನೆಲೆ ಕಾಣದಾಗಿದೆ. ಕನಕದಾಸರ ಕೀರ್ತನೆಯಂತೆ ಕುಲದ ನೆಲೆಯನ್ನೇನಾದರು ಬಲ್ಲಿರಾ ? ಎಂಬಂತಾಗಿದೆ.

"ಸರ್ವೆಜನಾ ಸುಖಿನೊ ಭವಂತು, ಎಂಬ ಸಂಸ್ಕೃತದ ಉಕ್ತಿಯಂತೆ ತಮ್ಮನ್ನು ಮಮತೆಯಿಂದ, ಗೌರವದಿಂದ, ಅಭಿಮಾನದಿಂದ ಕಾಣುವ ಜನರಿಗೆ ನಮ್ಮ ಜನಪದರು ಕೊಡುವ ಹರಕೆ ಏನು ಗೊತ್ತೇ?

ಆಡೋ ಮಕ್ಕಳಾಗಲಿ, ತೂಗೋ ತೊಟ್ಟಿಲಾಗಲಿ
ಪಾಂಡವರ ಬಳಗಾಗಲಿ ಹತ್ತು ಮಂದ್ಯಾಗ
ಅವರದೇ ಮತ್ತು ಎಂಬುದಾಗಿದೆ.

ಜಾನಪದರ ಹಾಡು, ಕುಣಿತ, ಆಚರಣೆ, ಕಥೆ, ನಂಬಿಕೆ, ಒಗಟು, ಒಡಪುಗಳು, ಲಾವಣಿ ಮುಖಾಂತರ ಅವರ ಜೀವನ ವಿಧಾನವನ್ನು ಅಥವಾ ಒಂದು ಸಮುದಾಯದವರ ಜೀವನದ ವಿಧಾನವನ್ನು ಅರಿಯಬಹುದು. ಜನಪದ ಸಾಹಿತ್ಯವೆನ್ನುವುದು ಈ ರೀತಿಯ ವಿವಿಧ ಪ್ರಕಾರಗಳನ್ನು ಒಳಗೊಂಡಿದ್ದು, ಇಂತಹ ಸಾಹಿತ್ಯಕ್ಕೂ ಇಲ್ಲಿ ವಾಸಿಸುವ ಪರಿಸರಕ್ಕೂ, ಒಂದು ಬಗೆಯ ಸಂಬಂಧ ಇದ್ದೇ ಇರುತ್ತದೆ. ಮನುಷ್ಯನ ಬಹುಮುಖ್ಯ ಉದ್ದೇಶವೆಂದರೆ ತಾನು ಹುಟ್ಟಿದಾಗಿನಿಂದ, ಸಾವಿನವರೆಗೂ ಹಲವಾರು ಮಜಲುಗಳ ಮಧ್ಯೆ ಬದುಕಿ, ಅನುಭವಗಳನ್ನು ಪಡೆದು ಅಂತಹ ಅನುಭವದ ಸಾರವನ್ನು ತಾನು ಕಂಡುಕೊಂಡಿರುವ ಮಾಧ್ಯಮ ಅಥವಾ ಸಾಹಿತ್ಯದ ಯಾವುದಾದರೂ ಪ್ರಕಾರದಲ್ಲಿ ಅಭಿವ್ಯಕ್ತಪಡಿಸುವುದು ಆಗಿದೆ. ಈ ಹಿನ್ನೆಲೆಯಲ್ಲಿ ಹುಟ್ಟಿ ಬಂದವುಗಳೇ ಕಥೆ, ಹಾಡು ಕುಣಿತ. ಸಮುದಾಯದಲ್ಲಿ ಸಂಭವಿಸುವ ಎಲ್ಲಾ ಘಟನೆಗಳು ಇಲ್ಲಿ ಸಾಹಿತ್ಯವಾಗಿ ಹೊರಬರುತ್ತದೆ. ಸಾಹಿತ್ಯವು ಸಮುದಾಯದ ಪ್ರತಿನಿಧೀಕರಣದ ಕನ್ನಡಿಯಾಗಿದೆ. ಹಾಗಾಗಿ ಸಾಮಾಜಿಕ ಚಿತ್ರಣಕ್ಕೂ ಮತ್ತು ವಾಸ್ತವಿಕ ಸಮಾಜದ ಸ್ವರೂಪಕ್ಕೂ ಸಾಮ್ಯತೆಗಳಿರುವುದು ಕಂಡುಬರುತ್ತದೆ. ಕಾರಣ ಜನಪದ ಸಾಹಿತ್ಯವೆಂಬುದು ಸಮುದಾಯವನ್ನು ಹೊರತುಪಡಿಸಿ ಇರುವುದಿಲ್ಲ. ಸಾಹಿತ್ಯದ ಮೂಲಕ ಸಮುದಾಯದ ವಾಸ್ತವಿಕತೆಯನ್ನು ಅರಿಯಬಹುದಾಗಿದೆ. ಇಲ್ಲಿ ಸಾಹಿತ್ಯ ಎಂದ ಕೂಡಲೇ ಶಿಷ್ಟ, ಜಾನಪದವೆಂದು ವಿಭಾಗಿಸಿಕೊಂಡು ಬಂದ ಕ್ರಮಗಳು ನಮ್ಮಲ್ಲಿ ಕಂಡುಬಂದರೂ ಜಾನಪದೀಯ ಅಧ್ಯಯನ ಕೈಗೊಂಡ ಹಿನ್ನೆಲೆಯಲ್ಲಿ ಜಾನಪದ ಸಾಹಿತ್ಯಕ್ಕೆ ಮಹತ್ವವನ್ನು ಕೊಡಲಾಗಿದೆ.

ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಶ್ರೀ. ದೇ. ಜವರೇಗೌಡರು, ಸೋಮಶೇಖರ ಇಮ್ರಾಪುರ, ದೇವೇಂದ್ರಪುರ ಹಕಾರೆ, ಎಂ.ಎಸ್.ಲಠ್ಠೆ, ಎಂ.ಎಸ್. ಸುಂಕಾಪುರ, ಶ್ರೀ ಬಿ.ಎಸ್.ಗದ್ದಗಿಮಠರು, ಕಂಬಾರರು ಮುಂತಾದವರನ್ನು ಒಳಗೊಂಡಂತೆ ಜನಪದ ಸಾಹಿತ್ಯ ಸಂಗ್ರಹಕಾರ್ಯ ಭರದಿಂದ ಸಾಗಿದೆ. ಜೊತೆಗೆ ಈ ಸಂಗ್ರಹಿತ ಪಠ್ಯಗಳನ್ನು ವಿಶ್ಲೇಷಿಸುವ ಪ್ರಯತ್ನಗಳು ನಡೆದಿವೆ. ಆದರೂ ಅಕಾಡೆಮಿಕ್ ವಲಯದಲ್ಲಿ ಲಿಖಿತ ಆಕರಗಳಿಗೆ ದೊರೆತ ಆದ್ಯತೆ ಮತ್ತು ಮನ್ನಣೆ ಅಷ್ಟಾಗಿ ದೊರೆತಿಲ್ಲ.

ಮೌಖಿಕ ಸಾಹಿತ್ಯ ಆಥವಾ ಜನಪದ ಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ಜಾನಪದದ ಒಂದು ಪ್ರಕಾರವಾಗಿದೆ. ಜನಪದರಿಂದ ಮೌಖಿಕ ರೂಪದಲ್ಲಿ ರಚನೆಗೊಂಡ ಪ್ರಕಟಿತ ಅಥವಾ ಅಪ್ರಕಟಿತ ರೂಪದಲ್ಲಿರುವ ಸಾಹಿತ್ಯವು ಗಾದೆ, ಗೀತೆ, ಒಗಟು, ಒಡಪು, ಲಾವಣಿ, ಖಂಡಕಾವ್ಯ, ಮಹಾಕಾವ್ಯ,

ಐತಿಹ್ಯ, ಪುರಾಣ ಹೀಗೆ ಮುಂತಾದ ರೂಪದಲ್ಲಿರುತ್ತದೆ. ಜಾನಪದ ಸಾಹಿತ್ಯವೆಂಬುದು ಜನರ ನಿತ್ಯ ಜೀವನದ ನೋವು ನಲಿವಿನ ಸಂಗತಿಗಳನ್ನು ದಾಖಲಿಸಿಕೊಂಡ ಆಕರವೇ ಆಗಿದೆ. ಈ ಕುರಿತು ಅನೇಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹಾಗಾಗಿ ವಿದ್ವಾಂಸರ ವಲಯದಲ್ಲಿ ಜಾನಪದ ಸಾಹಿತ್ಯ ಕುರಿತಂತೆ ಇರುವ ವಿಚಾರಗಳನ್ನು ತಿಳಿಯಬಹುದು.

ಜಾನಪದ ಸಾಹಿತ್ಯವೆಂದರೆ ಕೇವಲ ಹಾಡಲ್ಲ, ಅದರಲ್ಲಿ ದೇವರ ಧ್ಯಾನ, ಭಕ್ತಿ, ಚಿಂತನೆಯಷ್ಟೇ ಇರುವುದಿಲ್ಲ. ಧಾರ್ಮಿಕ ಆಚರಣೆ, ನಡೆ, ನುಡಿ, ಕಲೆ, ಸಾಹಿತ್ಯ, ಸಂಗೀತಗಳಲ್ಲದೇ ಅದು ಒಂದು ಸಮುದಾಯದ ಸಮಗ್ರ ಜೀವನದ ಜೀವಂತ ಚಿತ್ರಣವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ವಿದ್ವಾಂಸರುಗಳು ವಿಶೇಷವಾದ ಮೌಖಿಕ ಸಾಹಿತ್ಯದಲ್ಲಿ ಆಸಕ್ತಿ ತಳೆದು ಜಾನಪದೀಯ ಅಧ್ಯಯನ ಕೈಗೊಂಡು ಹಲವಾರು ಗ್ರಂಥಗಳನ್ನು ಹೊರತಂದಿದ್ದಾರೆ. ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಹಾಗೆಯೇ ಕಥೆ, ಲಾವಣಿ ಮುಂತಾದವುಗಳನ್ನು ಭರದಿಂದ ಸಂಗ್ರಹಿಸುವ ಕೆಲಸ ಮಾಡಿದ್ದಾರೆ. ಅಲ್ಲದೆ ಜಾನಪದದ ಸಮರ್ಪಕ ಅಧ್ಯಯನ ದೃಷ್ಟಿಯಿಂದ ಕರ್ನಾಟಕ ಜಾನಪದ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು, ಯಕ್ಷಗಾನ ಅಕಾಡೆಮಿಗಳು, ಜಾನಪದ ಟ್ರಸ್ಟ್, ಜಾನಪದ ಪತ್ರಿಕೆ ಮುಂತಾದವು ಬೆಳಕಿಗೆ ಬಂದು ಕಾರ್ಯ ನಿರ್ವಹಿಸುತ್ತವೆ.

ಅನೇಕ ಜಾನಪದ ವಿದ್ವಾಂಸರುಗಳು ಇಂತಹ ಸಮಿತಿಗಳ ಮುಖ್ಯಕಾರ್ಯ ನಿರ್ವಾಹಕರಾಗಿ ಜಾನಪದ ಅಧ್ಯಯನಕ್ಕೆ ಪೂರಕವಾಗಿ ಉತ್ತೇಜನ ನೀಡಲು ಜಾನಪದ ಸಂಸ್ಕೃತಿ ಆಧಾರಿತ ಗ್ರಂಥಗಳು ಅಪಾರ ಪ್ರಮಾಣದಲ್ಲಿ ಪ್ರಕಟಗೊಳ್ಳುವಂತೆ ಮಾಡಿದ್ದಾರೆ. ಇಂದು ಕನ್ನಡ ವಿಶ್ವವಿದ್ಯಾಲಯದಲ್ಲಿ ಜಾನಪದದ ಬಗ್ಗೆ ಸಂಶೋಧನೆ ನಡೆಯುತ್ತಿದ್ದು, ಅನೇಕ ಸಂಶೋಧನಾತ್ಮಕ ಪ್ರಬಂಧಗಳು ಹೊರಬರುತ್ತಲಿರುವ ಸಂದರ್ಭದಲ್ಲಿ ಶಿವಮೊಗ್ಗ ಜಿಲ್ಲೆಯನ್ನು ಆಯ್ಕೆಮಾಡಿಕೊಂಡು ಇಲ್ಲಿನ ಬಾಹುಸಾರ ಕ್ಷತ್ರಿಯ ಸಮುದಾಯದವರ ಮೌಖಿಕ ಸಾಹಿತ್ಯದ ಕುರಿತು ವಿವೇಚಿಸುವುದು ಇಲ್ಲಿನ ಉದ್ದೇಶವಾಗಿದೆ.

ಈ ಸಮುದಾಯದವರಲ್ಲಿ ಇತರೆ ಸಮುದಾಯದಲ್ಲಿರುವಂತೆ ಇವರಲ್ಲಿಯೂ, ಮೈನೆರೆಯುವುದು, ಮದುವೆ, ಸೀಮಂತ, ಹುಟ್ಟಿನ ಸಂದರ್ಭ, ಒಕ್ಕಲುತನದ ಕೆಲಸಕಾರ್ಯದ ರಾಶಿಯ ಸಂದರ್ಭ, ಬಿಡುವಿನ ಸಂದರ್ಭ, ಹಬ್ಬ-ಹರಿದಿನದಂತಹ ಸಮಯದಲ್ಲಿ ಇವರ ಬಾಯಲ್ಲಿ ಹಾಡುಗಳು ತಾನೇ ತಾನಾಗಿ ಹರಿದುಬರುವುದನ್ನು ಕಾಣಬಹುದು.

### ೫.೧ ಹಾಡುಗಳು

ಜಾನಪದ ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗಿರುವ ಈ ಜನಪದ ಹಾಡು, ಜನಪದ ಸಂಸ್ಕೃತಿಯ ಅಂಗವೂ ಹೌದು. ಇದು ಗ್ರಾಮೀಣ ಅನಕ್ಷರಸ್ಥರ ಸೃಷ್ಟಿಯಾದುದರಿಂದ ಇದನ್ನು ಹಳ್ಳಿಯ ಹಾಡು ಎಂದು ಕರೆಯಲಾಗಿದೆ. ಪಲ್ಲವಿಯ ಮೂಲಕ ಕಟ್ಟಿದ ಈ ಹಾಡು ಕರ್ಣಾ-ಕರ್ಣಿಯಾಗಿ ತಲೆಮಾರಿನಿಂದ ತಲೆಮಾರಿಗೆ ಕಾಣಬರುವಾಗ ಆಸಕ್ತಿಯುಳ್ಳ ತೀಕ್ಷ್ಣಮತಿಗಳ ನಾಲಗೆಯ ಮೇಲೆ ನಲಿಯುತ್ತದೆ.

ಸಾಮಾನ್ಯವಾಗಿ ಜನರು ಹೇಳುವಂತೆ ಇದು ಒಂದು ಪದ ಅಥವಾ ಹಾಡು. ಹಳ್ಳಿಯ ಅವಿದ್ಯಾವಂತ ಜನರು ಈ ಹಾಡನ್ನು ಮೈಗೂಡಿಸಿಕೊಂಡವರಿಗೆ ಒಂದು ಪದ ಹೇಳು, ಒಂದು ಹಾಡೇಳು ಎನ್ನುತ್ತಾರೆ. ಆದ್ದರಿಂದ ಹಳ್ಳಿಗರ ಬಾಯಲ್ಲಿ ಹಾಡಾಗಿ ಹರಿಯುವ ಇದು ಕಂಠಸ್ಥಪರಂಪರೆಯ ಜೀವಾಳವೂ ಹೌದು.

ಪರಿಸರಕ್ಕನುಗುಣವಾಗಿ ಹಾಡುವ ಧಾಟಿಯಲ್ಲಿ ವ್ಯತ್ಯಾಸ ಕಂಡು ಬರುತ್ತದೆ. ಒಂದೇ ಜನಪದ ಗೀತೆಯನ್ನು ಒಂದೊಂದು ಕಡೆಯವರು ಒಂದೊಂದು ರೀತಿಯಲ್ಲಿ ಧ್ವನಿ ವ್ಯತ್ಯಾಸ ಮಾಡಿ ಹಾಡಿದ್ದುಂಟು.

**ಈ ಹಾಡುಗಳನ್ನು ಅವಲೋಕಿಸಿದಾಗ**

೧. **ಕೆಲಸದ ಹಾಡುಗಳು**
   ೧. ಹಂತಿಯ ಹಾಡುಗಳು
   ೨. ಬೀಸುವ ಪದಗಳು
   ೩. ಕುಟ್ಟುವ ಪದಗಳು

೨. **ಹಬ್ಬದ ಹಾಡುಗಳು**
   ೧. ಗುಳ್ಳವನ ಪದಗಳು
   ೨. ಹೋಳಿ ಹಬ್ಬದ ಹಾಡುಗಳು
   ೩. ಗುರ್ಚಿ ಪದಗಳು
   ೪. ಮೊಹರಂ ಪದಗಳು
   ೫. ಜೋಕುಮಾರನ ಹಾಡುಗಳು

೩. **ಜೀವನ ಚಕ್ರದ ಮುಖ್ಯ ಘಟ್ಟಗಳಲ್ಲಿ**
   ೧. ಬಾಲ್ಯ, ಯೌವ್ವನ, ಮದುವೆ
   ೨. ಸಾವಿನ ಹಾಡುಗಳು
   ೩. ಜೋಗುಳ ಹಾಡುಗಳು
   ೪. ಸೋಬಾನೆ ಪದಗಳು
   ೫. ಮದುವೆ ಹಾಡುಗಳು
   ೬. ಸಾವಿನ ಸಂದರ್ಭದ ಹಾಡುಗಳು

೪. **ಕುಣಿತದ ಹಾಡುಗಳು**
   ೧. ಕೋಲಾಟದ ಹಾಡುಗಳು
   ೨. ಡೊಳ್ಳಿನ ಹಾಡುಗಳು

೫. **ದೇವರ ಸ್ತುತಿಸುವ ಹಾಡುಗಳು**
   ೧. ದೇವರ ಕುರಿತು
   ೨. ನಾಮ ಸ್ಮರಣೆ ಮಾಡುವ ಹಾಡುಗಳು.

ಈ ರೀತಿಯಾಗಿ ಹಲವಾರು ಪ್ರಕಾರಗಳಲ್ಲಿ ಹಾಡುಗಳು ಕಂಡುಬರುತ್ತವೆ.

**ಕೆಲಸದ ಹಾಡುಗಳು**

**೫.೧.೧ ಹಂತಿಯ ಹಾಡುಗಳು.**

ಸಾಮಾನ್ಯವಾಗಿ ರೈತರು ಈಗಿನ ಹಾಗೆ ತಾಂತ್ರಿಕ ವ್ಯವಸ್ಥೆ ಮುಂದುವರೆಯದ ಪ್ರಾಚೀನ ಕಾಲದಲ್ಲಿ ತಮ್ಮ ಹೊಲಗಳಲ್ಲಿ ಎಲ್ಲ ಧಾನ್ಯಗಳ ರಾಶಿ ಮಾಡುವ ಸಂದರ್ಭದಲ್ಲಿ ರೈತಾಪಿ ಜನರು ಬೇಜಾರು ಕಳೆಯುವಂತೆ ತಮ್ಮದೆ ಆದ ದಾಟಿಯಲ್ಲಿ ಮುಂಜಾವಿನ ಸಮಯದಲ್ಲಿ ಎದ್ದು ಎತ್ತುಗಳಿಂದ ಧಾನ್ಯಗಳ ತೆನೆಗಳನ್ನು ತುಳಿಸುವ ಸಂದರ್ಭದಲ್ಲಿ ಹೇಳುತ್ತಿದ್ದ ಹಾಡು ಈ ರೀತಿಯಾಗಿವೆ.

**ಹಂತಿ ಹೊಡಿಯುತ, ಎಂತವನ ನೆನಿಬೇಕು**
**ಗಂತಪಿತನಾದ ಗಣಪನೆ । ಗಂತಪಿತನಾದ ಗಣಪನ**
**ನೆನೆದರ ತಪ್ಪತ್ತಿನ ಹಂತಿ ತುಳದಾವೊ ॥**

ತಮ್ಮ ಕೆಲಸ ಕಾರ್ಯಗಳು ಸುಗಮವಾಗಿ ಸಾಗುವುದಕ್ಕೆ ವಿಘ್ನವಿನಾಶಕ ಗಣಪನನ್ನು ಸ್ಮರಿಸುವ ಪರಿಪಾಠವು ಇದರಿಂದ ಕಂಡುಬರುತ್ತದೆ.

**ಗುಡ್ಡದ ವಾರ್‍ಯಾಗ ಗುಗ್ಗಳ ಹೋಗಿ ಎದ್ದ**
**ಅಪ್ಪ ಬಸವಯ್ಯನ ಶಿವಪೂಜೊ ಅಪ್ಪಬಸವಯ್ಯ**
**ನ ಶಿವಪೂಜೆ ಆಗುವಾಗ ಆಕಾಶದ ಗಂಟೆ ನುಡಿದಾವೊ**

ಈ ರೀತಿ ಬಸವನ ಪೂಜೆಯ ಸಂದರ್ಭವನ್ನು ಅನುಸರಿಸಿ ಹಾಡು ಹೇಳುವುದುಂಟು.

**ಆಕಳ ಕರ ಬಿಟ್ಟು ನಾಲ್ಕು ಮೂಲಿಗಿ ನಿಂತು**
**ಯಾಕ ಗೊಪ್ಪವ ಕರಿವಲ್ಲಿ ನಿನ್ನಮಗ**
**ಹಾಲಿಲ್ಲದ ಬಾನ ಉಣವಲ್ಲ.**
**ಬಬಲಾದ ಅಯ್ಯನವರ ಬಗೆನಮಗೆ ತಿಳಿಲಿಲ್ಲ**
**ನೆಲಬಂರಿವಾರದೊಳಗ ಶಿವಪೂಜೆ । ನೆಲಬರಿವಾರದೊಳಗ**
**ಶಿವಪೂಜೆ ಮಾಡಿಕೊಂಡ ಆಕಾಶದ ಗಂಟೆ ನುಡಿಸ್ಯಾರೊ**
**ಅಂಗಿಯ ಕಳದಾನ ಅಂಗಳಕ ನಿಂತಾನ**
**ಅಂಗೈಯಾಗ ಅಡಿಕಿ ಒಡದಾನ । ಅಂಗೈಯಾಗ**
**ಅಡಿಕಿ ಒಡದಾನ ಗಂಗಯ್ಯ ಸ್ವಾಮಿ ಹಾದಹೋಗ್ಯಾನ**
**ಜಳಕಕ**
**ಕಲ್ಲ ಕಡಬಿನ ಮಾಡಿ ಮುಳ್ಳ ಶ್ಯಾವಿಗೆ ಮಾಡಿ**
**ಬನ್ನಿ ಎಲಿಯ ಪತ್ರೇಳ್ಯೊ ಪಾಂಡವರ ಉಣ್ಣದೇ**
**ಹೋಗ್ಯಾರು ವನವಾಸ**

**ಹಸರ ಕುಬಸಚೆಂದ, ಬಸರ ಹೆಂಗಸ ಚೆಂದ, ಹೆಸರಾಗಿ**
**ಚೆಂದ ಬಬಲಾದ್ಯ, ಬಬಲಾದಿ ಉಡಕಿರ ಹಸರ ಯಾಲಕ್ಕಿ**
**ಗೊನಿ ಚೆಂದ**
**ಬಾಯಾಗ ಹಲ್ಲಿಲ್ಲ, ಎದಿಮ್ಯಾಗ ಮಲಿಯಿಲ್ಲ**
**ಎಷ್ಟು ಹಡದೆವ್ವ ಕೋಳೆವ್ವ, ನಿನ್ನ ಜನ್ಮಕ**
**ತಿಪ್ಪಸವರದ ಬಿಡಲಿಲ್ಲ**

ಈ ರೀತಿಯ ಹಲವಾರು ಪದ್ಯಗಳನ್ನು ಹೇಳುತ್ತ ಹಂತಿಯನ್ನು ಕಟ್ಟಿ ಹೊಡೆಯುವುದು ವಾಡಿಕೆಯಾಗಿದೆ., ಅದರಂತೆ ಬೀಸಲು ಕುಳಿತಾಗ ಹಾಡುವ ಹಾಡು

**ಬೀಸುಕಲ್ಲಿಗೆ ಶರಣ, ಗೋಧಿ ಮುಕ್ಕಿಗೆ ಶರಣ**
**ಆಗು ಮುಕ್ಕಿಗೆ ಶಿವಶರಣ ಬಿಸಾದ ಕುಂತಿನಿ**
**ಚಂದಾನ ಬದುಕಲ್ಲ, ಬಂಗಾರ ಬಿಳಿಜೋಳ**
**ತಾಸ ಹೊತ್ತಿನಾಗ ತಿರವಿನ ಬಿಸಾದ ಕುಂತಿನ**

ಮತ್ತೊಂದು ಪದ್ಯದಲ್ಲಿ

**ಆಕಳ ಹೆಂಡಿತಂದ ಅದುಮನಿ ಸಾರಿಸಿ**
**ಗೋಪಿ ತಾಯಿಗಿ ತರಿ ಹೊಡದ ಬಿಸಾಕ ಕುಂತಿನ**
**ಆಕಳ ಹೊಟ್ಯಲಿ ಹುಟ್ಯಾನ್ರಿ ಬಸವಣ್ಣ**
**ತರಿಹೊಡದ ನೀರ ಕುಡಸಿನ ಬಿಸಾಕ ಕುಂತಿನ**

ಸಾಮಾನ್ಯವಾಗಿ ಬೀಸುವ ಸಂದರ್ಭದಲ್ಲಿ ಹೆಣ್ಣು ಮಗಳಿಗೆ, ಮನೆಗೆ ಜನರು ಬಂದಿರುವ ಸಂದರ್ಭದಲ್ಲಿ ಅವರಿರುವ ಸಂದರ್ಭದಲ್ಲಿ ಎಷ್ಟು ಜನರು ಎಂಬುದನ್ನು ಹೇಳಿ ಅಷ್ಟು ಅಡಿಗೆ ಮಾಡುವೆ ಎಂದು ಹೇಳುವ ಸೂಚನೆ ಈ ಕೆಳಗಿನ ಪದ್ಯದಲ್ಲಿ ಕಾಣಬಹುದು.

**ಬೀಸಲಾಕ ಕುಂತಿವಿರಿ ಬಿಗದಿಡಿರಿ ನಿಮ್ಮ ಕುದರಿ**
**ನಮಗೆಳತಿ ಏಸ ಮಂದ್ಯಾರ, ಏಸ ನಿ ಮಂದ್ಯಾರ**
**ನಮಗೇಳ ಸಂಗಯ್ಯ ಸ್ವಾಮಿ ನಿಡತಿವರಿ ನೋಡಿ**
**ಬಂದಡಿಗೆ**

**೫.೧.೨ ಕುಟ್ಟುವ ಹಾಡುಗಳು**

**ಓಂ ಎಂದು ಕುಟ್ಟುವೆ । ಸೋಂ ಎಂದು ಬೀಸುವೆ**
**ಓಂ ಸೋಂ ಎರಡು ತಿಳಿಯಬೇಕು ನಾರಿ**
**ಹಾಕವ್ವ ಹೇರಿ**
**ಓಂಮನೆಂದು ಅಕ್ಕ ತರಿಸಿ**
**ಸೂಕ್ಷ್ಮ ನೆಂದು ಅನ್ನ ಮಾಡಿ**
**ಗುರುವಿಗಿ ಎಡಿ ಮಾಡಿ ಹಾರವ್ವ ಹೇರಿ**

ಇನ್ನು ಈ ರೀತಿಯಾಗಿ ಬೀಸುವ ಸಂದರ್ಭದಲ್ಲಂತೂ ತನ್ನ ಗುರುವಿನ ದೈವದ ಸ್ಮರಣೆ ಮಾಡುತ್ತಾ ಕಾರ್ಯಮಾಡುವುದು ಅವಿಸ್ಮರಣೀಯ. ಹಬ್ಬ ಹರಿದಿನಗಳಂತೂ ಪ್ರತಿಯೊಂದಕ್ಕೂ ಅರ್ಥಪೂರ್ಣವಾದ ಹಾಡುಗಳನ್ನು ಹಾಡುತ್ತ ತನ್ನ ಬದುಕು ಸುಂದರವಾಗಿ ಹಾಗೂ ಸಂತೋಷವಾಗುತ್ತಾ ಸಾಗಿದ್ದು ಕಂಡುಬರುತ್ತದೆ.

### ೫.೧.೩ ಹೋಳಿ ಹುಣ್ಣಿಮೆಯಲ್ಲಿ ಹಾಡುವ ಪದಗಳು

**ಹೋಳಿ ಹುಣ್ಣಿಮೆ ಬತ್ತು ಹೋಳಿಗಿ ಮಾಡುದ ಬತ್ತು**
**ಬೊಳೆಮ್ಮೆ ತುಪ್ಪ ಕಾಶ್ಯಾಳ ಎಲೆ ಹುಡುಗಿ ಬಾಯಿ ಹಿಡಿದ**
**ಸುರವ್ಯಾಳ**

ಇನ್ನು ದೀಪಾವಳಿ ಹಬ್ಬದಲ್ಲಿ ಒಕ್ಕಲಿಗರ ಮಕ್ಕಳು ಆಡು, ಎಮ್ಮೆ, ಎತ್ತು ಇವುಗಳಿಗೆ ತೊಂದರೆ ಬರದಿರಲಿ ಎಂದು "ಆಡಿ-ಪಿಡಿ" ಬೆಳಗುವ ಸಂದರ್ಭ ಇದೆ. ಆವಾಗ ಹಾಡುವ ಹಾಡು ಈ ಕೆಳಗಿನಂತಿದೆ.

**ಆಡಿಪಿಡಿ ತಂದಿರಬೇಕ ಸಾರಬರ ಹಿಂಡಿರಬೇಕ**
**ಒಲಿಮ್ಯಾಗ ಇಟ್ಟಿರಬೇಕ, ಬೆಕ್ಕ ಬಂದ ಕುಡಿದಿರಬೇಕ**
**ಆಯ ಬಂದ ಬಡದಿರಬೇಕ, ಮುತ್ಯಾ ಬಂದ ಬಿಡಿಸಿರ**
**ಬೇಕ ಆಡಿಪಿಡಿ ಮಂತ್ರೇಷೆ**

ಇದು ಆಡಿನ ಬಗ್ಗೆ ಹಾಡುತ್ತಾರೆ.

ಮಳೆಯಾಗದ ಸಂದರ್ಭದಲ್ಲಿ ಗುರ್ಚಿ ಎಂದು ಆಕಳ ಸೆಗಣಿಯಿಂದ ದುಂಡಗೆ ಆಕಾರ ಮಾಡಿ ಕುಪ್ಪೆಯನ್ನು ಆ ಸೆಗಣಿಯಲ್ಲಿ ಕೂಡಿಸಿ ಅದನ್ನು ರೊಟ್ಟಿ ಬೇಯಿಸುವ ತವೆಯ ಮೇಲೆ ಇಟ್ಟುಕೊಂಡು ಮನೆಮನೆಗೆ ಹೋಗಿ ನೀರು ಹಾಕಿಸಿಕೊಳ್ಳುವ ಪದ್ಧತಿ ಈ ಸಂದರ್ಭದಲ್ಲಿ ತವೆಯನ್ನು ಹೊತ್ತ ಮಗು ಬರಿಮೈಯಿಂದ ಇರುತ್ತದೆ ಆವಾಗ ಹಾಡುವ ಹಾಡು,

**ಗುರ್ಚಿ ಗುರ್ಚಿ ಎಲ್ಲಾಡಿ ಬಂದಿ**
**ಹಳ್ಳಾ ಕೊಳ್ಳಾ ಹರದ್ಯಾಡಿ ಬಂದಿ**
**ಕಾರ ಮಳಿಯ ಕಪಾಟ ಮಳಿಯ**
**ಬಣ್ಣ ಕುಡತನ ಬಾ ಮಳಿಯ ಬಾ ಮಳಿಯ**
**ಸುಣ್ಣಾ ಕುಡತನ ಸುರಿಮಳೆಯ ಸುರಿಮಳಿಯ**

ಎಂದು ಹಾಡುತ್ತಾ ಮನೆ-ಮನೆಗೆ ತಿರುಗಾಡುವುದುಂಟು.

### ೫.೧.೪ ಸೋಬಾನೆ ಪದಗಳು

ಹೆಣ್ಣುಮಗಳು ಮೈನೆರೆದಾಗ ಪ್ರಬುದ್ಧ ಅವಸ್ಥೆಗೆ ಬಂದುದರ ಬಗ್ಗೆ ಅರಿವಿಗೆ ಬಂದಾಗ, ಒಮ್ಮೊಮ್ಮೆ ಮದುವೆಯಾಗಿದ್ದು ಮೈನೆರೆಯದಿದ್ದಾಗ ಸೋಬಾನೆ ಮಾಡುತ್ತಾರೆ. ಆವಾಗ ಕೂಡ ಈ ಹಾಡುಗಳನ್ನು ಹಾಡುತ್ತಾರೆ. ಕೆಲವೊಂದು ಸಂದರ್ಭಗಳಲ್ಲಿ ಬಾಲ್ಯ ವಿವಾಹವಾಗಿದ್ದರೆ ಮದುವೆ ನಂತರ ಮೈನೆರೆದರೆ ಸೋಬಾನೆ ಕಾರ್ಯ ನಡೆಯುತ್ತದೆ. ಆ ಸಂದರ್ಭದಲ್ಲಿ ಕೆಳಗಿನಂತೆ ಹಾಡುತ್ತಾರೆ.

**ಸೀರಿ ಉಡುಸಿರಿ ನನ್ನ ಶೀಲ ಮಲ್ಲಮ್ಮಗ**
**ಕುಬಸ ತೊಡಿಸಿರಿ ನನ್ನ ಕೂಸ ಮಲ್ಲಮ್ಮಗ**
**ಅರಿಷಿಣ ಹಚ್ಚಿರಿ ನನ್ನ ಸರಸ ಮಲ್ಲಮ್ಮಗ**
**ದಂಡಿ ಕಟ್ಟಿರಿ ನನ್ನ ದುಂಡ ಮಲ್ಲಮ್ಮಗ**
**ಹುಚ್ಚ ಭರಮರೆಡ್ಡಿ ಮಡದಿಗೆ ಸೊ ॥**

೫.೧.೫ ಲಾವಣಿ ಪದಗಳು

ಪರಗಣೆ ಜತ್ತಿ, ಉಮರಾಣಿ, ದೇಶಕಾ
ಅಳುವಂತ ಧಣಿ ಢಪ್ಪಳೆ ಸರಕಾರ
ಜತ್ತಿ ಸಂಸ್ಥಾನ ಪೈಕಿ ಸಣ್ಣಹಳ್ಳ ಸಿಂಧೂರ ॥ಪ॥

ಸಿಂಧೂರಾಗ ಲಕ್ಷ್ಮಣ ಹುಟ್ಟ್ಯಾನು ಬಂಟ ಅನುಸ್ಯಾನು
ಕೊಟ್ಟ ವಚನ ಹುಟ್ಟ ತಪ್ಪಲಿಲ್ಲ, ಹುಟ್ಟತಪ್ಪಲಿಲ್ಲ
ಘಟ ಹೋಗುವ ತನಕ ಹಿಡಿದ ಹಟ ಬಿಡಲಿಲ್ಲ ॥೧॥

ಒಬ್ಬ ಐನವರ ಕಾಲಾಗ ಬಿದ್ದಿತಮರ್ಮ
ಮಾಡಿದಿಪರಿತ ಒಂದಿನ ಲಕ್ಷಣನ ಮ್ಯಾಲ
ಐನವರ ತಳ್ಳಿ ಮಾಡ್ಯಾನಲ್ಲ ಐನರ ಇವರು
ಬಂದರ ರಿಪೋಟ ಕಳಿಸ್ಯಾರ ಇನ್ಸಪೆಕ್ಟರಗ

ಇನ್ಸ್‌ಪೆಕ್ಟರ್ ಸಿಂಧೂರಿಗೆ ಬಂದಾ ಲಕ್ಷ್ಮಣನ ಕರಿಯಾಕ ಕಳಿಸಿದ
ಬಂದನಿತ್ತ ಲಕ್ಷ್ಮಣ ಹೇಳಿದ್ದ ಬಾಳಹುಶ್ಯಾರದಿಂದ ಬಾ ಮುಂದ
ಲಕ್ಷ್ಮಣಗ ಇನ್ಸ್‌ಪೆಕ್ಟರಗ ವಾದ ಆದಿತ್ತಲ್ಲ
ಇನ್ಸ್‌ಪೆಕ್ಟರ್ ಲಕ್ಷ್ಮಣನ ಮ್ಯಾಲ ಏರಿ ಹೋದನಲ್ಲ
ಲಕ್ಷ್ಮಣ ಚಾವಡಿ ಜಿಗದ ಓಡಿ ಹೋದನಲ್ಲ
ಕರಕರ ತಿಂದೋ ಹಲ್ಲ

ಮರುದಿನ ಲಕ್ಷ್ಮಣನ ನೆದರ ಇಟ್ಟನಲ್ಲ
ಲಕ್ಷ್ಮಣ ಕಲ್ಲೊಳ್ಳಿ ಗುಡ್ಡ ಸೇರ್ರ್ಯನಲ್ಲ
ಕಟಕ ಇನ್ಸ್‌ಪೆಕ್ಟರ ಅಂಪಗ ವಾದ ಆದಿತಲ್ಲ
ನಾಳಿ ಹುಶ್ಯಾರದಿಂದ ಇರೋ ಗುಡ್ಡದೊಳಗ

ಸಾಖ್ಯಾ ಗೋಪಾಲ್ಯಾ, ನರಸ್ಯಾ, ಮೂವರು ಕೂಡಿ ಮಾತಡ್ಯಾರೋ
ತಮ್ಮ ಮನಿಯಾಗ, ನಾಳೆ ತುರಗ ಮುರದ ತರುನು
ಮಾಮಗೆ ಇಷ್ಟ ಹೇಳಿ ಹೊಂಟರಲ್ಲ, ಲಕ್ಷ್ಮಣನ
ಮ್ಯಾಲ ಅವರ ಜೀವ

ಮರುದಿನ ಜತ್ತಿಗೆ ಹೋದರಲ್ಲ, ತುರಗ ಮುರದಾರಲ್ಲ
ಕಟಕಪೇಜಾರನ ಜಗ್ಗಿ ತಗದ ಕಡದಾರಲ್ಲ
ಬೆಳಗಾಗುದರೊಳಗ ಜತ್ತಿ ಅಗಸಿಗಿ ಚಂಡ
ಕುಟ್ಯಾರಲ್ಲ.

ಅಲ್ಲಿಂದ ಮುಂದ ನಡದಾರಲ್ಲ, ಅರಬಾವಿ ಮಠಸೇರ್‍ಯಾರಲ್ಲ
ಅಜ್ಜನವರ ಆಶಿರ್ವಾದ ಪಡೆದವರಲ್ಲ ಗುಣದಾಳ, ಗದ್ಯಾಳ
ಗೊಕೆ ಮೇಲಿಂದ ಹಾದ ಗಲಗಲಿಗೆ ಹೋಗ್ಯಾರಲ್ಲ, ಗುಜ್ಜರ
ಮನಿ ಒಡದ ಅನ್ನ ಕೊಟ್ಟವರಿಗಿ ದಾನ ಮಾಡ್ಯಾರಲ್ಲ

ನಿಡೋಣಿ ದುಂಡ್ಯಾಬಂದ ಕುಡ್ಯಾನಲ್ಲ ಒಳ್ಳೆಜೀವನ ಮಿತ್ರ
ಕಲ್ಲೊಳ್ಳಿ ಗುಡ್ಡದಾಗ ತಿರಗ್ಯಾರಲ್ಲ, ಜಮಖಂಡ್ಯಾಗ ಅಡ್ಯಾರಲ್ಲಿ
ಹಲ್ಲಿಗಿ ಬಂಗಾರ ಬಿಡಿಸಿಕೊಂಡಾರಲ್ಲ, ಲಕ್ಷ್ಮಣನ ಹಲ್ಲ ಮುರಿತ

ಮನಸಿಗಿ ಸಂಶಯ ತಂದರಲ್ಲ
ಗೌವರ್ನರ ನೆದರ ಇಟ್ಟಾನಲ್ಲ, ಅಲ್ಲಿಂದ ಜಾಗ ಬಿಟ್ಟಾನಲ್ಲ
ಮರುದಿನ ಬಂದ ಮುತ್ತಿಗೆ ಹಾಕ್ಯಾರಲ್ಲ, ಗುಂಡ ಹಾರಿಸ್ಯಾರಲ್ಲ
ಸಪ್ಪಳಕ ಎದ್ದ ನಾಲ್ಕ ಆರಡಿ ಬಾವಿ ಜಿಗದ ಓಡಿ
ಹೋದರಲ್ಲ

ಹಿಂಬರಕಿ ಓಡುವಾಗ ಕವಣಿಕಲ್ಲ ಒಗದಕುದರಿಕಾಲ
ಮುರದರಲ್ಲ, ಗವರ್ನರ ತಿರುಗಿ ಹೋದನಲ್ಲ, ಗವರ್ನರ
ಪಿತೂರಿ ನಡೆಸ್ಯಾನಲ್ಲ, ತೆಗ್ಗಿ ನಾಯ್ಕಗ ಗುಂಡಿಗೆ ಬಿದ್ದನಲ್ಲ
ಪಿತೂರಿ ನಡೆಸ್ಯರಲ್ಲ

ಕಪ್ಪರ ಪಡಿಯವ್ವನ ಗುಡಿಯಲ್ಲಿ
ಜಾತ್ರೆ ನೇಮಿಷ್ಯರಲ್ಲ, ಊಟಕ ಹೇಳ್ಯಾನಲ್ಲ
ಸೋಮಲ್ಯಾ ಲಾಟಿನ ಇಟ್ಟ ತೋರ್ಯಾನಲ್ಲ
ಲಕ್ಷ್ಮಣಗ ಎದಿ ಒಳಗ ಗುಂಡ ಬಡದಾರಲ್ಲ

ಸಾಖ್ಯಾಗೋ ಪಾಲ್ಯಾನರಸ್ಯಾ ಓಡಿಹೋದರಲ್ಲ ಬೇಕಂತ ಹೋಗಿ
ಸಿಕ್ಕರಲ್ಲಾ, ಅವರ್ನ ಓದ ಒಗದಾರೊ ಜಮಖಂಡಿ ಝುಲ

ಸಿಂಧೂರ ಲಕ್ಷ್ಮಣನ ಈ ಗೀತೆ ವೀರ ಲಾವಣಿ ಆಗಿದ್ದು ಈತ ಮಹಾರಾಷ್ಟ್ರದ ಸಿಂಧೂರಿನವನು. ಆದರೆ ಇಂಡೀ ಗಡಿಭಾಗದ ಈ ಹಳ್ಳಿಯ ಜನಕ್ಕೆ ಆತನ ಶೂರತನ ಬಹಳಷ್ಟು ಮಾರ್ಗದರ್ಶಕರವೆಂದೇ ಹೇಳಬೇಕು ಅಲ್ಲದೆ ಆದರ್ಶವೆಂದೂ ತಿಳಿಯಬೇಕು.

ಕರ್ನಾಟಕದಲ್ಲಿ ಗಮನ ಹರಿಸಿದಾಗ ಲಾವಣಿಯು ವಿಶಿಷ್ಟ ರೂಪ ತಾಳಿರುವುದು ಕಂಡುಬರುತ್ತದೆ. ಹೇಗೆಂದರೆ ಛಂದಸ್ಸು ಹಾಡಿನ ರೀತಿ, ಹಿಮ್ಮೇಳ ಮೊದಲಾದವುಗಳಿಂದ ಸಮರ್ಥವಾದ ಲೋಕರಂಜನೆಯ ಸತ್ವವನ್ನು ಒಳಗೊಂಡಿದೆ. ಲಾವಣಿಯ ರಚನೆಯಲ್ಲಿ ಪಲ್ಲವಿ, ಕಂಡುಬರುವುದು ಅಷ್ಟೇ ಅಲ್ಲ ಲಾವಣಿಗಳನ್ನು ಹಾಡುವಾಗ ಹಿಗ್ಗಿಸುವ ಮತ್ತು ಕುಗ್ಗಿಸುವ ಸಂಪ್ರದಾಯಗಳುಂಟು. ಡಾ.ಎಂ.ಎಸ್. ಸುಂಕಾಪುರ ಮತ್ತು ಡಾ. ಜೆಟಗೇರಿ ಕೃಷ್ಣಶರ್ಮರು ಹಾಡುಗಳನ್ನು ಐದು ವಿಧಗಳಲ್ಲಿ ವಿಂಗಡಿಸಿದ್ದು ಈ ಮೇಲಿನ ಸಿಂಧೂರ ಲಕ್ಷ್ಮಣನ ಹಾಡು ವೀರ ಲಾವಣಿಯಲ್ಲಿ ಬರುತ್ತದೆ.

**೫.೧.೬ ಮದುವೆಯಲ್ಲಿ ಹಾಡುವ ಪದಗಳು**

ಮದುಮಕ್ಕಳಿಗೆ ಎಣ್ಣೆ ಹಚ್ಚುವ ಸಂದರ್ಭದಲ್ಲಿ ಈ ರೀತಿಯಾಗಿ ಹಾಡನ್ನು ಹಾಡುತ್ತಾರೆ.

ನೀ ಎಣ್ಣಿ ನಿ ಎಣ್ಣಿ ಯಾವ ದೇವರೆಣ್ಣಿ
ತಂದಿ ಬಸವಣ್ಣ ನೇಯ ಎಣ್ಣೆ
ತಂದಿ ನಿ ಬಸವಣ್ಣನ ನಿ ಎಣ್ಣೆ ಏರ್ಯಾವ
ಐವತ್ತೋಂದೈವ ಗಳಿಗ್ಯಾಗ

ಇನ್ನು ಎಣ್ಣೆ ಇಳಿಸುವ ಸಂದರ್ಭದಲ್ಲಿ

ನೀ ಎಣ್ಣೆ ನಿ ಎಣ್ಣೆ ಯಾವ ದೇವರೆಣ್ಣೆ
ತಂದಿ ಗಿರಿವಾಸ್ಯಾಗ ನೇಯಾ ಎಣ್ಣೆ
ತಂದಿ ನಿ ಎಣ್ಣೆ ಇಳಿದಾವ
ನಾಲವತ್ತೊಂದನಕ ಗಳಿಗ್ಯಾಗ

ಹೀಗೆ ಮದುವೆಯಲ್ಲಿ ಎಣ್ಣೆ ಏರಿಸುವ ಸಂದರ್ಭದಲ್ಲಿ ಐವತ್ತೊಂದು ದೈವಗಳಿಗೆ ಹಾಗೂ ಇಳಿಸುವ ಸಂದರ್ಭದಲ್ಲಿ ನಾವತ್ತೊಂದನಾಕ ಗಳಿಗೆಯ ಹಾಡು ಹೇಳುತ್ತಾರೆ.

ಹೆಣ್ಣು ಕರೆದುಕೊಂಡು ಹೋಗುವಾಗ
ತಲೆಯ ಬಾಚ್ಚಾಗ ತಾಯಮ್ಮಗ ನಗುಬಂತು
ತಲೆಯ ಬಾಚಣ್ಣ ಕರಕೊಂಡು
ತಲೆಯ ಬಾಚೆಣ್ಣ ಕರಕೊಂಡು ಹೋಗ್ವಾಗ
ತಾಯಮ್ಮಗೆ ದುಃಖ ಎರಗೀತು ॥

ಕಪ್ಪು ಇಕ್ವಾಗ ಅವರಪ್ಪಾಜಿಗ ನಗುಬಂತು
ಕಪ್ಪಿಕ್ಕಿ ಹೆಣ್ಣು ಕರಕೊಂಡು
ಕಪ್ಪಿಕ್ಕಿ ಹೆಣ್ಣು ಕರಕೊಂಡು ಹೋಗ್ವಾಗ
ಅವರಪ್ಪಾಜಿಗ ದುಃಖ ಎರಗೀತು ॥

ಬಣ್ಣ ಉಡುವಾಗ ಅವರಣ್ಣ ಮಗ ನಗು ಬಂತು
ಬಣ್ಣ ಉಡ್ಸಿ ಹೆಣ್ಣ ಕರಕೊಂಡು
ಬಣ್ಣ ಉಡ್ಸಿ ಹೆಣ್ಣ ಕರಕೊಂಡು ಹೋಗ್ವಾಗ
ಅವರಣ್ಣಯ್ಯಗೆ ದುಃಖ ಎರಗೀತು ।

ಮುತ್ತಿನ ಮಣಿಯ ಎತ್ತಿ ಬೀದಿಗ ಬಂದೊ
ಮುತ್ತೀನ ಮಣಿಯ ಅಳಬೇಡ
ಮುತ್ತಿನ ಮಣಿಯೇ ಅಳಬೇಡ ನಿನ್ನ ಒಡೆಯೋ
ನಿಸ್ತ್ರದೈವಾರು ಕಳಿಸೀವ್ರೋ ॥

ಧಾರೆ ಪದಗಳು

ಧಾರೆ ಹೊತ್ತೀಗ ಯಾರ್ಯಾರು ಬರಬೇಕು
ಧಾರಾದ ಕೊರಳ ಹಿರಿಯಣ್ಣ
ಧಾರಾದ ಕೊರಳ ಹಿರಿಯಣ್ಣ ಸೋದರಮಾವ
ಧಾರಿಯ ಹೊತ್ತಿಗೆ ನೀಬೇಕು

ಹಾಲಿನ ಗಿಂಡಿ ತಾಯಮ್ಮ ಹಿಡಕಂಡು
ಹಾಲ ಎರದಾಳು ಕೈತುಂಬ
ಹಾಲ ಎರದಾಳು ಕೈತುಂಬ ಅವರ ತಾಯಮ್ಮ
ಇಂದು ಕಂದಮ್ಮ ರುಣ ಮೂಲ
ತುಪ್ಪಾದ ಗಿಂಡಿ ಅವರಪ್ಪಾಜಿ ಹಿಡಕಂಡು

ತುಪ್ಪಾ ಎರದಾರೋ ಕೈತುಂಬ
ತುಪ್ಪಾ ಎರದಾರೋ ಕೈ ತುಂಬ ಅವರಪ್ಪಾಜಿ
ಇಂದು ಕಂದಮ ರುಣಮೂಲ

ಎಣ್ಣಾಯ ಗಿಂಡೀಯ ಅವರಣ್ಣಾಯ ಹಿಡಕೊಂಡ
ಎಣ್ಣೆ ಎರೆದಾರೋ ಕೈತುಂಬ
ಎಣ್ಣೆ ಎರೆದಾರೋ ಕೈತುಂಬ ಅವರಣ್ಣಯ್ಯ
ಇಂದು ತಂಗ ಮಗ ರುಣ ಮೂಲ

ಒಂದು ತಿಂಗಳ ಮಗು ಎತ್ತು ಮುದ್ದಾಡಿ ಸಾಕಿ
ಗಂಧ ಕರಂಗಡಿಯ ವಣಬಜ ಎದೆಹಾಲು
ಗಂಧ ಕರಂಗಡಿಯ ಎನಬಜ ಎದೆಹಾಲು
ಇಂದು ಕಂದಮಗ ರುಣ ಮೂಲ

ಚಪ್ಪರದ ಹಟ್ಟೀಗ ಹೋಗಿ ಬೀಸೋಗಾಳಿ
ಮತ್ತೊಂದು ಘಳಿಗೆ ತಡಮಾಡು
ಮತ್ತೊಂದು ಘಳಿಗೆ ತಡಮಾಡು
ಮತ್ತೊಂಗು ಘಳಿಗೆ ತಡಮಾಡು ಅವರ ತಾಯಮ್ಮ
ತಾಯಿಯ ಬಳಗ ಶತಕೋಟಿ ॥

ಆನೆಯ ಮೇಲೆ ಭಾರೀ ಜಂಗಮ ಬಂದ
ಇಂದ್ರನ ನಾಡಿಂದ ಶಿವಬಂದ
ಇಂದ್ರನ ನಾಡಿಂದ ಶಿವಬಂದು ಏನೆಂದ
ಸಣ್ಣೆಣ್ಣಿಗ ಧಾರೆ ಎರಿರೆಯಂದ ॥

ಸ್ತ್ರೀ ಗರ್ಭಿಣಿಯಾದ ಸಂದರ್ಭದಲ್ಲಿ ಅವಳನ್ನು ಕುರಿತು ಹಾಡುವ ಹಾಡಂತು ಬಹು ಮಾರ್ಮಿಕವಾಗಿದೆ.

ಇಂದ್ರ ಜಾನಕಿ ನಿನಗ ಚಂದ್ರ ಮೂಡಿದನೆನ
ನಾರಿ ಜಾನಕಿ ನಿನಗ ಸೂರ್ಯ ಮೂಡಿದನೆನ
ಒಂದೊಂದು ತಿಂಗಳಗಿ ಒಂದೆನ ಬಗಸ್ಯಾಳ
ಒಂದೇಲಿ ಮರದ ಎಳಿಹುಣಚೇಳವ್ವ ತಾಯಿ ॥ ೧ ॥
ಎರಡಂಬು ತಿಂಗಳಿಗೆ ಎರಡೆನ ಬಗಸ್ಯಾಳ
ಎರಡೆಲಿ ಬರದ ಎಳಿಹುಣಚೆಳವ್ವ ತಾಯಿ ॥ ೨॥
ಮೂರೆಂಬು ತಿಂಗಳಿಗೆ ಮೂರನ ಬಗಸ್ಯಾಳ
ಮೂಡಲದಾಗ ಹರಿವ ತಿಳಿನಿರ ಏಳವ್ವ ತಾಯಿ ॥ ೩ ॥
ನಾಕಂಬು ತಿಂಗಳಿಗೆ ಬಗಸ್ಯಾಳ
ಕಾಕಮಿ ಹಣ್ಣ ಕೈತುಂಬೆಳವ್ವ ತಾಯಿ ॥ ೪ ॥
ಐದಂಬು ತಿಂಗಳಿಗೆ ಐದನೆ ಬಗಸ್ಯಾಳ
ಕೊಯ್ದ ಮಲ್ಲಿಗಿ ನೆನೆದಂಡೆಳವ್ವ ತಾಯಿ ॥ ೫ ॥
ಆರಂಬು ತಿಂಗಳಿಗೆ ಆರನ ಬಗಸ್ಯಾಳ

ಹಾರಕದ ಬಾನ ಕೆನಿ ಮುಸರೆಳವ್ವ ತಾಯಿ ॥ ೬ ॥
ಏಳೊಂಬು ತಿಂಗಳಿಗೆ ಏಳೆನ ಬಗಸ್ಯಾಳ
ಹೇಳಿ ಕಳವ್ಯಾಳ ತವರಿಗೆಳವ್ವ ತಾಯಿ ॥ ೭ ॥

ಎಂಟೆಂಬು ತಿಂಗಳಿಗೆ ಎಂಟನೆ ಬಗಸ್ಯಾಳ
ಕಂಟಲ ಎತ್ತಿ ಕರಿ ಬರಲೇಳವ್ವ ತಾಯಿ ॥ ೮ ॥
ಒಂಬತ್ತ ತಿಂಗಳಿಗಿ ಒಂಬತ್ತನ ಬಗಸ್ಯಾಳ
ಸಂದಿನ ಸಂದೆಲ್ಲ ಕಿರಿಬ್ಯಾನೆಳವ್ವ ತಾಯಿ ॥ ೯ ॥
ಹತ್ತಂಬು ತಿಂಗಳಿಗಿ ಬಯಸ್ಯಾಳ
ಮುತ್ತನಂತ ಮಗನ ಬಗಲಾಗೆಳವ್ವ ತಾಯಿ ॥ ೧೦ ॥

ಈ ರೀತಿಯಾಗಿ ಗರ್ಭಿಣಿ ಸ್ತ್ರೀಯಳು ಗರ್ಭಧರಿಸಿದಂದಿನಿಂದ ಮಗುವನ್ನು ಹೆರುವವರೆಗೆ ತನ್ನ ಬಯಕೆಗಳನ್ನೆಲ್ಲ ತಾಯಿಯ ಮುಂದೆ ವರ್ಣಿಸುವ ರೀತಿಯನ್ನು ಮೇಲಿನ ಹಾಡಿನಲ್ಲಿ ಬಹು ಸುಂದರವಾಗಿ ಕಾಣಬಹುದಾಗಿದೆ.

### ೫.೧.೭ ಜೋಗುಳ ಪದಗಳು

ಈ ಹಾಡುಗಳು ಸಾಮಾನ್ಯವಾಗಿ ಗಂಡುಮಗು ಹುಟ್ಟಿದ ಹನ್ನೆರಡನೇ ದಿನ ಹೆಣ್ಣು ಹುಟ್ಟಿದ ಹದಿಮೂರನೇ ದಿನ ಹೀಗೆ ನಾಮಕರಣದ ಸಂದರ್ಭದಲ್ಲಿ ಹಾಡುತ್ತಾರೆ.

ತೂಗಿರಿ ರಂಗನ ತೂಗಿರಿ ಕೃಷ್ಣನ
ತೂಗಿರಿ ಅಚ್ಯುತನಂತನ
ನಾಗಲೋಕದೊಳಗೆ ನಾರಾಯಣ ಮಲಗ್ಯಾರ
ನಾಗಗನ್ಯಕ್ಕಾರು ತೂಗಿರೆ । ನಾಗಗನ್ಯಕಾರು ನಲರಾವ
ಪಾಡಿರಿ ಸ್ವಾಮಿಯ ತೊಟ್ಟಿಲ ತೂಗಿರೆ
ಇಂದ್ರ ಲೋಕದೊಳಗ ಮಂದಾರ ಮಲಗ್ಯಾರ
ಬಂದೊಮ್ಮೆ ತೊಟ್ಟಿಲ ತೂಗಿರೆ । ಬಂದೊಮ್ಮೆ ತೊಟ್ಟಿಲು
ಚಂದದಲೆ ನೀವು ಚಂದಿರನ ತೊಟ್ಟಿಲು
ತೂಗಿರಿ
ಶಾಶಲ ಮಡಿಮ್ಯಾಲ ಸೂಶಿಲ ಹೊಯ್ಲಂಗ
ಲೇಸಗಾರನ್ನ ಸರ್ವೆದ್ದು
ಬರುವಾಗ ಗಿರಿಜನ ತೊಟ್ಟಿಲ ತೂಗಿರೆ
ಹುಲಯಯ ಉಗುರದ ಮೇಲೆ ಕೊರಳ ಪಾದರಲ್ಲಿ
ತಿರುಳ ತೊಟ್ಟಿಲು ತೂಗಿರೆ । ತಿರುಳನ ತೊಟ್ಟಿಲ
ಪುರಂದರ ವಿಠ್ಠಲನ । ಸ್ವಾಮಿಯ ತೊಟ್ಟಿಲ ತೂಗಿರೆ

ತಾಯಂದಿರು ಮಕ್ಕಳನ್ನು ಆಡಿಸುವ ಸಂದರ್ಭದಲ್ಲಿ ಹಾಡುವ ಅಕ್ಕರೆಯ ಹಾಡುಗಳು

ಆಡಿ ಬಾ ನನ ಕಂದ ಅಂಗಾಲ ತೊಳದೆನ
ತೆಂಗಿನ ಕಾಯಿ ತಿಳಿನೀರ ತಕ್ಕೊಂಡು । ನಿನ
ಬಂಗಾರ ಮೊರೆ ತೊಳೆದೇನು

**ಹಾಲ ಕುಡದ ಬೆಕ್ಕ ಬೂದ್ಯಾಗ ಮಲಗೈತಿ**
**ಬೆಳ್ಳಂತ ಕಣ್ಣ ತಗದೈತಿ**
**ಬೆಳ್ಳಂತ ಕಣ್ಣ ತಗದೈತಿ ನನ್ನ ಮಗನ**
**ಆಡುವ ಬಾ ಎಂದು ಕರದೈತಿ**
**ನನ್ನ ಮಗ ಎಂದರ ಸೂರ್ಯ ಚಂದರ**
**ಅಂದದೊಳಗ ಅಂದ ಚೆಂದ ।**

ಹೀಗೆ ಹಲವಾರು ರೀತಿಯಲ್ಲಿ ಹಾಡುತ್ತಾ ಹೇಳುತ್ತಾಳೆ

**ಮುರುಕು ತೊಟ್ಟಿಲಗೊಂದು ಹರಕು ಚಾಪೆಯ ಹಾಸಿ**
**ಅರಚು ಪಾಪನ ಮಲಗಿಸಿ । ಅವರಕ್ಕ ಕುಲಕೇತ**
**ಹಾಡಿ ಹಿಗ್ಗ್ಯಾಳ**

ಕೌಟುಂಬಿಕ ಜೀವನದಲ್ಲಿ ನಿತ್ಯ ಹಲವಾರು ಸಮಸ್ಯೆಗಳು ಬರುವುದು ಸ್ವಾಭಾವಿಕ. ಅದನ್ನು ಗರತಿ ಸಹಿಸಿಕೊಂಡು ಬದುಕುವುದು ಅವಳ ತಾಳ್ಮೆಯ ಗುಣದ ಪ್ರತೀಕ. ಹೀಗೆ ಮಕ್ಕಳಾಗಲಿಲ್ಲವೆಂದೋ, ಹಿರಿಯ ಹೆಂಡತಿ ಚೆಲುವೆಯಲ್ಲವೆಂದೋ ಆತ ಇನ್ನೊಬ್ಬಳನ್ನು ಮದುವೆಯಾಗಲು ಹೊರಟಾಗ ಆಕೆ ಅವನಲ್ಲಿ ಹೇಳುವಂತಹ ಮಾತು ಹೊಟ್ಟೆಯೊಳಗಿನ ಹರಳು ಕರಗಿಸುವಂತಹುದು. ಅವಳ ಹೃದಯದ ಮಾತು ಅವನ ಹೃದಯಕ್ಕೆ ಅರ್ಥವಾಗಬೇಕು.

**ರಾಯ ಬರತಾರಂತ ರಾತ್ರೀಲಿ ನೀರಿಟ್ಟ**
**ರನ್ನ ಬಟ್ಟಲಕ ಮಣಿಹಾಕಿ । ಕೇಳೇನ**
**ಸಣ್ಣವಳ ಮ್ಯಾಗ ಸವತ್ಯಾಕ**
**ಅಂಗೀಯ ಮ್ಯಾಲಂಗಿ ಛಂದೇನೋ ನನರಾಯ**
**ರಂಬಿಮ್ಯಾಲ ರಂಬಿ ಪ್ರತಿರಂಬಿ । ಬಂದರ**
**ಛಂದೇನೊ ರಾಯಾ ಮನಿಯಾಗ**

ನಾನಿನ್ನು ಚಿಕ್ಕವಳು ಮಕ್ಕಳಾಗಲಿಲ್ಲವೇ? ಕಾಲ ಮೀರಿಲ್ಲ. ಬೇರೊಬ್ಬ ಸ್ತ್ರೀಯ ತರುವ ಅವಶ್ಯಕತೆ ಏನಿದೆ? ಎಂದು ಕೇಳುತ್ತಾ ಇನ್ನೊಬ್ಬಳನ್ನು ಬಯಸಿದರೂ ಸಹನೆಯಿಂದಿರುವುದು ಕಂಡುಬರುತ್ತದೆ.

ಇನ್ನೊಂದು ಪದ್ಯದಲ್ಲಿ ಗಂಡನನ್ನು ಹೊಗಳುವ ಗರತಿಯ ಮಾತುಗಳನ್ನು ಕಂಡಾಗ ಗಂಡನಿಂದ ಕೊಟ್ಟ ಸ್ಥಾನಮಾನದ ಅರಿವು ಉಂಟಾಗುತ್ತದೆ.

**ಎಲ್ಲೆಲ್ಲಿ ನೋಡಿದರ ನಲ್ಲನಂತವರಿಲ್ಲ**
**ಹಲ್ಲು ನೋಡಿದರ ಹವಳದ ನಲ್ಲನ**
**ಸೊಲ್ಲು ಕೇಳಿದರ ಸಮಾದಾನ**
**ಸರದಾಗ ಇರುವ ಗುಳಿದಾಳ ನಿಮ್ಮಿಂದ**
**ಸರುವ ಬಳಗೆಲ್ಲ ಮರತೇನ**

ಎಂದು ನುಡಿಯುವ ಪ್ರೀತಿಗೆ ಆಸರೆಯಾಗಿದ್ದು ಸಹಜ. ತನ್ನ ಬಂದು ಬಳಗವನ್ನೆಲ್ಲ ಮರೆತು ನೆಮ್ಮದಿಯ ಬಾಳ್ವೆ ನಡೆಸುತ್ತಾಳೆ. ಆಕೆ ಪ್ರೇಮದ ಖಣಿ. ಕೂಲಿ ಮಾಡಿದರೂ ಕುಂಬಳಿ ಮಾಡಿದರೂ ಗರತಿಗೆ ಆಕೆಯ ಪತಿಯು ಸರದಾರನೇ, ಅರಸನೇ, ಮಾರಾಯರೇ. ಆತನು ಹಾಕಿದ ಕೊರಳಿನ ಸರದಲ್ಲಿ

ಇರುವ ಬಳಗವನ್ನು ಮರೆಯುವಳು. ಅರಸರ ದಯದಿಂದ ದೊರಕದಂತಹ ಅರಿಶಿಣ, ಕುಂಕುಮ ಇವೇ ಆಕೆಯ ಸಕಲ ಐಶ್ವರ್ಯ ಎಲ್ಲಕ್ಕೂ ಹಾಡುಕಟ್ಟಿ ಗಂಡನ ಸ್ಥಾನಕ್ಕೆ ಬೆಲೆ ತಂದಿದ್ದಾರೆ.

ಇನ್ನೊಂದು ಪದ್ಯದಲ್ಲಿ ತವರುಮನೆ ಹಾಗೂ ಸಹೋದರರು, ತವರುಮನೆಯ ಆಶ್ರಯ ಇವನ್ನು ಕುರಿತು ಹೊಗಳುವ ರೀತಿ ಈ ಕೆಳಗಿನಂತಿದೆ.

**ಹೆಣ್ಣೀನ ಜನುಮಾಕ ಅಣ್ಣತಮ್ಮರು ಬೇಕು**
**ಬೆನ್ನ ಕಟ್ಟುವರು ಸಭೆಯೊಳಗ । ಸಾವಿರ**
**ಹೊನ್ನ ಕಟ್ಟುವರು ಉಡಿಯೊಳಗೆ**

ಈ ಹಾಡು ಹೆಣ್ಣಿಗೆ ಬೇಕಾದಂತಹ ಸಹಕಾರ, ಸಂಪತ್ತು ಎಲ್ಲವನ್ನೂ ಸಹೋದರರು ಇಂದಿಗೂ ಎಂದೆಂದಿಗೂ ನೀಡುವುದು ಸಹಜವಾದುದಾಗಿದೆ. ಅವಳಿಗೆ ಬೇರೆಯವರಿಂದ ಅನ್ಯಾಯವಾದಾಗ ಸಹೋದರರು ಬೆನ್ನೆಲುಬಾಗಿ ನಿಂತು ಹೋರಾಡುತ್ತಾರೆ. ಏಕೆಂದರೆ ಅದು ಕರುಳಬಳ್ಳಿಯ ಸಂಬಂಧ. ಅವಳ ಏಳಿಗೆಗೆ ತಮ್ಮ ಸಂಪತ್ತನ್ನು ಧಾರೆ ಎರೆಯುತ್ತಾರೆ. ಆದರೆ ವಿಧಿ ವಿಲಾಸ ಅರಿಯುವವರಾರು? ಅದೆಷ್ಟೋ ಹೆಣ್ಣು ಮಕ್ಕಳಿಗೆ ತವರಿಂದ ಸುಳವಿಲ್ಲ. ಕೆಲವು ಕಾಲ ಅನಿವಾರ್ಯದ ಸಂದಿಗ್ಧ ಪರಿಸ್ಥಿತಿಯಲ್ಲಿ ತವರಿನಲ್ಲಿ ಉಳಿದುಬಿಟ್ಟರೆ "ಗಂಜಿ ಕುಡಿದಾದರೂ ಗಂಡನ ಮನೆ ಲೇಸು" ಎಂಬ ಸ್ಥಿತಿ ಒದಗುತ್ತದೆ. ಇವು ಒಂದಲ್ಲ ಒಂದು ಹೆಣ್ಣಿಗೆ ಅವರ ಬದುಕಿನಲ್ಲಿ ನಡೆದಿರುವಂತವುಗಳೇ. ಹೆಣ್ಣಿಗೆ ಗಂಡನೇ ಸರ್ವಸ್ವ, ಅವನೇ ಅವಳ ಬಾಳಿನ ಆಧಾರ. "ಕೊಟ್ಟ ಹೆಣ್ಣು ಕುಲದಿಂದ ಹೊರಗೆ" ಎಂಬ ಸಮಾಜದ ನೀತಿಗನುಗುಣವಾಗಿ ಅವನನ್ನೇ ಅಶ್ರಯಿಸಬೇಕು.

**೫.೨ ಕಥೆಗಳು**

ಜನಪದ ಕಥೆಗಳು ಮೂಲತಃ ವೈಯಕ್ತಿಕ ಹಾಗೂ ಸಾಮಾಜಿಕ ಅವಶ್ಯಕತೆಯ ಫಲಗಳು. ಮುಖ್ಯವಾಗಿ ಪುರಾತನ ಸಂಸ್ಕೃತಿ ಹಾಗೂ ಪರಂಪರೆಯ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತವೆ. ಹೊಸ ಸಂಸ್ಕೃತಿಯ ನಿರ್ಮಾಣಕ್ಕೆ ಯುಕ್ತ ಹಿನ್ನೆಲೆಯನ್ನು ಒದಗಿಸುತ್ತವೆ. ಕಥೆಗಳನ್ನು ಹೇಳುವ ಮತ್ತು ಕೇಳುವ ಮಾನವ ಪ್ರವೃತ್ತಿಯು ಮಾನವ ಸಮಾಜದಷ್ಟೇ ಪುರಾತನವಾದದ್ದು. ನಿತ್ಯ ದುಡಿಮೆಯ ಶ್ರಮವನ್ನು ಮರೆಯಲು ಬಿಡುವಿನ ವೇಳೆಯನ್ನು ನಿರಾಳವಾಗಿ ಕಳೆಯಲು ಏಕತಾನದ ಬದುಕಿಗೆ ರಂಜನೆಯನ್ನು ದೊರಕಿಸಿಕೊಳ್ಳಲು ಕಥೆಗಳು ಬೆಳೆದು ಬಂದವು. ಕಥೆಯನ್ನು ಹೇಳುವ ಕಥೆಗಾರನು ಕೇಳುಗರ ಕುತೂಹಲವನ್ನು ಕೆರಳಿಸಿಕೊಂಡು ಹೇಳುತ್ತಾ ಹೋಗಬೇಕಾಗುತ್ತದೆ. ಇಂತಹ ಕಥೆಗಳನ್ನು ಹೇಳುವವರು ಇಂತಹವರೇ ಎಂದು, ಕೇಳುವವರು ಇಂತಹವರೇ ಎಂದು ಹೇಳಲಿಕ್ಕೆ ಬಾರದು, ಕಥೆಗಳನ್ನು ಏಕಕಾಲಕ್ಕೆ ಮಹಿಳೆಯರು, ಪುರುಷರು ಹೇಳಬಹುದು, ಕೇಳಬಹುದು.

ಕಥೆಗಳು ಎಲ್ಲಾ ಕಾಲಗಳಲ್ಲಿಯೂ ಜನರ ಬಾಯಿಂದ ಬಾಯಿಗೆ ಉಳಿದುಕೊಂಡು ಬಂದಿದೆ. ಇಂತಹ ಕಥೆಗಳನ್ನು ಕೇಳಿಯಾದ ಮೇಲೆ ಅದನ್ನು ಹೇಳುವ ಸಮಯ ಬಂದಾಗ ಅದನ್ನು ಹೇಗೆ ನೆನಪಿಟ್ಟುಕೊಳ್ಳಲಾಗಿರುತ್ತದೆಯೋ ಹಾಗೆಯೇ ಪುನರುಚ್ಚರಿಸಬಹುದು. ಇಲ್ಲವೇ ಕಥೆಯನ್ನು ಹೇಳುವವ

ಚಾಣಾಕ್ಷನಾಗಿದ್ದರೆ ಕಥೆಯ ಪಾತ್ರಗಳನ್ನು ಸಾಮಾಜಿಕರಿಗೆ ಹೋಲಿಸಿ ಹೇಳುವುದುಂಟು. ಆದರೆ ಇಲ್ಲಿ ಕಥೆಗಾರನ ನೆನಪಿನ ಶಕ್ತಿ, ಕಲ್ಪನಾ ಸಾಮರ್ಥ್ಯ ಅನುಭವಗಳಿಗನುಗುಣವಾಗಿ ಬೆಳೆಯುತ್ತಾ ಸಾಗುತ್ತದೆ. ಇಲ್ಲಿ ಮೂಲ ಕಥೆಯಲ್ಲಿನ ಕೆಲ ಅಂಶ ಬಿಟ್ಟು ಹೋಗಲೂಬಹುದು, ಕೆಲವು ಅಂಶ ಸೇರಿಕೊಳ್ಳಲೂಬಹುದು. ಒಟ್ಟಿನಲ್ಲಿ ಕಥೆಯ ಗರ್ಭದೊಳಗೆ ಕಾಲಕಾಲದ ನಂಬಿಕೆಗಳು, ಧಾರ್ಮಿಕ ಸಾಮಾಜಿಕ ಮೌಲ್ಯಗಳು, ಪರಂಪರೆಯಲ್ಲಿನ ವಿವಿಧ ಪದ್ಧತಿಗಳು ತುಂಬಿಕೊಂಡಿರುತ್ತವೆ. ಇಂತಹ ಕಥೆಗಳಲ್ಲಿ ನೀತಿ ಬೋಧನೆ ಹಾಗೂ ಮನೋರಂಜನೆಗಳು ಕಂಡು ಬಂದರೂ ಅವುಗಳ ಆಳದಲ್ಲಿ ಅನ್ಯಾಯದ ವಿರುದ್ಧದ ಪ್ರತಿಭಟನೆಯ ಎಳೆಗಳನ್ನು ಕಾಣಬಹುದು. ಅಲ್ಲದೆ ಮೌಢ್ಯವನ್ನು ಸದಾ ರಕ್ಷಿಸುವ ಕುರುಡು ನಿಷ್ಠೆಯು ಇವರಲ್ಲಿರುತ್ತದೆ. ಆನಪದ ಕಥೆಗಳಲ್ಲಿ ಕಂಡುಬರುವ ಮತ್ತೊಂದು ಸರ್ವೇಸಾಮಾನ್ಯವಾದ ಲಕ್ಷಣವೆಂದರೆ ಅವುಗಳ ಸಮರೂಪತೆ.

ಕಥೆಗಳು ಇದ್ದಕ್ಕಿದ್ದಂತೆ ಯಾವುದೇ ಒಂದು ಕ್ರಿಯೆಯಿಂದ ಪ್ರಾರಂಭವಾಗುವುದಿಲ್ಲ. ಹಾಗೆಯೇ ದಿಢೀರನೆ ಮುಕ್ತಾಯವಾಗುವುದಿಲ್ಲ. ದಿನಗಟ್ಟಳೆ ವಾರಗಟ್ಟಳೆ ತಿಂಗಳುಗಟ್ಟಳೆ ಕತೆಯನ್ನು ಹೇಳುವುದುಂಟು. ವಿಸ್ತಾರವಾದ ಕಥೆಗಳು ನಮ್ಮ ಜನಪದರಲ್ಲಿದೆ. ಈ ಹಿನ್ನೆಲೆಯಲ್ಲಿ ವೈಜ್ಞಾನಿಕವಾಗಿ ಮುಂದುವರಿದು ಹಲವಾರು ಮಾಧ್ಯಮಗಳ ಭರಾಟೆಗೆ ಒಳಗಾಗಿರುವ ಈ ಸಂದರ್ಭದಲ್ಲಿ ಕಥೆಯನ್ನು ಹೇಳುವವರು ಮತ್ತು ಕೇಳುವವರು ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಕಂಡುಬರುತ್ತಾರೆ. ಇವರು ತಮ್ಮ ಕಥೆಗಳಲ್ಲಿ ಹೆಚ್ಚಾಗಿ ಧಾರ್ಮಿಕ ಕಥೆಗಳು, ನೈತಿಕ ಕಥೆಗಳು, ಬುದ್ಧಿವಂತಿಕೆಯ ಕಥೆಗಳು, ಪುರಾಣ ಮೂಲದ ಕಥೆಗಳನ್ನು, ಮತ್ತು ಆರಾಧ್ಯ ದೈವದ ಕಥೆಗಳನ್ನು ಮತ್ತು ಆರಾಧ್ಯ ದೈವದ ಪವಾಡಗಳನ್ನು ಹೇಳುತ್ತಾ ಬರುತ್ತಾರೆ. ಇವರ ಕಥೆಗಳಲ್ಲಿ ಮನುಷ್ಯರ ಜೊತೆಗೆ ದೇವತೆ, ರಾಕ್ಷಸ, ದೆವ್ವ, ಬೇತಾಳ, ಪ್ರಾಣಿ, ಪಕ್ಷಿಗಳು, ಪಾತ್ರಗಳಾಗಿ ಕಂಡುಬರುತ್ತಾರೆ. ಮಾಟ-ಮಂತ್ರ, ಮಾಯೆ, ಕುತಂತ್ರ, ಇವುಗಳು ತಾನೇ ತಾನಾಗಿ ಹರಿದು ಬರುತ್ತವೆ., ಹೀಗೆ ಈ ಪರಿಸರದ ಜನರು ತಮ್ಮ ಇಡೀ ಬದುಕಿನ ದಣಿವನ್ನು ರಾತ್ರಿ ತಮ್ಮ ಮನೆಯ ಮುಂದಿನ ಅಂಗಳದಲ್ಲಿ ಚಾಪೆ ಹಾಸಿಕೊಂಡು ಕಥಾ ಹಂದರವನ್ನು ಬಿಚ್ಚುತ್ತಾ ಹೋಗುತ್ತಾರೆ. ಹೀಗೆ ಕಥೆಗಳು ಒಳಗೊಳ್ಳುವ ವಿಷಯಗಳಲ್ಲಿ ಇವು ಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಲೌಕಿಕ-ಅಲೌಕಿಕ, ಮಾನುಷ-ಅತಿಮಾನುಷ ಅಷ್ಟೇ ಅಲ್ಲ ಕಾಲ್ಪನಿಕ ಜಗತ್ತಿನ ವಿಸ್ಮಯಕಾರಿ ಅಂಶಗಳು ಪ್ರಾಣಿ ಪ್ರಪಂಚದ ಅದ್ಭುತ ಸಂಗತಿಗಳು ಅಲ್ಲಿ ಹುಟ್ಟಿಕೊಳ್ಳುತ್ತವೆ. ಈ ಸಮುದಾಯದವರು ಹೇಳುವ ಕಥೆಗಳನ್ನು ಕೇಳುತ್ತಾ ಹೋದರೆ ಒಂದು ಸಮುದಾಯವನ್ನು ಅರ್ಥಮಾಡಿಕೊಳ್ಳುವಲ್ಲಿ ಸಹಾಯಕವಾಗುತ್ತವೆ. ಅಲ್ಲದೆ ಶಿಷ್ಟ ಸಾಹಿತ್ಯದ ಮೂಲಕ ಮೆಲ್ಲನೆ ಜನರ ಬಾಯಿಗೆ ಬಂದಂತಹ ಕಥೆಗಳು ಇಂದು ಜನಪದ ಕಥೆಗಳಾಗಿಯೇ ಬೆಳೆದುಕೊಂಡು ಬರುತ್ತವೆ. ಪಂಚತಂತ್ರದಂತಹ ಕಥೆಗಳು ಬಹಳ ಕಡೆಗೆ ಚಾಲ್ತಿಯಲ್ಲಿವೆ.

## ೫.೩ ಗಾದೆಗಳು

ಗಾದೆಯು English ನ Proverb ಗೆ ಸಂವಾದಿಯಾಗಿ ಬಂದಿದೆ. ಇದು ಜಾನಪದದ ಬಹುಮುಖ್ಯ ಪ್ರಕಾರಗಳಲ್ಲಿ ಒಂದಾಗಿದೆ. ನಿತ್ಯ ಭಾಷೆಯಂತೆಯೇ ಸಹಜವಾಗಿ ಅನಿವಾರ್ಯವಾಗಿ ಜನ ಜೀವನದೊಡನೆ ಗಾದೆಗಳು ಬೆಳೆದುಕೊಂಡು ಬಂದಿವೆ. ನಿತ್ಯ ಜೀವನದಲ್ಲಿ ಎಲ್ಲಾ ಸಂದರ್ಭಗಳಲ್ಲಿಯೂ ಅವಶ್ಯಕತೆಗೆ ಅನುಗುಣವಾಗಿ ಜನರ ಅನುಭವದ ಸಂಪತ್ತನ್ನು ನೆನಪಿಡಲು ಸುಲಭವಾಗುವಂತೆ ಪ್ರಾಸಬದ್ಧವಾದ ಚಿಕ್ಕ ಚಿಕ್ಕ ವಾಕ್ಯಗಳಾಗಿ ಕಂಡು ಬಂದರೂ ಅವುಗಳಲ್ಲಿ ಅಗಾಧವಾದ ಶಕ್ತಿಯನ್ನು, ವಿವರವನ್ನು, ವಿಶಾಲತೆಯನ್ನು ಹೊಂದಿವೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎನ್ನುವ ಮಾತು ವಿಶ್ವಾಸನೀಯ. ಹಾಗೆ ವೇದಗಳ ಕಾಲದಿಂದಲೂ ಇಂದಿನ ತನಕವು ಅವು ಎಲ್ಲಾ ಕಾಲಗಳಲ್ಲಿ ಬಳಕೆಯಲ್ಲಿದ್ದರೂ ಅವು ಯಾವಾಗ ಹುಟ್ಟಿಕೊಂಡವು ಎಂದು ಹೇಳಲಿಕ್ಕಾಗದು. ಇವುಗಳು ಪುರಾಣ, ಚರಿತ್ರೆ, ಸ್ಥಳಗತೆ, ಅನುದಿನದ ಘಟನೆಗಳು, ಕಷ್ಟ, ಸುಖ, ಸಂತೋಷದ ಸಂದರ್ಭದಲ್ಲಿಯೂ ಹುಟ್ಟಿಕೊಳ್ಳಬಹುದು. ಒಂದು ಸಮುದಾಯದ ಮನಸ್ಸನ್ನು ಗಾದೆಗಳಿಂದ ಅರ್ಥಮಾಡಿಕೊಳ್ಳಬಹುದು. ಗಾದೆಗಳು ಸಮಾಜದಲ್ಲಿ ಹಲವಾರು ಬಗೆಯ ಕಾರ್ಯಗಳನ್ನು ನಿರ್ವಹಿಸುತ್ತವೆ. ಒಂದು ಪ್ರದೇಶದ ನಿಜವಾದ ಬಣ್ಣ, ಬದುಕು, ಅಲ್ಲಿನ ಗಾದೆಗಳ ಮೂಲಕ ಬಯಲಾಗುತ್ತದೆ. ಜನತೆಯ ಕಳೆದ ದಿನಗಳ ರೋಷ, ಕೆಚ್ಚು, ಮೌಢ್ಯ, ಮಾನಸಿಕ ವಿಕಾರ, ನಗೆ, ನೋವು, ನ್ಯಾಯ, ಅನ್ಯಾಯ ಮೊದಲಾದ ಎಲ್ಲಾ ಸಂಗತಿಗಳು ಮಡುವಾಗಿವೆ ಈ ಗಾದೆಗಳು. ಇವನ್ನೆಲ್ಲ ವಿಂಗಡಿಸಿ ನಿತ್ಯದ ಬದುಕಿಗೆ ಅಳವಡಿಸಿಕೊಳ್ಳಬೇಕು ಎನ್ನುವ ಸೂಕ್ಷ್ಮ ತಿಳುವಳಿಕೆಯನ್ನು ಈ ಗಾದೆಗಳು ಕೊಡುತ್ತವೆ. ಗಾದೆಗಳಲ್ಲಿ ಉಪಮೆ, ವಿರೋಧಭಾಸ, ಅತ್ಯುಕ್ತಿ ಮೊದಲಾದ ಅಲಂಕಾರಗಳು, ಪ್ರಾಸ, ಅನುಪ್ರಾಸ ಪುನರಾವರ್ತನೆ, ಸಮತೂಕ ಮುಂತಾದ ವಿಶಿಷ್ಟ ಗುಣಗಳು ಅಡಕವಾಗಿರುತ್ತದೆ.

ಹೆಣ್ಣು ಮಕ್ಕಳು ಇದ್ದ ಮನೆ ಕನ್ನಡಿಯಂತೆ

ಅಜ್ಞಾನಕ್ಕಿಂತ ಅಲ್ಪಜ್ಞಾನವೇ ಭೀಕರ

ಅರಗಿಳಿ ಸಾಕಿ, ಬೆಕ್ಕಿನ ಬಾಯಿಗೆ ಕೊಟ್ಟ ಹಾಗೆ

ಗಂಡ ಹೆಂಡರ ಜಗಳದಲ್ಲಿ ಕೂಸು ಬಡವಾಯ್ತು

ಅತಿಯಾದರೆ ಅಮೃತವೂ ವಿಷ

ಅತ್ತೆ ಮಾಡಿದ್ದು ಅಡಕಲಿಗೆ (ಗುಪ್ತ) ಸೊಸೆ ಮಾಡಿದ್ದು ಜೀದಿಗೆ (ಬೆಳಕಿಗೆ)

ಹೆಣ್ಣು ಹುಟ್ಟಿದರೊಂದು ಹುಣ್ಣು ಹುಟ್ಟಿದ ಹಾಗೆ

ಹೆಂಡತಿಯಿಲ್ಲದ ಮನೆ, ತಂತಿಯಿಲ್ಲದ ವೀಣೆ ದೇವರಿಲ್ಲದ ಗುಡಿ

ಅಕ್ಕ ಇದ್ದರೆ ಭಾವ, ರೊಕ್ಕವಿದ್ದರೆ ಸೂಳೆ

ತಾಯಿ ಇದ್ದರೆ ತವರು, ತಂದೆ ಇದ್ದರೆ ಬಳಗ, ನೀರು ಇದ್ದರೆ ಕೆರೆ ಬಾವಿ

ಅವರಪ್ಪನ ಅರಮನೆಗಿಂತ, ನಮ್ಮಪ್ಪನ ಗುಡಿಸಲೇ ಲೇಸು

ಗೆಯ್ದೆ ಊಣ್ಣೋದ್ ತರವಲ್ಲ, ಉಣ್ಣೆ ಮಲಗೋದು ಒಳ್ಳಲ್ಲ

ಅದಿರು ಹೆಚ್ಚಿದ್ರೆ ನಾಡು, ಬಿದಿರು ಹೆಚ್ಚಿದ್ರೆ ಕಾಡು

ತುಂಬಿದ ಕೆರೆಗೆ ಕೋಡಿ ಮದ್ದು, ಬೆಳ್ದ ಬಿದಿರ್ಗೆ ಗಾಳಿ ಮದ್ದು

ಸಾಲದ ರಾಗಿ ಸಣ್ಗೆ ಬೀಸು,

ಕೋಳಿ ಕೇಳಿ ಮೆಣ್ಸರ್ದಾರ, ಕೊಕ್ರೆ ಕೇಳಿ ಬಲೆ ಬೀಸ್ಯಾರ

ಸೂಳಿಗೋದ ರೊಕ್ಕ, ಸುಡುಗಾಡಿಗೋದ ಹೆಣ ತಿರುಗಿ ಬರೋದಿಲ್ಲ

ಎತ್ತು ಎರೆಗೆ ಎಳದ್ರೆ, ಕ್ವಾಣ ಕೆರೆಗೆ ಎಳಿತಿತ್ತಂತೆ

ಆರು ಹಡದಾಕೆ ಮುಂದೆ, ಮೂರು ಹಡದಾಕೆ ಹೇಳ್ತಿದ್ಲಂತೆ

ಆಳ ನೋಡಿ ಅನ್ನ ಹಾಕು, ಪಾತ್ರೆ ನೋಡಿ ಭಿಕ್ಷಾ ಹಾಕು.

ಬಾಯಿ ಉಳ್ಳವ ಬರಗಾಲ್ದಲ್ಲೂ ಗೆದ್ದ

ಗಂಜಿ ಕುಡಿದರೂ ಗಂಡನ ಮನೆಲೇಸು.

ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ

ಗೌಡನ ಲೆಕ್ಕದಾಗಿಲ್ಲ, ಶಾನುಭೋಗ ಬುಕ್ಕಿನಾಗಿಲ್ಲ

ಆಕಳ ಹೊಟ್ಟೇಲಿ ಅಚ್ಚೇರ ಬಂಗಾರ

ಒಕ್ಕಲಿಗ ಒಕ್ಕದಿದ್ದರೆ ಜಗವೆಲ್ಲ ಬಿಕ್ಕುವುದು

ಪ್ರತಿಯೊಂದು ವರ್ಗದ ಗುಣಸ್ವಭಾವ, ನೈತಿಕತೆ, ಸತ್ಯಸಾಧಕ ನೈಜ ಬದುಕಿನ ಹಲವು ಮುಖಗಳನ್ನು ಅರಿವಿಗೆ ತಂದುಕೊಡುತ್ತವೆ. ಈ ಗಾದೆ, ಜೊತೆಗೆ ಪ್ರಾಸಬದ್ಧವಾದ ಈ ಗಾದೆಗಳು ಕೇಳುಗರಿಗೆ ಆಳವಾದ ಪ್ರಭಾವದ ಜೊತೆಗೆ ಅರ್ಥಗರ್ಭಿತ ಭಾವ ಹೊಂದಿರುತ್ತದೆ. ಹೀಗಾಗಿ ಗಾದೆಯ ಮುಖ್ಯ ಲಕ್ಷಣ ಲೋಕಪ್ರಿಯತೆ, ಏಕೆಂದರೆ ಸಮಸ್ತ ಜನರ ಮುದ್ರೆ ಅದರ ಮೇಲೆ ಬಿದ್ದು ಚಲಾವಣೆಯ ಮೂಲಕ ತನ್ನ ಮೌಲ್ಯ ಕಾಪಾಡಿಕೊಳ್ಳುತ್ತದೆ.

**ಒಗಟುಗಳು ಮತ್ತು ಒಡಪುಗಳು**

**೫.೪ ಒಗಟುಗಳು ಮತ್ತು ಒಡಪುಗಳು**

ಸವಾಲು ಹಾಕು ಜಾಣ್ಮೆಯಿಂದ ಪ್ರಶ್ನಿಸು ಎಂಬರ್ಥದಲ್ಲಿಯೇ ಒಗಟು ಜನಪದ ಸಾಹಿತ್ಯದಲ್ಲಿ ಜನಪ್ರಿಯವಾಗಿರುವುದು. ಒಗಟುಗಳು ವಿಶೇಷವಾದವುಗಳೂ, ವಸ್ತುನಿಷ್ಠವೂ, ಪ್ರಾಬಲ್ಯವೂ ಮತ್ತು ಅರ್ಥಪೂರ್ಣವೂ ಆದ ಪದಬಂಧಗಳನ್ನು ಜನಪದ ಸಾಹಿತ್ಯದಲ್ಲಿ ಒಗಟುಗಳೆಂದು ಕರೆಯಲಾಗಿದೆ. ಗ್ರಾಮೀಣ ಪರಿಸರದ ವಿವಿಧ ವಸ್ತುಗಳ ಲಕ್ಷಣಗಳನ್ನು ಒಗಟುಗಳು ಸಾರುತ್ತವೆ. ಸಾಮಾನ್ಯವಾಗಿ ಮದುವೆ ಸಮಾರಂಭಗಳಲ್ಲಿ, ಮಗುವಿಗೆ ಹೆಸರಿಡುವಾಗ, ಹೆಣ್ಣಿಗೆ ಹೂ ಮುಡಿಸುವಾಗ, ಸಂತೋಷ ಸಡಗರದ ಸಮಾರಂಭಗಳಲ್ಲಿ, ಗಂಡು-ಹೆಣ್ಣುಗಳು ಪರಸ್ಪರ ಜಾಣತನದ ಒಗಟುಗಳನ್ನು ಹಾಕುವುದುಂಟು.

ಮದುವೆಯಾದ ಸುಮಂಗಲಿ ತನ್ನ ಗಂಡನ ಹೆಸರು ಹೇಳುವಾಗ ಕೊಂಕಿನಿಂದ ಕೊರಳು ಹೊರಳಿಸಿದರೂ, ಬಿಂಕದಿಂದ ಬೀಗಿದರೂ, ಅಂತರಂಗದಲ್ಲಿ ಅವಳ ಸೊಗಸೇ ಬೇರೆಯಾಗಿರುತ್ತದೆ. ಗಂಡನ ಹೆಸರು ನೇರವಾಗಿ ಹೇಳುವಂತಿಲ್ಲ, ಅಲಂಕಾರಿಕ ಭಾಷೆಯಲ್ಲಿ, ಶೃಂಗಾರ ಶೈಲಿಯಲ್ಲಿ ಒಗಟನ್ನು, ಒಡಪನ್ನು ಜೋಡಿಸಿಕೊಂಡು ಗಂಡನ ಮೇಲಿನ ತನ್ನ ಪ್ರೀತಿಯನ್ನು, ಅವರ ಗೌರವವನ್ನು ಪರೋಕ್ಷವಾಗಿ ವ್ಯಕ್ತಗೊಳಿಸುವುದು ಪರಂಪರಾಗತವಾಗಿ ನಡೆದುಕೊಂಡು ಬಂದಿದೆ. ಈ ಹಿನ್ನೆಲೆಯಲ್ಲಿ ಈ ಭಾಗದಲ್ಲಿ ರೂಢಿಯಲ್ಲಿರುವ ಒಗಟುಗಳು, ಒಡಮುಗಳು ಈ ರೀತಿಯಾಗಿವೆ.

೧. ಕರಿ ಹೊಲ್ದಾಗ ಕಡತಾರ ಬಿದ್ದೈತೆ

ಬೈತಲೆ.

೨. ಗಿಡ್ಡ ಗಿಡಕ್ಕೆ ಗಿಣಿ ಮುಕರ‍್ಯಾವ

ಕಡ್ಲೆಗಿಡ

೩. ಗುಡಿಯ ಹಿಂದೆ ಗುಂಡಕಲ್ಲು ಬಿದ್ದೈತಿ

೪. ಕೆಗ್ಗರ ಒಗ್ಗರ ಮೈಯಾಕಿ, ಕೆಸರಾಗ ಕಾಲ ಕಿಸಗೊಂಡು ಕುಂತಾಳ

ಕಪ್ಪೆ

೫. ಹಗ್ಗ ಹಾಸೈತಿ, ಗೂಳಿ ಮಲಗೈತಿ

ಕುಂಬಳ ಬಳ್ಳಿ ಹಾಗೂ ಕಾಯಿ

೬. ಒಂಟಿಕಾಲ ಬೆಳ್ಳಕ್ಕಿ, ಸಾವಿರಾರು ರೆಕ್ಕಿ

ತೆಂಗಿನ ಮರ

೭. ಕರಿ ಕಂಬ್ಳಿ ನೆಂಟ, ಸರ್‍ಹೊತ್ತಿನಲ್ಲಿ ಹೊಂಟ

ಹೆಗ್ಗಣ

೮. ಹಸಿರು ಗಿಡದಲ್ಲಿ ಮೊಸರು ಚೆಲ್ಲಿದಂತೆ

ಮಲ್ಲಿಗೆ ಹೂವು

೯. ಕರಿಸೀರಿ ಉಟ್ಟಾಳ ಕಾಲುಂಗುರ ತೊಟ್ಟಾಳ, ಮೇಲೆ ಹೋಗ್ತಾಳ, ಕೆಳಗೆ ಬರ‍್ತಾಳ

ಒನಕೆ

೧೦. ಆರು ಕಾಲು, ನೆತ್ತ್ಯಾಗ ಬಾಲ

ತಕ್ಕಡಿ

೧೧. ಕೆರೆಗೆ ನೀರು ತರೋಕೆ ಮೂರು ಹುಡುಗೀರು ಹೋಗ್ತಾರೆ. ಒಬ್ಬಳು ಕರಗ್ತಾಳೆ, ಒಬ್ಬಳು ಮುಳುಗುತ್ತಾಳೆ, ಇನ್ನೊಬ್ಬಳು ತೇಲುತ್ತಾಳೆ, ಏನದು?

ಎಲೆ, ಅಡಿಕೆ, ಸುಣ್ಣ

೧೨. ಬಾವಿಯೊಳಗೆ ಬೆಳ್ಳಿ ಬಟ್ಟಲು ತೇಲಾಡುತ್ತೆ

ಚಂದ್ರ

೧೩. ತುಂಬಿದ ಕೊಳ, ಅರ್ಧ ಕೊಳ, ಬರಿ ಕೊಳ!

ಎಳನೀರು, ಕಾಯಿ, ಕೊಬ್ಬರಿ

೧೪. ಬಾಲ ಇದೆ ಹನುಮಂತನಲ್ಲ, ಹಾರುತ್ತದೆ ಪಕ್ಷಿಯಲ್ಲ, ಮೇಲೆರಡು ಕೊಂಬುಂಟು ವೃಷಭನೂ ಅಲ್ಲ ಏನದು ?

ಗಾಳೀಪಟ

೧೫. ಆರು ಗೆರೆಯುಂಟು ಹೀರೆಕಾಯಲ್ಲ, ಹುಳಿಯುಂಟು ನಿಂಬೆಹಣ್ಣಲ್ಲ, ಹಸಿರಾಗಿದೆ ಹುಣಸೆಕಾಯಿ ಕೂಡ ಅಲ್ಲ

ನೆಲ್ಲಿಕಾಯಿ

೧೬. ಸುತ್ತ ಮುತ್ತ ಸುಣ್ಣದ ಗೋಡೆ, ಎತ್ತ ನೋಡಿದ್ರೂ ಬಾಗಿಲಿಲ್ಲ

ಕೋಳಿಮೊಟ್ಟೆ

೧೭. ಮಹಡಿಮೇಲೆ ಮಹಡಿ ಕಟ್ಟಿ, ಮರಿಸ್ವಾಮಿ ಗುಡಿಕಟ್ಟಿ, ಕೊಂಬೆ ಮೇಲೆ ಕೂತವನೆ ಕೊರಮಶೆಟ್ಟಿ

ಜೇನು

೧೮. ಚಿನ್ನದ ಕೋಟೆಯೊಳಗೆ ಬೆಳ್ಳಿಯ ಲಿಂಗ ಏನದು?

ಬಾಳೆ ಹಣ್ಣು

೧೯. ಅಜ್ಜಿಯ ಕೂದಲು ಕೋಟೆಯೊಳಗೆ ಹಸಿರಾಗಿ ಹರಡಿದೆ

ಸಬ್ಬಸಿಗೆ ಸೊಪ್ಪು

೨೦. ಯಾರಿಗೂ ಸಿಗಲಾರದ ನೇತಾಡುವ ಮನೆ, ಅದೇನು?

ಗೀಜಗನ ಗೂಡು

೨೧. ಒಂದುಗಳೆ ಹೊಡೆದು ಒಂಬೈನೂರು ಭಾಗ ಮಾಡಿ ಹರದನಹಳ್ಳಿ ತೇರು ಕಟ್ಟಿ ತುದಿಯನ್ನು ಸೇರಿಸಿದೆ

ಬಿದಿರು

೨೨. ಹೊತ್ತು ಗೊತ್ತಿಲ್ದೆ ಊರೆಲ್ಲ ಸುತ್ತುತ್ತೆ, ನೀರು ಕಂಡರೆ ನಿಲ್ಲುತ್ತೆ

ಚಪ್ಪಲಿ

೨೩. ಕಪ್ಪೆ ಮುಟ್ಟದ ಕೈಲಾಸದನೀರು

ಎಳನೀರು

೨೪. ಮುಳ್ಳಿನ ಗಿಡದಲ್ಲಿ ಚಿನ್ನದ ಮೊಟ್ಟೆಯಿದೆ

ನಿಂಬೆಹಣ್ಣು

೨೫. ನೀರಲ್ಲೇ ಹುಟ್ಟಿ, ನೀರಲ್ಲೇ ಬೆಳೆದು, ಊರಲ್ಲಿ ಬಂದು, ಗಂಟಲು ಹರಿಯುವಂತೆ ಕೂಗ್ತೀನಿ

ಶಂಖ

೨೬. ಒಂದು ಗುಂಡೀಲಿ ಒಂದು ಮೀನು

ನಾಲಿಗೆ

೨೭. ಮನೆಯಲ್ಲಿದ್ರೆ ಮೊಗ್ಗು, ಹೊರಕ್ಕೆ ಬಂದರೆ ಹೂವು

ಛತ್ರಿ

೨೮. ಹಿಡಿಯೋಣವೆಂದರೆ ಸಿಗುವುದಿಲ್ಲ, ನೋಡೋಣವೆಂದರೆ ಕಾಣುವುದಿಲ್ಲ

ಗಾಳಿ

೨೯. ಕೆರೆಯೂ ಅಲ್ಲ, ಬಾವಿಯೂ ಅಲ್ಲ, ಆದರೂ ನನ್ನಲ್ಲಿ ಸಿಹಿನೀರುಂಟು

ತೆಂಗಿನಕಾಯಿ

೩೦. ಬಾನೆಲ್ಲಾ ಚೆಲ್ಲಿದೆ ತೆಗೆದು ಕೊಳ್ಳೋರು ಯಾರಿಲ್ಲ

ಬೆಳದಿಂಗಳು

೩೧. ಸುತ್ತಾಮುತ್ತಾ ಬೇಲಿ ಕಟ್ಟಿ, ಸುವಾಲಮ್ಮನ ಕಾವಲು ಇರಿಸಿ, ಹೂವು ಬಿಟ್ಟರೆ ತೋಟ ಹಾಳು

ಕಣ್ಣು

೩೨. ಚಿಕ್ಕ ಮನೆ ತುಂಬ ಚೆಕ್ಕೆ ತುಂಬಿದೆ

ಬಾಯಿ

೩೩. ಬಿಳಿಮನುಷ್ಯ ಕರಿ ಕೋಟು

ಬೆಂಕಿ ಕಡ್ಡಿ

೩೪. ಮೂರು ಕಣ್ಣುಂಟು ಶಿವನಲ್ಲ, ಜುಟ್ಟುಂಟು ಪೂಜಾರಿಯಲ್ಲ, ನೀರುಂಟು ಬಾವಿಯಲ್ಲ

ತೆಂಗಿನಕಾಯಿ

೩೫. ನನಗೊಂದು ಅಜ್ಜಿ, ಮೈತುಂಬ ಕಜ್ಜಿ, ನಾನು ಯಾರಜ್ಜಿ?

ಹಾಗಲಕಾಯಿ

೩೬. ನಿನ್ನ ಹತ್ತಿರ ಇದೆ, ನಿನ್ನನ್ನೇ ಬಡಿಯುತ್ತದೆ

ಕಣ್ಣಿನ ರೆಪ್ಪೆ

೩೭. ಒಂದು ಮರ ಹುಟ್ಟಿ, ಹನ್ನೆರಡು ಕವಲು, ಕವಲು ಕವಲಿಗೂ ೧೫ ಕರಿ ಎಲೆ, ೧೫ ಬಿಳಿ ಎಲೆ

ಅಮವಾಸ್ಯೆ, ಹುಣ್ಣಿಮೆ

೩೮. ಬೆಳ್ಳಿ ತಟ್ಟೆ ಮೇಲೆ ಕರಿಲಿಂಗ

ಕಣ್ಣು

೩೯. ಕತ್ತರಿಸಿದರೆ ಬಾಡುವುದಿಲ್ಲ, ನೆಟ್ಟರೆ ಉಳಿಯುವುದಿಲ್ಲ

ಉಗುರು, ಕೂದಲು

೪೦. ಅಕ್ಕ, ಅಕ್ಕ ಬಾವಿ ನೋಡು, ಬಾವಿಯೊಳಗೆ ನೀರು ನೋಡು, ನೀರಿನೊಳಗೆ ಬಳ್ಳಿ ನೋಡು, ಬಳ್ಳಿಗೊಂದು ಹೂ ನೋಡು

ದೀಪ

೪೧. ಕಾಲ ಮೇಲೆ ಮರ, ಮರದ ಮೇಲೆ ಬಳ್ಳಿ, ಬಳ್ಳಿ ಮೇಲೆ ಬೆರಳು

ವೀಣೆ

೪೨. ಮೂರು ಕಾಸಿನ ಕುದುರೆಗೆ ಮಾರುದ್ದ ಲಗಾಮು

ಸೂಜಿ, ದಾರ

೪೩. ಹಸಿರು ಕುಡಿಕೆಯ ತುಂಬಾ, ಕರಿ ಮೆಣಸು ತುಂಬಿದೆ

ಪಪ್ಪಾಯಿ

೪೪. ಅಜ್ಜ ಆಕಾಶಕ್ಕೆ, ಅವ್ವ ಪಾತಾಳಕ್ಕೆ, ಮಗ ವ್ಯಾಪಾರಕ್ಕೆ, ಮಗಳು ಮದುವೆಗೆ

ಅಡಿಕೆ ಮರ

೪೫. ಎಲೆಗೊಂದ್ಕಾಯಿ, ತಲೆಗೊಂದ್ಕಾಯಿ, ಜಾನನಿಗೊಂದ್ಕಾಯಿ, ಜಗದೀಶನಿಗೊಂದ್ಕಾಯಿ

ಉಪ್ಪಿನಕಾಯಿ, ಸೀಗೆಕಾಯಿ, ಪಗಡೆಕಾಯಿ, ತೆಂಗಿನಕಾಯಿ

೪೬. ಶಿವನಿಗೆ ತಂದೆಯಾದೆ, ಪಾರ್ವತಿಗೆ ಗಂಡನಾದೆ, ಕಲಿಯದೆ ಡಾಕ್ಟರನಾದೆ

ಡಾ. ರಾಜಕುಮಾರ್

೪೭. ಅನ್ನ ತಿನ್ನಲ್ಲ, ನೀರು ಕುಡಿಯಲ್ಲ, ಆದ್ರೆ ಬುದ್ದೀಲಿ ಮಾತ್ರ, ಅದನ್ನು ಮೀರಿಸುವವರೇ ಇಲ್ಲ

ಕಂಪ್ಯೂಟರ್

೪೮. ಬಿಸಿಲಲ್ಲಿ ಕಾಣಿಸಿಕೊಳ್ಳುತ್ತೆ, ಗಾಳಿ ಬೀಸಿದ್ರೆ ಮಾಯ ಆಗುತ್ತೆ

ಬೆವರು

೪೯. ಹೋಗ್ತಾನೆ ಬರ್ತಾನೆ ತಿಮ್ಮಪ್ಪ ಒಂಟಿ ಕಾಲಲ್ಲಿ ನಿಂತವ್ನೆ ತಿಮ್ಮಪ್ಪ

ಬಾಗಿಲು

೫೦. ನಿನ್ನೂರಲ್ಲಿ ನನ್ನೂರು ಹೋದರೆ ಎಷ್ಟು ಉಳಿಯುತ್ತೆ?

ಸೊನ್ನೆ (ನಿನ್ನ ನೂರಲ್ಲಿ ನನ್ನ ನೂರು)

೫೧. ಹಸಿರು ಕೋಟೆ ಬಿಳಿರಾಜ ಅವನನ್ನು ತಿಂದರೆ ಬರುತಾನೆ ಕರಿರಾಜ

ಸೀತಾಫಲ

೫೨. ಕಲ್ಲರಳಿ ಹೂವಾಗಿ, ಎಲ್ಲರಿಗೆ ಬೇಕಾಗಿ, ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ ಬಲ್ಲವರು ಹೇಳಿ

ಸುಣ್ಣದ ಹರಳು

೫೩. ಹಲವು ಮಕ್ಕಳ ತಂದೆ ತಲೆಯಲ್ಲಿ ಜುಟ್ಟು ಸಲೆಗಳಿಗೆ ಜಾವವರಿವನ ಹೆಂಡತಿಗೆ ಮೂಲೆಯಿಲ್ಲ ನೋಡು

ಹುಂಜ

೫೪. ಎಂಟು ಗಂಟಲಲಿ ಮುಳ್ಳುಂಟು, ಓಡಿದು ಒಡಿಸುವುದು ಕವಿಗಳಲ್ಲಿ ಒಂಟರಿಯದು ಯಾವುದು ಹೇಳಿ

ಇಕ್ಕಳ

೫೫. ಕಡೆ ಬಳಿದು, ನಡು ಕಪ್ಪು, ಉಳುವ ವಸ್ತ್ರವಲ್ಲ, ಜಿಡದೇ ನೀರುಂಟು ಮಾಡುವುದಲ್ಲ ಕವಿಗಳಲಿ ಅರಿದವರು ಹೇಳಿ

ಕಣ್ಣು

೫೬. ಕಾಲಿಲ್ಲ, ಕೊಂಬುಂಟು. ಜಾಲದ ಪಕ್ಷಿಯಿದು, ಮೇಲೆ ಹಾರುವುದು ಹದ್ದಲ್ಲ, ಕವಿಗಳಲಿ ಬಾಲರಿಯದವರು ಹೇಳಿ

ಪಟ

೫೭. ನೆತ್ತಿಯಿಂದ ಉಣ್ಣುತ್ತದೆ. ಸುತ್ತೆಲ್ಲ ಸುರಿಸುತ್ತದೆ. ಎತ್ತಿದರೆ ಎರಡು ಹೋಳಾಗುತ್ತದೆ, ಉತ್ತರ ಅವರು ಇದರ ಹೆಸರನ್ನು

ಬೀಸುವಕಲ್ಲು

೫೮. ಕರವುಂಟು ಕಾಲಿಲ್ಲ, ಶಿರವರಿದ ಮುಂಡವದು ನರದಿ ಜಿಗಿದಾರು.

ಅಂಗಿ

೫೯. ಕಣ್ಣುಂಟು ಕಾಣದು. ಕಣ್ಣೆರೆದು ನೋಡುವುದು. ಮಣ್ಣಿನಲಿ ಹುಟ್ಟಿ, ಬೆಳಗಿದುದು ಇದನ್ನು ಬಲ್ಲವರು ಹೇಳಿ

ಬೆಳಕಿಂಡಿ

೬೦. ಕಾಲುಂಟು ನಡೆಯುವುದು, ಮೊಲೆಯಲೆ ಕಟ್ಟಿಹುದು, ಬಾಲಕರ ಸೊಮ್ಮೊರುಹುದು, ಕವಿಗಳು ಬಾಲರಿದ ಹೇಳಿ

ತೊಟ್ಟಿಲು

೬೧. ಮೀನು ಮುಟ್ಟಿದ ವಾರಿ, ದಾನವರ ವೈರಿ, ತಾ ಮಾನವರಿಗಾಗಿ ಹಿಡಿದಿಹೆನು ಕವಿಗಳಲ್ಲಿ ಮಾನಸರು ಹೇಳಿ

ತೆಂಗಿನಕಾಯಿ

೬೨. ಕಾಲಿಲ್ಲದೆ ಹರಿಯುವುದು ತೋಳಿಲ್ಲದೇ ಒತ್ತುವುದು ನಾಲಿಗೆ ಇಲ್ಲದೇ ಉಲಿಯುವುದು ನಮ್ಮಕ ಇದನ್ನು ಒಡೆದು ಹೇಳಿದರೆ ಒಳಿತಾಗದು

ನದಿ

೬೩. ಮಡಿ ಮೈಲಿಗೆ ಅರಿಯದು, ಅಡುಗೆ ಮನೆ ಸೇರುವುದು, ಮಾಡಿ ದಡಿಗೆಯ ಮೊದಲು ತಾನುಣ್ಣುವುದು ಇದನ್ನೊಡೆದು ಅವರು ಹೇಳುವುದು.

ನೊಣ

೬೪. ಹಗ್ಗವಿಲ್ಲದ ಕಟ್ಟು, ಕೋಲಿಲ್ಲದ ಪೆಟ್ಟು, ಏನಿದರ ಗುಟ್ಟು ನಮ್ಮಾಕೆ ಹೇಳಲಿ ಕಷ್ಟ ಪಟ್ಟು

ಮಾರ್ಮಿಕ ಮಾತು

೬೫. ಕರಿಹೊಲ್ದಾಗ ಕಡತಾರ ಬಿದ್ಯೆತಿ

ಬೈತಲೆ

೬೬. ಸಾಲಗಡಕ ಸಪ್ಪಳಾಗೋದಿಲ್ಲ

ಹಾದಿ

೬೭. ಅಣ್ಣ ಅತ್ತರೆ ತಮ್ಮನೂ ಅಳುತ್ತಾನೆ

ಕಣ್ಣು

೬೮. ಅಂಕುಡೊಂಕಾದ ಬಾವಿಲಿ ಒಂದು ತೊಟ್ಟು ನೀರಿಲ್ಲ

ಕಿವಿ

೬೯. ಈ ಕೋಣೆ ಕೆಲಸ ಮಾಡಿದ ಮೇಲೆ ಮೂಲೇಲಿ ನಿಲ್ಲುವ ಈ ಜಾಣೆ ಯಾರು?

ಪೊರಕೆ (ಕಸಬರಗಿ)

೭೦. ಕಪ್ಪು ಮೈದಾನ ಬಿಳಿ ರಸ್ತೆ

ಬೈತಲೆ

೭೧. ಕಡಿದರೆ ಹಾಲು ಒಡೆದರೆ ಹಾಲು, ಒಳಗಡೆ ಸಾವಿರ ಮಕ್ಕಳು ಇದನ್ನು ತಿಂದರೆ ರುಚಿ ಇದು ಏನು?

ಹಲಸಿನ ಹಣ್ಣು

೭೨. ಮನೆ ಮನೆಗೆರಡು ಬಾಗಿಲು ಬಾಗಿಲ ಮುಂದೆ ಬಾವಿ ಇವು ಮುಚ್ಚಿದರೆ ಹಾನಿ ಇದೇನು?

ಮೂಗು, ಬಾಯಿ

೭೩. ಪ್ರತಿ ಮನೆಯಲ್ಲಿ ಕೆಂಪು ಹುಡುಗಿ

ಬೆಂಕಿ

೭೪. ಬಿಳಿ ಕುದುರೆಗೆ ಹಸಿರು ಬಾಲ

ಮೂಲಂಗಿ

೭೫. ಹುಲಿಯ ಚಿಕ್ಕಮ್ಮ, ಇಲಿಯ ಮುಕ್ಕಮ್ಮ

ಬೆಕ್ಕು

೭೬. ಇದ್ದಲ ನುಂಗತ, ಗದ್ದಲ ಮಾಡುತ ಉದ್ದಕ್ಕೂ ಓಡುತ

ರೈಲು

೭೭. ಹುಟ್ಟುತ್ತಲೇ ಹುಡುಗ ತಲೆಯಲ್ಲಿ ಟೋಪಿ ಹಾಕಿರುತ್ತೆ

ಬದನೆಕಾಯಿ

೭೮. ಪ್ರಾಣವಿಲ್ಲ ಹಾರುತ್ತೆ, ಜೀವವಿಲ್ಲ ಕೂಗುತ್ತೆ

ವಿಮಾನ

೭೯. ಬಂಗಾರದ ಗಿಣಿ ಬಾಗಿಲು ಕಾಯುತ್ತೆ

ಬೀಗದ ಕೈ

೮೦. ಎಂಟು ಕಂಬಗಳಿಗೆ ಒಂದೇ ಆಧಾರ

ತಕ್ಕಡಿ

೮೧. ಚಿಕ್ಕ ಮಕ್ಕಳಿಗೆ ಮೈ ತುಂಬಾ ಬಿಳಿ ಬಟ್ಟೆ

ಬೆಳ್ಳುಳ್ಳಿ

೮೨. ಗಿಡ ಕೊಡಲಾರದು ಮರ ಬೆಳೆಸಲಾರದು ಅದಿಲ್ಲದೇ ಊಟ ಸೇರಲಾರದು

ಉಪ್ಪು

೮೩. ತಾತನ ತಟ್ಟೆ ಥಳ ಥಳ ಹೊಳೆಯುತ್ತೆ

ಚಂದ್ರ

೮೪. ಬೆಳ್ಳಿ ಚಡಿ ನೆಲಕ್ಕೆ ಹೊಡಿ

ಸಿಂಬಳ

೮೫. ಗಿಡ್ಡ ಹುಡುಗ ಅಡ್ಡ ಬಿದ್ದ

ಹೊಸಲು

೮೬. ಅಪ್ಪನಿಗೆ ಮೂರು ಅವ್ವನಿಗೆ ಒಂದು

ವಿಭೂತಿ ಪಟ್ಟಿ, ಕುಂಕುಮ

೮೭. ನಮಗಿಂತ ಇತರರೇ ಹೆಚ್ಚು ಬಳಸುತ್ತಾರೆ ಏನು?

ಹೆಸರು

೮೮. ನೀಲಿ ಸಾಗರದಲ್ಲಿ ಬೆಳ್ಳನೆ ಮೀನುಗಳು ನಾನ್ಯಾರು?

ತಾರೆ, ನಕ್ಷತ್ರ

೮೯. ಓಡಿದರೆ ಓಡಿ ತುಂಬ ಬಿಟ್ಟರೆ ಮನೆ ತುಂಬ ಇದು ಹೇಳುವವನಿಗೆ ಎಲ್ಲಿಲ್ಲದ ಜಂಭ

ಬೆಳಕು

೯೦. ಮೂಲೇಲಿ ಮುದುಕಿ ಕೂತವಳೇ ಮುಟ್ಟಿದರೆ ರಾಗ ಹಾಡ್ತಾಳೆ

ತಂಬೂರಿ

೯೧. ಒಂಟಿಗಾಲಿನ ತುಂಟ ನೀನ್ಯಾರು?

ಬುಗುರಿ

೯೨. ಕಾಲಿಲ್ಲದ ಹುಡುಗಿಗೆ ಮಾರುದ್ದ ಕಡಿವಾಣ

ಸೂಜಿ

೯೩. ಚಿನ್ನದ ಹಕ್ಕಿಯ ಬಾಲದಿಂದ ನೀರನ್ನು ಕುಡಿಯುತ್ತದೆ

ದೀಪ

೯೪. ಒಂಟಿಗಣ್ಣಿನ ಪೋರಿ ಊರೆಲ್ಲವನ್ನು ಸುತ್ತಾಡುತ್ತೆ

ಸೂಜಿ

೯೫. ಚೋಟುದ್ದ ಸಿಪಾಯಿಗಳು ಒಬ್ಬೊಬ್ಬರೇ ಬರ್ತಾರೆ ಉರಿದು ಬಿದ್ದು ಸಾಯ್ತಾರೆ

ಬೆಂಕಿಕಡ್ಡಿ

೯೬. ಆಕಾಶದೊಳಗಿನ ಗಿಣಿ ಊಟದ ಹೊತ್ತಿಗೆ ರಾಣಿ

ಬಾಳೇ ಎಲೆ

೯೭. ರಾಜಾ ರಾಣಿ ಅಂಗಳದಲ್ಲಿ ಬೇರಿಲ್ಲದ ಮರ ಹುಟ್ಟಿ ಊರಿನೋರಿಗೆಲ್ಲ ಸಂಗತಿ

ರಥ

೯೮. ಗಿಡದ ತುಂಬಾ ಬೆಳ್ಳಿಯ ಹೂವು ಬಿಡಿಸೋಕೆ ಆಗಲ್ಲ ಎಣಿಸೋಕೆ ಆಗಲ್ಲ

ನಕ್ಷತ್ರ

೯೯. ತೊಳೆಯ ಬಾಳೇಕಾಯಿ ನಾನ್ಯಾರು ಹೇಳಿ ನೋಡೋಣ

ಮೀನು

೧೦೦. ಹಳ್ಳಿ ಗಡಿಯಾರ ಒಳ್ಳೇ ಆಹಾರ

ಕೋಳಿ

೧೦೧. ಹಗಲು ನಿದ್ರೆ, ರಾತ್ರಿ ಓಡಾಟ

ಇಲಿ

೧೦೨. ಕಪ್ಪುಗುಡ್ಡೆ ಮೇಲೆ ಪುಟಾಣಿ ಚೋರ

ಹೇನು

೧೦೩. ಓಡಿ ಹೋಗುತ್ತೆ, ಶೆಕ್ಕ ಹಾಕಿ ಮಲಗತ್ತೆ

ಹಾವು

೧೦೪. ಕರಿ ಹೊಲದಲ್ಲಿ ಕರಿ ದನ ಮೇಯುತ್ತೆ

ಹೇನು

೧೦೫. ಒಂದು ಗಿಡಕ್ಕೆ ಒಂದೇ ಪದಕ

ಉಗುರು

೧೦೬. ಹಾಲಲ್ಲಿ ಕಪ್ಪು ಚುಕ್ಕಿ ಬಿದ್ದಿದೆ

ಕಣ್ಣುಗುಡ್ಡೆ

೧೦೭. ಬೆಳಗ್ಗೆ ಬೀಳುತ್ತೆ ಸಂಜೆಗೆ ಏಳುತ್ತೆ

ಚಂದ್ರ

೧೦೮. ಕಣ್ಣಿಗೆ ಕಾಣುತ್ತೆ ಕೈಗೆ ಸಿಕ್ಕಿಲ್ಲ

ನೆರಳು

೧೦೯. ಅಕ್ಕನ ಮೇಲೆ ಛತ್ರಿ

ರೆಪ್ಪೆ

೧೧೦. ಒಂದೇ ದೋಸೆ ಸಾವಿರ ಜನ ತಿಂತಾರೆ

ಜೇನು

೧೧೧. ಗುಂಡಾಕಾರ ಮೈಯೆಲ್ಲಾ ತೂತು

ದೋಸೆ

೧೧೨. ಅಡ್ಡ ಗೋಡೆ ಮೇಲೆ ನಾಣ್ಯ ಕೂತಿದೆ ಇದು ಏನು?

ಕುಂಕುಮ

೧೧೩. ಮನೆ ಮೇಲೆ ಮಲ್ಲಿಗೆ ಹೂವು

ಮಂಜು

೧೧೪. ಅಂಗೈ ಕೊಟ್ಟರೆ ಮುಂಗೈ ನುಂಗುವುದು ಇದು ಏನು?

ಅಂಗಿ

೧೧೫. ಅಳತೆ ನೋಡುವ ದರ್ಜಿ ಇಲ್ಲ, ಲೆಕ್ಕ ನೋಡುವ ಕಾರಕೂನ ಇಲ್ಲ.

ಕೂದಲು

೧೧೬. ಸಣ್ಣ ಕೋಣೆಯಲ್ಲಿ ದಂತದ ಬೇಲಿ

ಹಲ್ಲು

೧೧೭. ಕಣ್ಣಿಗೆ ಕಾಣುತ್ತೆ ಕೈಗೆ ಬರಲ್ಲ

ಪ್ರತಿಬಿಂಬ

೧೧೮. ಪಾತಾಳದಲ್ಲಿ ಬೆಳ್ಳಿ, ಮೇಲೆ ಕಳ್ಳಿ

ಗೆಣಸು

೧೧೯. ಮನೆಮಂದಿ ಎದುರೇ ಮಗಳ ಕೈಯನ್ನು ಹಿಡಿತಾನೆ.

ಬಳೆಗಾರ

೧೨೦. ಕಣ್ಣಿಲ್ಲ, ಕಾಲಿಲ್ಲ, ಆದರೂ ನಡೆಯುತ್ತೆ

ಗಡಿಯಾರದ ಮುಳ್ಳು

೧೨೧. ಒಂದೇ ಕಣ್ಣು ಒಂದೇ ಬಾಲ

ಸೂಜಿ

೧೨೨. ಬಂಗಾರದ ಗುಬ್ಬಿ ಬಾಲದಿಂದ ನೀರನ್ನು ಕುಡಿಯುತ್ತೆ.

ನಂದಾದೀಪ

೧೨೩. ಆಕಾಶದಾಗೆ ಅಪ್ಪಣ್ಣ ಕೆಳಗೆ ಜಿದ್ದರೆ ದುಪ್ಪಣ್ಣ ಹುಲ್ಲಿನಲ್ಲಿ ಅಡಗಣ್ಣ ಮಾರ್ಕೆಟಿನಲ್ಲಿ ಮಾರಣ್ಣ

ಮಾವಿನ ಹಣ್ಣು

೧೨೪. ಹೋಗುತ್ತಾ ಹೋಗುತ್ತಾ ಕೊಯ್ಯತೆ, ಬರುತ್ತ, ಬರುತ್ತ ಕೊಯ್ಯದೆ ನಾನು ಯಾರು ಹೇಳಿ ಅತ್ತೆ?

ಗರಗಸ

೧೨೫. ನೀರಿಗೆ ಹೋಗಲ್ಲ, ನೀರು ಮುಟ್ಟುವುದಿಲ್ಲ ನೀರು ತರ್‍ತೀನಿ.

ತೆಂಗಿನಕಾಯಿ

೧೨೬. ಅಡ್ಡಗೋಡೆ ಮೇಲೆ ದೀಪ ಉರಿತಿದೆ

ಮೂಗುಬೊಟ್ಟು

೧೨೭. ಆನೆಗಾತ್ರ ದೇಹ ಎಲ್ಲಿ ಚುಚ್ಚಿದರು ಒಂದು ತೊಟ್ಟು ರಕ್ತ ಇಲ್ಲ.

ಕಲ್ಲುಬಂಡೆ

೧೨೮. ಕಿತ್ತರೆ ಬಾಡುವುದಿಲ್ಲ, ನೆಟ್ಟರೆ ಹುಟ್ಟುವುದಿಲ್ಲ ಇದು ಏನು?

ಕೂದಲು

೧೨೯. ಹಕ್ಕಿ ತಿನ್ನುವವನಿಗೆ ಕೆಂಪು ಪುಕ್ಕ

ಕೋಳಿ

೧೩೦. ಸುಟ್ಟ ಹೆಣ ಮತ್ತೆ ಸುಡ್ತಾರೆ

ಇದ್ದಿಲು

೧೩೧. ಹಗಲಲ್ಲಿ ಮಾಯೆ, ರಾತ್ರಿಯಲ್ಲಿ ಪ್ರತ್ಯಕ್ಷ ನಾನ್ಯಾರು ಹೇಳಿ?

ನಕ್ಷತ್ರ

೧೩೨. ಕಡಿದರೆ ಕಚ್ಚಾಗುವುದಿಲ್ಲ, ಹಿಡಿದರೆ ಹಿಡಿಯಾಗುವುದಿಲ್ಲ

ನೀರು

೧೩೩. ಹಾರಿದರೆ ಹನುಮಂತ ಕೂಗಿದರೆ ಶಂಖ

ಕಪ್ಪೆ

೧೩೪. ಕಂಬದ ಮೇಲೆ ನಿಂಬೆಕಾಯಿ ನಾನ್ಯಾರು ಹೇಳಿ?

ಲವಂಗ

೧೩೫. ಹುಲ್ಲು ಹಾಕಿದರೆ ಹಾಲು ಕೆಡಲ್ಲ, ಕಲ್ಲು ಹಾಕಿದರೆ ಹಾಲು ಕೆಡುತ್ತೆ

ಕಳ್ಳಿ

೧೩೬. ಗುಡ್ಡದ ಹಿಂದೆ ಗುಂಡಕಲ್ಲು

ತುರುಬು

೧೩೭. ಬಡ ಬಡ ಬಂದ ಅಂಗಿ ಕಳಚಿ ಬಾವಿಯೊಳಗೆ ಬಿದ್ದ

ಬಾಳಿಹಣ್ಣು

೧೩೮. ಅಂಗಡಿ ಒಳಗಿಟ್ಟು ಮಾರುವುದಿಲ್ಲ, ತಕ್ಕಡಿ ಒಳಗಿಟ್ಟು ತೂಗುವುದಲ್ಲ, ಅದಿಲ್ಲದೇ ಹಬ್ಬ ಆಗುವುದಿಲ್ಲ

ಸೆಗಣಿ

೧೩೯. ಕರಿ ಸೀರೆ ಉಟ್ಟಾಳ ಕಾಲುಂಗುರ ಇಟ್ಟಾಳ ಮೇಲಕೆ ಹೋಗಿ ಕೆಳಕೆ ಬರ್ತಾಳೆ

ಒನಕೆ

೧೪೦. ಅಂಗಿ ಬಿಚ್ಚಿ ಬಾವಿ ಹಾರು

ಬಾಳೇಹಣ್ಣು

೧೪೧. ಕೆಮ್ಮಣ್ಣು ಗುಂಡಿಯಲ್ಲಿ ಸಾವಿರಾರು ಜನ ಸೈನಿಕರ ಕೋಟೆಯಂತೆ ನಿಂತಿದ್ದಾರೆ

ದಾಳಿಂಬೆ

೧೪೨. ಬಂಡಿ ತಿರುಗತೈತಿ ಭಂಡಾರ ಚೆಲ್ಲತೈತಿ

ಬೀಸುವ ಕಲ್ಲು

೧೪೩. ಸಂತೆಯೊಳಗಿಂದ ತರಕಾರಿ ತಂದು ಮುಂದೆ ಇಟ್ಟುಕೊಂಡು ಅಳತಾರೆ

ಈರುಳ್ಳಿ

೧೪೪. ಮುಂಜಾನೆ ಬರತೈತಿ ಸಂಜೆಗೆ ಹೋಗತೈತಿ

ಸೂರ್ಯ

೧೪೫. ಅಡ್ಡ ಗೋಡೆ ಮೇಲೆ ಗಿಡ್ಡಪ್ಪ ಕೂತಾನ ಬಂದವರಿಗೆಲ್ಲಾ ಬೆಂಕಿ ಕೊಡುತ್ತಾನೆ

ಚೇಳು

೧೪೬. ಹಸಿರು ಗಿಡದ ಮೇಲೆ ಮೊಸರು ಚೆಲ್ಲಿದೆ

ಮಲ್ಲಿಗೆ ಹೂ

೧೪೭. ಸುತ್ತಮುತ್ತ ಸುಣ್ಣದ ಗೋಡೆ ಯಾವ ಕಡೆಗೂ ಬಾಗಿಲು ಇಲ್ಲ

ಕೋಳಿ ಮೊಟ್ಟೆ

೧೪೮. ಸಂಜೆಯತನಕ ಬಡಿದರೂ ಸದ್ದೇ ಆಗದು

ಕಣ್ಣುರೆಪ್ಪೆ

೧೪೯. ಮರದೊಳಗೆ ಮರಹುಟ್ಟಿ ತಿನ್ನಬಾರದಂತ ಹಣ್ಣಾಯಿತು

ಮಗು

೧೫೦. ಚಿಕ್ಕ ಮನೆಯೊಗಳಗೆ ಚಕ್ಕೆ ತುಂಬಿವೆ

ಹಲ್ಲುಗಳು

೧೫೧. ಅಪ್ಪ ಅಂದರೆ ಕೂಡುವುದು ಅವ್ವ ಅಂದರೆ ಕೂಡಲ್ಲ

ತುಟಿ

೧೫೨. ಬಗ್ಗಿದರೆ ಬಾಯಿಗೆ ಬರುವುದು

ತಾಳಿ

೧೫೩. ನಕ್ಕರೆ ನಗುವುದು, ಅತ್ತರೆ ಅಳುವುದು, ಬಿಟ್ಟರೆ ಚೂರಾಗುವುದು

ಕನ್ನಡಿ

೧೫೪. ಬಾ ಅಂದರೆ ಬರುವುದಿಲ್ಲ, ಹೋಗು ಅಂವರೆ ಹೋಗೋದಿಲ್ಲ

ನೆರಳು

೧೫೫. ಅಂಗಣ್ಣ ಮಂಗಣ್ಣ ಅಂಗಿ ಕಳೆದು ನುಂಗಣ್ಣ

ಬಾಳೆಹಣ್ಣು

೧೫೬. ಒಂದು ಹಕ್ಕಿಗೆ ಮೈ ತುಂಬಾ ರೆಕ್ಕೆ

ಪುಸ್ತಕ

೧೫೭. ಅಂದ ಹಾಗೆ ಅನ್ನುವುದು ಆದರೆ ಯಾರಿಗೂ ಕಾಣದು

ಪ್ರತಿಧ್ವನಿ

೧೫೮. ಅಂತರದ ಬಲೆ ಹಾಕಿ ಹಾರುವವರ ಹಿಡಿಯುವನು

ಜೇಡರ ಬಲೆ

೧೫೯. ಚುಕ್ಕೆ ಇಟ್ಟ ಅಂಗಳ ಚಂಗ ಚಂಗನೆ ಓಡುವುದು

ಜಿಂಕೆ

೧೬೦. ಒಂಟಿ ಕಾಲಿನ ಕೊಕ್ಕರೆ ನೆತ್ತಿಯ ಮೇಲೆ ಮೊಟ್ಟೆ ಇಡುತ್ತದೆ.

ತೆಂಗಿನಮರ

ಒಗಟು ಸಂಕ್ಷಿಪ್ತರೂಪದ ಒಂದು ಆಕರ್ಷಕ ರಚನೆ. ಅದರಲ್ಲೂ ಜನಪ್ರಿಯ ಒಗಟುಗಳು ತೀರಾ ಚಿಕ್ಕವು ಕಾವ್ಯಾತ್ಮಕವಾದವು. ಇನ್ನು ಗರತಿಯು ಗಂಡನ ಹೆಸರು ಹೇಳುವಾಗ ಬಳಸುವ ಒಡಪುಗಳು ಈ ರೀತಿ ಇದೆ.

೧. ಹೊಳೆಯ ದಂಡೆಯಲ್ಲಿ ಬಿದಿರು ಬಹಳ,

ನಮ್ಮ ಚಪಾತಿಗೆ ಪದರು ಬಹಳ

ನಮ್ಮ ರಾಯರಿಗೆ ನೆದರು ಬಹಳ

೨. ಗುಲಗಂಜಿ ಗುಂಪ, ಮಲ್ಲಿಗೆ ಹೂವಿನ ಕಂಪ,

ನಮಕ್ಕಿಂತ ನಮ್ಮ ರಾಯರ ಕಂಪ

೩. ಹಸಿ ಹಾಲ, ಬಿಸಿ ಅನ್ನ, ತುತ್ತಿಗೊಮ್ಮೆ

ತುಪ್ಪ ಬೇಡತಾರ

೪. ಕಾಲಾಗ ಭೂಟ, ಕೈಯಾಗ ನೂರರ ನೋಟ

ಕಾರಗಾಡಿ ತೊಗೊಂಡ ಕರ್‍ಯಾಕ ಬರಾತರ

೫. ಕಟಕರೊಟ್ಟಿ, ತಟಕ ಎಣ್ಣಿ,

ಕಟಗೊಂಡ ಹೊಗೊಂದರ ಸೆಟಗೊಂಡ ಹೊಗತಾರ

೬. ಧ್ವಜದ ಕಟ್ಟೆ ಮೇಲೆ ಇರುವುದು ವಂದೇ ಮಾತರಂ

——— ರ ಹೆಸರು ಹೇಳತೀನೆ ಸುಸ್ವಾಗತಂ

೭. ಆನೆಗೆ ಇರುವುದು ಸೊಂಡೆ, ಬಾಗಿಲಿಗೆ ಇರುವುದು ಕೊಂಡೆ

ಹೆಸರ ಕೇಳೋರ ಬಾಯಾಗ ಉಂಡೆ

೮. ಸಾಟಿ ಸೀರಿ ಪ್ಯಾತಿದ ಊರ, ಗೊಟ ಮಾಡಸೂದ ಅಂದ್ರ

ನೋಟ ಮುರಿಸುದ ಬ್ಯಾಡ ಅಂತಾರ ———

೯. ಅರ್ಧ ರೊಟ್ಟಿ, ಅವರಿಕಾಳ ನನಗಿ

ಅರಮನ್ಯಾಗ ಕುತ್ತ ಅರ್ಭಟ ಮಾಡ್ತಾರ ———

೧೦. ಅಂಗ್ಯೆಯಾಗ ಅರುಗಿಸಿ ಮುಂಗ್ಯೆಯಾಗ ಮೂರ ಗಿಸಿ

ಪಲ್ಲಕ್ಯಾಗ ಕುತ್ರೆ, ಪಗಡಿ ಆಡ್ತಾರೆ

೧೧. ಅಣೆದ ಬಂಗಾರ ಪೂಣೆದ ಪತ್ತಾರ

ಸಂಕೇಶ್ವರದಾಗ ಕುತ್ರೆ ವಂಕಿ ಮಾಡಸ್ತಾರ ———

೧೨. ಅಜಗಲ್ಲ, ಜೂಜಗಲ್ಲ, ಪಂಚಗಲ್ಲ, ಪಗಡಿಗಲ್ಲ, ಸಿರುಳ, ಶಿರಟಿ

ಪಂದ್ಯಾಳ, ನವಲಗುಂಜ, ಚಿಕನೂರ, ಪ್ಯಾಟಾಗ ಕುತ್ರ ಚಕ್ಕಾ ... ಆಡ್ತಾರ

೧೩. ಉಂಡು, ತಿಂದು, ಹೇಳುವೇನು ತಂದೆ ತಾಯಿ ಹೆಸರು

ಉಟ್ಟು, ತೊಟ್ಟು ಹೇಳುವೆನು ಅಣ್ಣ ತಮ್ಮಂದಿರ ಹೆಸರು

ಜನ್ಮ ಜನ್ಮಾಂತರ ಹೇಳುವೆನು ...... ಹೆಸರು

೧೪. ದಾರಿ ಎರಿದು ಕೊಟ್ಟ ಕೂಡಲೆ ದೂರವಾದರು ತಾಯಿ ತಂದೆ

.........ರ ಹೆಸರು ಹೇಳತೀನಿ ನಿಮ್ಮ ಮುಂದೆ

೧೫. ಗಾಂಧೀಜಿಯವರು ಬೇಡುವುದು ಒಕ್ಕಟ್ಟು

ನಾಗರೀಕರು ಬೇಡುವುದು ಉಪ್ಪಿಟ್ಟು

.............ರ ಹೆಸರು ಹೇಳತೀನಿ ಒಪ್ಪಿಟ್ಟು

೧೬. ಕಷ್ಟದಲ್ಲಿ ಕಲ್ಲಾದೆ, ಬೆಟ್ಟದಲ್ಲಿ ಹುಲ್ಲಾದೆ, ಮನೆಗೆ ಮಲ್ಲಿಗೆಯಾದೆ

............ರ ಮನ ಮೆಚ್ಚಿದ ಮಡದಿಯಾದೆ

೧೭. ಜಗತ್ತಿನಲ್ಲಿರೋದು ವಿಜ್ಞಾನದ ರಾಕೆಟು

.......... ರ ಕಿಸೆಯಲ್ಲಿ ಹಾಕುವೇನು ವರದಕ್ಷಿಣೆ ಪಾಕೀಟು

೧೮. ಕಾಶಿ ಕ್ಷೇತ್ರ, ಗಂಗಾ ಪಾತ್ರ, ವಿಶ್ವನಾಥನ ಸ್ತೋತ್ರ ಮಾಡುವರು ಜನ್ಮ ಪವಿತ್ರ

..............ರು ನನ್ನ ಕೊರಳಿಗೆ ಕಟ್ಟಿದ್ದು ಮಂಗಳ ಸೂತ್ರ

೧೯. ಎಲಿ ತೋಟದಾಗ ಗಾಳಿ ಬಿಟ್ಟೈತಿ ತಣ್ಣಗ

..........ರು ಬಿಡಬಾರ ನನ್ನ ಸೆರಗ

೨೦. ಆಕಾಶದಲ್ಲಿ ಹೊಳೆಯುವುದು ನಕ್ಷತ್ರ, ಬೀಗತನದಲ್ಲಿ ವಿಚಾರಿಸುವುದು

ಕುಲಗೋತ್ರ ನನಗೆ ............ರು ಶುಭಮೂರ್ತದಲ್ಲಿ ಕಟ್ಟಿದ್ದು ಮಂಗಳ ಸೂತ್ರ

೨೧. ಗಾಂಧೀಜಿಯವರು ಹೇಳಿದ್ದು ಶಾಂತಿ, ಸುಭಾಸ ಚಂದ್ರ ಭೋಸ

ಮಾಡಿದ್ದು ಕ್ರಾಂತಿ ........... ರಿಗೆ ಬೇಕು ಈಗ ವಿಶ್ರಾಂತಿ

೨೨. ಶ್ರೀ ಕೃಷ್ಣ ಕೊಳನೂದಿದ್ದು ಬೆಳಗಿನ ಹೊತ್ತಿನಲ್ಲಿ ...........

ಹೆಸರು ಹೇಳುವನು ಮುತ್ತೈದೆಯರ ಗುಂಪಿನಲ್ಲಿ.

೨೩. ಲಿಂಗವಿದ್ದರೆ ಪೂಜೆ ಚೆಂದ, ಹೂವು ಇದ್ದರೆ ತೋಟ ಚೆಂದ .........

ಕಟ್ಟಿದ ಮಂಗಳ ಸೂತ್ರವು ನನ್ನ ಕೊರಳಿಗೆ ಬಲು ಚೆಂದ

೨೪. ದೇವರು ಕೊಟ್ಟ ವರವನ್ನು ಗುರುವು ಕೊಟ್ಟ ವಿದ್ಯೆಯನ್ನು ತಂದೆ

ಕೊಟ್ಟ ಭಾಗ್ಯವನ್ನು, ತಾಯಿ ಕೊಟ್ಟ ಜನ್ಮವನ್ನು ನೀ ಇಟ್ಟ ಪ್ರೀತಿಯನ್ನು

ಎಂದಿಗೂ ಮರೆಯಲಾರೆ................

೨೫. ಸ್ವಾತಿ ಮಳೆಗಾಗಿ ಕಾಯುತ್ತಿರುವ ಸಿಂಪಿಯಂತೆ ಸೂರ್ಯೋದಯಕ್ಕೆ

ಕಾಯುತ್ತಿರುವ ಕಮಲದಂತೆ ವಸಂತ ಋತುವಿಗಾಗಿ ಕಾಯುತ್ತಿರುವ

ಕೋಗಿಲೆಯಂತೆ ನಾನು ನಿನ್ನ ಪತ್ರದ ದಾರಿ ಕಾಯುತ್ತೇನೆ.

೨೬. ವನಕ್ಕೆ ಗಿಡಗಳು ಚಂದ, ಬಳ್ಳಿ ವೃಕ್ಷಕ್ಕೆ ಚೆಂದ, ಶೀಲ ನಾರಿಗೆ ಚೆಂದ ತಾಳ

ಹಾಡಿಗೆ ಚೆಂದ ನಾ ಚಂದ ನಮ್ಮ .....................ರಿಗೆ ॥

೨೭. ಚೆಂದದಿ ಹರಿಯುವ ತುಂಗೆಯ ನೋಟ । ಹರಿಹರೇಶ್ವರ ನೋಟಕ್ಕೆ

ಬಲು ಮಾಟ ........ ಹೆಸರು ಹೇಳುವನು ನಿಲ್ಲಿಸಿರಿ ನಿಮ್ಮ ಹುಡುಗಾಟ

೨೮. ರಘುಕುಲಕೆ ಶ್ರೀರಾಮ, ಯದು ಕುಲಕೆ ಘನಶ್ಯಾಮ, ಪರ್ವತ ರಾಜನ ಮಗಳು

ಪಾರ್ವತಿಯನ್ನು ಮದುವೆಯಾದವನು ಪರಮೇಶ್ವರ ನನಗೆ .......ಪಾದವೇ

ಕಾಶೀ ರಾಮೇಶ್ವರ

೨೯. ಸೂರ್ಯ-ಚಂದ್ರನಿಂದಲೇ ಲೋಕಕ್ಕೆ ಆರೋಗ್ಯ......... ರಿಂದಲೇ ಸಕಲ

ಸೌಭಾಗ್ಯ

೩೦. ರೂಪದಲ್ಲಿ ಮನ್ಮಥರು, ವಿನಯದಲ್ಲಿ ಶೀಲರು, ದಯಾ ಗುಣದಲ್ಲಿ ತೀರ್ಥರು........

................ ನನ್ನ ಪ್ರೇಮದ ಮಂದಿರದ ಸಂಭಾವಿತರು

೩೧. ಅಡಕಿ ಅಂಬೋರಾ, ಬಾಟಲಿ ಶಂಬೋರ

ಅಥಣಿ ಊರಾಗ ಒನ್ನೆ ನಂಬರ ..........

೩೨. ಗಣೇಶನು ಹೊಳೆಯಲಿ ಬೀಳುವಾಗ ಚಂದ್ರ ನೋಡಿ ನಕ್ಕ

............ಹೆಸರು ಹೇಳತೀನಿ ............ ಅಕ್ಕ

೩೩. ನಾನು ಕಲಿತಿದ್ದು ಕನ್ನಡ ಶಾಲೆ

ಮುತ್ತೈದೆಯರ ಕಿವಿಯಲ್ಲಿರುವುದು ಮುತ್ತಿನ ವಾಲೆ

............... ರಿಗೆ ಬರೆಯುವೆನು ನಾನು ಪ್ರೇಮದ ಓಲೆ

೩೪. ವಸಂತ ಋತುವಿನಲ್ಲಿ ಚೆನ್ನಾಗಿ ಚಿಗುರುವುದು ಮಾವಿನ ಮಗಳು

................ ರ ಹೆಸರ ಹೇಳತಿನರಿ ............... ಜುಗುಳು

೩೫. ಗಾಂಧೀಜಿಯವರು ಉಡುವುದು ಮೂರು ಮಳ ಪಂಚೆ

ನಾವು ನಡೆಯುವುದು ಅತ್ತಿ ಮಾವಂದಿರಗೆ ಅಂಜಿ

...............ರ ಹೆಸರು ಹೇಳತಿನರಿ ಮರುಸಂಜೆ

೩೬.ವಿಘ್ನೇಶ್ವರನನ್ನು ಪೂ ಮಾಡುವುದು ವಿಘ್ನ ವಿನಾಶಕ್ಕಾಗಿ

ಸರಸ್ವತಿಗೆ ಪೂಜೆ ಮಾಡುವುದು ವಿದ್ಯೆಗಾಗಿ, ಲಕ್ಷ್ಮೀ ಪೂಜೆ ಮಾಡುವರು

ಭಾಗ್ಯಕ್ಕಾಗಿ ಪತಿದೇವರ ಪೂಜೆ ಮಾಡುವುದು ಮಾಂಗಲ್ಯ ಭಾಗ್ಯಕ್ಕಾಗಿ ..........

೩೭. ಹಣೆಗೆ ಕುಂಕುಮ ಶೋಭೆ, ಕಣ್ಣಿಗೆ ಕಾಡಿಗೆ ಶೊಭೆ, ಪದಕ ಕೊರಳಿಗೆ ಶೋಭೆ

ನಾನು ನಮ್ಮ .......... ರಿಗೆ ಶೋಭೆ.

೩೮. ನೀರು ಎರೆದು ಗಿಡ ಬೆಳೆಯಿತು

ಊರ ಬೆಳೆಯಿತು

ಧಾರೆ ಎರೆದು ಲಗ್ನ ವಾಯಿತು ......... ಕೈ ಹಿಡಿದು ನನ್ನ

ಬಾಳು ಪವಿತ್ರವಾಯಿತು.

೩೯. ಈಶ್ವರನಿಗೆ ಧರಿಸುವುದು ಮೂರು ದಳದ ಪತ್ರಿ .......... ಹೆಸರು

ಹೇಳುವೆ ನಾ................. ರ ಪುತ್ರಿ

೪೦. ಬಸವಣ್ಣನವರು ಮಾಡಿದ್ದು ಧರ್ಮೋದ್ಧಾರ, ಗಾಂಧೀಜಿ ಮಾಡಿದ್ದು

ಸಮಾಜೋದ್ಧಾರ ............. ಮಾಡಿದರು ನನ್ನ ಉದ್ಧಾರ

೪೧. ಮಗು ಬೆಳೆದು ಮಾನವನಾಗಲು ಉತ್ತಮ ತಂದೆ ತಾಯಿ ಬೇಕು

ಜನ ಬೆಳೆದು ಜನಾಂಗವಾಗಲು ಒಳ್ಳೆಯ ನಾಗರಿಕತೆ ಬೇಕು .........

ಕೀರ್ತಿಶಾಲಿಯಾಗಲು ಗುರು-ಹಿರಿಯರ ಆಶೀರ್ವಾದ ಬೇಕು.

೪೨. ಶಿವನ ಜಡೆಯಲ್ಲಿರುವಳು ಗಂಗಾ, ಶಿವಭಕ್ತರ ಕೊರಳಲ್ಲಿರುವುದು

ಲಿಂಗ............ ಮಾಡುವುದು ಸತ್ಯ ವಂತರ ಸಂಗ

೪೩. ಆಕಾಶದಲ್ಲಿರುವುದು ನಕ್ಷತ್ರಗಳ ರಾಶಿ ಹಿಂದುಗಳಿಗೆ ಕಾಶೀ

ನಾನಾದೆ ........... ರ ಚರಣದಾಸಿ

೪೪. ಶ್ರೀ ಕೃಷ್ಣ ಹುಟ್ಟಿದ್ದು ಗೋಕುಲದಲ್ಲಿ, ಬೆಳೆದದ್ದು ಮಥುರೆಯಲ್ಲಿ .........

ಹೆಸರು ಹೇಳುವೆನು ಮದುವೆ ಮಂಟಪದಲ್ಲಿ

೪೫. ಸಿರಸಂಗಿಯ ಲಿಂಗರಾಜರು ಮಾಡಿದರು ಅನ್ನದಾನ, ನನ್ನ ತವರೂರವರು

ಮಾಡಿದರು ...................... ಕನ್ಯಾದಾನ

೪೬. ಹಾದ್ಯಾಗ ಇರುವುದು ಹಾಲಕ್ಕಿ ........ಕೊಡುವೆನು ಚಹ ಅವಲಕ್ಕಿ

೪೭. ಸೀತಾ ಸ್ವಯಂವರದಲ್ಲಿ ಶ್ರೀರಾಮನು ಮುರಿದದ್ದು ಧನಸ್ಸು ........ ಹೆಸರು

ಹೇಳುವನು ಇತ್ತ ಇಡಿರಿ ನಿಮ್ಮ ಮನಸ್ಸು

೪೮. ಶಿವನಿಗೆ ಗಂಗೆ ಬೇಕು, ಶೈವರಿಗೆ ಲಿಂಗ ಬೇಕು.

ನಮ್ಮ .....................ರ ಬೆರಳಿಗೆ ಉಂಗುರ ಬೇಕು

೪೯. ಆಶನಕ್ಕೆ ಹರಿಯದೆ, ವ್ಯಸನಕ್ಕೆ ಕುಡಿಯದೆ, ಆಸನಾಕ್ಷ ನುಡಿಗಳನ್ನು

ಹಸನಾಗಿ ನೆನೆಯುತ್ತ ಸಿಶೀಲರಾಗಿದ್ದಾರೆ, ನಮ್ಮ .............. ವರು.

೫೦. ಪರರನ್ನು ನಿಂದಿಸುವುದಿಲ್ಲ, ಗುರುವಿಲ್ಲದೆ ನಡೆಯುವುದಿಲ್ಲ, ಪರನಾರಿಯರನ್ನು

ಕಣ್ಣೆತ್ತಿ ನೋಡುವುದಿಲ್ಲ ನಮ್ಮ .................ವರು.

೫೧. ವಿಚಾರಗೇಡಿಗಳ ಸಭೆಗೆ ಹೋಗಬಾರದು. ಆಚಾರ ಹೀನರ ಮನೆಯಲ್ಲಿ

ಊಟ ಮಾಡಬಾರದು, ಯೋಚಿಸಿ ಹೇಳಿದ ನಮ್ಮ .........ವರ

ಮಾತು ಮೀರಬಾರದು.

೫೨. ವಿಲಾಸಗಾರರಿಗೆ ಹಣದ ಮಹತ್ವವಿಲ್ಲ, ಆಲಸಿಗಳಿಗೆ ಮಳೆಯ ಮಹತ್ವವಿಲ್ಲ

ಕೆಲಸ ಮಾಡುವಾಗ ನಮ್ಮ ...............ರಿಗೆ ಶ್ರಮದ ಮಹತ್ವವಿಲ್ಲ.

೫೩. ಬಲ್ಲವರಿಗೆ ಬಿಲ್ಲಾಗಿ ಮಣಿಯುತಾರೆ. ಎಲ್ಲರಿಗೂ ಬೇಕಾಗುತ್ತಾರೆ, ಸಲ್ಲುವ

ವಸ್ತ್ರಾಭರಣಗಳಿಂದ ಎಲ್ಲರನ್ನು ಸತ್ಕರಿಸುತ್ತಾರೆ ...............ಅವರು.

೫೪. ವಂಕಿ ತೋಳಿಗೆ ಚೆಂದ, ಬಿಂಕು ಬೀಗುವ ಬೀಗರಿಗೆ ಚೆಂದ, ನಮ್ಮ .........

ವರಿಗೆ ನಾನು ಹಚ್ಚುವ ಕುಂಕುಮ ಚೆಂದ

೫೫. ಗುಡಿ ಗುಂಡಾರಗಳ ಊರು, ಲಕ್ಕುಂಡಿ ಬೆಳಗಾವಿ ಜಿಲ್ಲೆಯಲ್ಲಿ ಇರುವುದು

ಗೋಕಾಕ .......... ರಿಗೆ ಪ್ರೀತಿಯಿಂದ ಕೊಡುವನು ರವೆ ಉಚಿಡಿ

೫೬. ಸಖಿಯರೆಲ್ಲ ಹೋದರು, ಶಕುಂತಳೆಯ ಹಿಂದೆ ....... ರ ಹೆಸರು
ಹೇಳುವೆನು ತಮ್ಮೆಲ್ಲರ ಮುಂದೆ.

೫೭. ಸಿದ್ಧಾರೂಢರ ಮಠದಲ್ಲಿರುವುದು ಶಾಂತಿ.......ರ ಮುಖದ ಮೇಲಿರುವುದು ಕಾಂತಿ

೫೮. ಆನೆಗೆ ಅಂಕುಶ ಮೇಲು, ಸೂರ್ಯನಿಗೆ ಕಿರಣ ಮೇಲು, ಭೂಮಿಗೆ ಆಕಾಶ ಮೇಲು
ನನಗೆ ................ಪಾದಸೇವೆಯೇ ಮೇಲು.

೫೯. ಹುಬ್ಬಳ್ಳಿಯಲ್ಲಿರುವುದು ಮೂರುಸಾವಿರ ಮಠ, ಧಾರವಾಡದಲ್ಲಿರುವುದು ಮುರುಘಾ ಮಠ
ನಮ್ಮವರು ಮಾಡುವರು ಬಹಳ ಹಠ.

೬೦. ಕೊಲ್ಲಾಪುರ ಮಹಾಲಕ್ಷ್ಮೀ ಮಂದಿರದಲ್ಲಿರುವುದು ಬಂಗಾರ ತೋರಣ..........
ಹೆಸರು ಹೇಳುವೆನು ಆರತಿ ಮಾಡಿದ ಕಾರಣ.

೬೧. ಮಳೆ ಬಂದರೆ ಆಗುವುದು ಹಸಿ, ಪೆನ್ನಿನಲ್ಲಿರುವುದು ಮಸಿ ......... ಹೆಸರು
ಹೇಳುವೆನು ........... ರ ಸೊಸಿ.

೬೨. ಮಹಾತ್ಮ ಗಾಂಧಿ ಅವರು ಭಾರತದ ಪುಣ್ಯಮೂರ್ತಿ ನನ್ನ ತವರೂರವರು .......
ರಿಗೆ ಕೊಟ್ಟು ಪಡೆದರು ಕೀರ್ತಿ.

೬೩.ಹಣೆಬರಹ ತಿದ್ದೋದು ಹಡೆದವ್ವನಿಗೂ ಆಗದು, ಗುಣಗೇಡಿಗೆ ತಿದ್ದೋದು
ಬ್ರಹ್ಮನಿಗೂ ಆಗದು, ಒಣಹಾಲಿನ ನಮ್ಮ .......... ರನ್ನು ತಿದ್ದುವುದು ಯಾರಿಂದಲೂ ಆಗದು.

೬೪. ವಿಘ್ನೇಶ್ವರನ ಪೂಜೆ ಮಾಡುವುದು ವಿಘ್ನನಾಶಕ್ಕಾಗಿ ನನ್ನ ಪತಿ.......ಯವರ ಪೂಜೆ
ಮಾಡುವುದು ಮಾಂಗಲ್ಯ ಭಾಗ್ಯಕ್ಕಾಗಿ.

೬೫. ಪಾರ್ವತಿಗೆ ಶಿವನು ಶೋಭೆ,ಹಸಿರು ಭೂಮಿಗೆ ಶೋಭೆ ....... ಯವರಿಗೆ ನಾನು ಶೋಭೆ.

೬೬.ಲಕ್ಷ್ಮೀ ಇರುವುದು ಕಮಲದಲ್ಲಿ, ಕಮಲ ಇರುವುದು ಸರೋವರದಲ್ಲಿ ..........
ತೇಜವಿರುವುದು ನನ್ನ ಕುಂಕುಮದಲ್ಲಿ.

೬೭.ನೀರಿನಿಂದ ಗಿಡ ಬೆಳೆಯಿತು. ಜನರಿಂದ ಊರು ಬೆಳೆಯಿತು. ಧಾರೆಯಿಂದ ಲಗ್ನವಾಯಿತು
..................ರಿಂದ ಜನ್ಮ ಪಾವನವಾಯಿತು.

೬೮.ಬಸವಣ್ಣನವರು ಮಾಡಿದ್ದು ಧರ್ಮೋದ್ಧಾರ, ಗಾಂಧೀಜಿಯವರು ಮಾಡಿದ್ದು
ಸಮಾಜೋದ್ಧಾರ ............. ರಿಂದ ನನ್ನ ಬಾಳಿನ ಉದ್ಧಾರ.

೬೯. ವಿದ್ಯಾರಣ್ಯರಿಂದ ವಿಜಯನಗರ ಸಾಮ್ರಾಜ್ಯ ...........ರಿಂದ ನನ್ನ ಬಾಳಿನ ಸ್ವರಾಜ್ಯ

೭೦. ರಘುಕುಲಕ್ಕೆ ಶ್ರೀರಾಮ, ಯದುಕುಲಕ್ಕೆ ಘನಶಾಮ ನಾ ಹೇಳುವೆ ....... ರ ಪ್ರಿಯ ನಾಮ

೭೧. ಆಕಾಶದಲ್ಲಿ ಹೊಳೆಯುವುದು ನಕ್ಷತ್ರ, ಬೀಗತನದಲ್ಲಿ ವಿಚಾರಿಸುವುದು ಕುಲಗೋತ್ರ ........
ರು ಕಟ್ಟಿದರು ನನಗೆ ಮಂಗಳ ಸೂತ್ರ

೭೨. ಪರಮೇಶ್ವರನ ಪತ್ನಿ ಪಾರ್ವತಿ, ಬ್ರಹ್ಮನ ಸತಿ ಸರಸ್ವತಿ ...............ರೇ ನನಗಾಗಬೇಕು ಜನ್ಮ ಜನ್ಮಕೂ ನನ್ನ ಪತಿ.

೭೩. ಬಸವಣ್ಣನವರು ಹುಟ್ಟಿದ್ದು ಬಾಗೇವಾಡಿಯಲ್ಲಿ. ಅಕ್ಕಮಹಾದೇವಿ ಹುಟ್ಟಿದ್ದು ಉಡುತಡಿಯಲ್ಲಿ .......... ಹೆಸರು ಹೇಳುವೆನು ಆರತಿಯ ಸಮಯದಲ್ಲಿ.

೭೪. ಸಿರಸಂಗಿಯ ಲಿಂಗರಾಜರು ಮಾಡಿದರು ಅನ್ನದಾನ, ಗುರುಗಳು ಮಾಡಿದರು ವಿದ್ಯಾದಾನ, ನನ್ನ ತವರಿನವರು ....................ರಿಗೆ ಕನ್ಯಾದಾನ.

೭೫. ಲಿಂಗಾಯತರು ಹಾಕುವುದು ಶಿವದಾರ, ಬ್ರಾಹ್ಮಣರು ಹಾಕುವುದು ಜನಿವಾರ ನಮ್ಮ ..........ರು ಇರುವರು ಹವಲ್ದಾರ.

೭೬.ಬ್ರಹ್ಮನ ಮಡದಿ ಸರಸ್ವತಿ, ಹರಿಶ್ಚಂದ್ರನ ಮಡದಿ ಚಂದ್ರಮತಿ, ಪಾಂಡವರ ಮಡದಿ ದ್ರೌಪತಿ, ಸತ್ಯವಾನನ ಮಡದಿ ಸಾವಿತ್ರಿ .......ರಿಗೆ ನಾನಾದೇ ನಲುಮೆಯ ಸತಿ.

೭೭. ಲಿಂಗಕ್ಕೆ ಲಿಂಗ ಶ್ರೇಷ್ಠ
ಲಿಂಗಕ್ಕೆ ಜಂಗಮ ಶ್ರೇಷ್ಠ
......... ರು ನನಗೆ ಶ್ರೇಷ್ಠ

೭೮. ಕೈಯಾಗ ಹತ್ತರ ನೊಟ
ಕಾಲಾಗ ಕಪ್ಪರ ಬೂಟ
ಕಾರ್‌ನಾಗ ಕುತ್ರ ಕರ್‍ಯಾಕ್ ಬರ್ತಾನ..........

೭೯.ಶಿವಶಿವ ನಮ್ಮ ಅತ್ತಿ
ಶಿವಬತ್ತಿ ನಮ್ಮ ಮಾವ
ಮಜಕೂರ ನಮ್ಮ ಮೈದ್ನ
ನಿಜಕೂರ ನಮ್ಮ ನೆಗ್ಯಾನಿ
ಸತ್ಯಭಾಮಾ ನಮ್ಮ ಸವತಿ
ರುಕ್ಮಣಿ ನಮ್ಮ ಗೆಳತಿ
ಪಾತರಗಿತ್ತಿ ಕರಕೊಂಡ ಪರಾಳ ಮಾಡತಾನ..........

೮೦. ವನವನನಾರಿ
ವನದಾಗ ಇರುವುದು ಗರುಡ ಪಕ್ಷಿ
ಅವ್ವ ಇಂತವರ ಮಗಳ ಬಂದಿನಿ
ಕಟ್ಟಿನ ಗೌರಿ ಬಂದಿನಿ
ಕಮಲದ ಹೂವ ತಂದೀನಿ
ಎಡಕ್ಕೆ ಎಣ್ಣೆಯ ದೀವಿಗೆ

ಬಲಕ್ಕೆ ತುಪ್ಪದ ದೀವಿಗೆ

ಶಿವಪೂಜೆ ಮಡ್ಕೊತ್ತಾರ............

೮೧. ದೇವದೇವರದವರು

ದೇವಲೋಕದವರು

೫ ಮಂದಿ ಮುತ್ತೈದೆಯರು

ಸೆರಗ ಹಿಡಿದು ಕೇಳುವಾಗ

ನಮ್ಮ ರಾಯರ ಹೆಸರು ನಾವೇನು ಬಲ್ಲೇವು

೮೨. ಹಡೆದಂತ ತಾಯಿ ಹಿಡಿದುಕೊಡುವಾಗ

ಬ್ರಹ್ಮದೇವರು ಬ್ರಹ್ಮಗಂಟು ಹಾಕಿ

ಮಡಿಯನ್ನು ಧರಿಸಿ ...........ದವರ ಹೆಸರು ಹೇಳುತ್ತೇನೆ ಮಂಗಲಧರಿಸಿ

೮೩. ಅಕ್ಕಮಹಾದೇವಿಯು ಚಿಕ್ಕಂದಿನಲ್ಲಿ ಕಳೆದದ್ದು ವೈರಾಗ್ಯ

..........ರಿಂದ ನನಗೆ ಸಕಲ ಸೌಭಾಗ್ಯ

೮೪. ಆಕಾಶಕ್ಕೆ ಚಂದಿರ ಭೂಷಣ

ನಮ್ಮವರು ನನಗೆ ಭೂಷಣ

೮೫. ಆರತಿಯ ಮೇಲೆ ಇರುವುದು ತಂದೆ-ತಾಯಿಯರ ಹೆಸರು

ಬಿಂದಿಗೆಯ ಮೇಲೆ ಇರುವುದು ಅತ್ತೆ-ಮಾವಂದಿರ ಹೆಸರು

ಮಾಂಗಲ್ಯದ ಮೇಲೆ ಇರುವುದು ...............

೮೬. ಹೇಳಲಿಕೆ ಹೆಸರು ಚಂದ

ಕೇಳಲಿಕೆ ಕಥೆ ಚಂದ

ರಾಮನಿಗೆ ಸೀತೆ ಚೆಂದ

ನಮ್ಮವರಿಗೆ ನಾನೇ ಚೆಂದ

೮೭. ಸತ್ತಗಂಡನ ಮತ್ತೆ ಪಡೆದಳು ಸತ್ಯಸಾವಿತ್ರಿ

.........ರವರ ಹೆಸರು ಹೇಳುವೆನು ........ ರವರ ಪುತ್ರಿ

೮೮. ಅಂಗೈಯಾಗ ಅರಗಿಣಿ

ಮುಂಗೈಯಾಗ ಮೂರಗಿಣಿ

ಪಲ್ಲಕ್ಕಿಯಾಗ ಕುಂತ ಪಗಡಿಯಾಡುತ್ತಾನ

೮೯. ಅಡಕಿ ತಿಂದಾವ್ರ ಖಡತ ಆಗ್ಯಾರ

ಲವಂಗ ತಿಂದಾವ್ರ ಲಾಲ್ ಆಗ್ಯಾರ

ಚೌಕಿ ಮನಿಮ್ಯಾಗ ಕುತ್ತ ಚೌಕಶಿಮಾಡ್ತಾನ

೯೦. ಸೆರಗಿನ ಸಿಂಬಿ ಅರಗಿನ ಕೊಡ

ದಾರಿ ಬಿಡ ಅಂದ್ರ ಮಾರಿ ನೋಡ್ತಾನ...............

೯೧. ಹತ್ತು ಬಟ್ಟಿಗಿ ಹತ್ತುಂಗರ

ನಡುವಿನ ಬಟ್ಟೆಗೆ ಸುತ್ತುಂಗರ

ಹತ್ತ ಮಂದ್ಯಾಗ ಕುತ್ತ ನ್ಯಾಯ ಹರಸತಾನ ..........

೯೨. ಸರಸ್ವತಿ ಪೂಜೆ ಮಾಡುವುದು ವಿದ್ಯೆಗಾಗಿ

ಲಕ್ಷ್ಮೀ ಪೂಜೆ ಮಾಡುವುದು ಭಾಗ್ಯಕ್ಕಾಗಿ

ರಾಯರ ಪೂಜೆ ಮಾಡುವುದು ಪತಿವ್ರತಾಧರ್ಮಕ್ಕಾಗಿ

೯೩. ದೀಪ ಉರಿಯುವುದು ಎಣ್ಣೆ ಇರುವ ತನಕ

........... ರವರ ಹೆಸರು ಹೇಳುತ್ತೇನೆ

ನನ್ನ ಉಸಿರು ಇರುವ ತನಕ

೯೪. ಬೆಳ್ಳಿ ಟೇಬ; ಬಂಗಾರ ಕುರ್ಚಿ

ಬಂಗ್ಲೆದಾಗ ಕುತ್ತ ಇಂಗ್ಲೀಷ ಓದುತ್ತಾರ...........

೯೫. ಸೈನ ಅಂಗಿ ತೊಟ್ಟಾರು

ಸಡಕಿನ ಹಾದಿ ಹಿಡಿದಾರು

ಭಕ್ತಿಯಿಂದ ಬಸದಿಗೆ ಹೋಗ್ತಾರ ..............

೯೬.ಬಡತನವಿರಲಿ, ಭಾಗ್ಯವಿರಲಿ

ಕುಂಕುಮಕ್ಕೆ ಸೌಭಾಗ್ಯವಿರಲಿ

......... ಕಟ್ಟಿದ ತಾಳಿ ಕಡೆತನಕವಿರಲಿ

೯೭. ಸರೋವರದಲ್ಲಿ ಶಂಕರನು ಶಿಶುವಾಗಿ ಬೆಳೆದದ್ದು

ಪಾರ್ವತಿಯ ಸಲುವಾಗಿ

ತಂದೆಯವರ ಮನೆಯಲ್ಲಿ ಬೆಳೆದದ್ದು

..................... ರವರ ಸಲುವಾಗಿ

೯೮. ಕಷ್ಟ ಬಂದರೆ ಮನಸ್ಸು ಕಲ್ಲು ಮಾಡಬೇಕು

ಬೆಟ್ಟ ಬಂದರೆ ಮನಸು ಬೆಲ್ಲವಾಗಬೇಕು

ಮನದೊಳಗೆ ಮನಸ್ಸು ಮಲ್ಲಿಗೆಯಾಗಬೇಕು

.......... ರವರ ಸೇವೆಗೆ ಮನಸ್ಸು ಹೊಂದಿರಬೇಕು

೯೯.ಆಲದ ಎಲೆಯ ಮೇಲೆ ಶ್ರೀ ಕೃಷ್ಣ ಮಲಗಿದ್ದು ಬಲು ಚಮತ್ಕಾರ

ರಾಯರ ಹೆಸರು ಹೇಳುವೆನು ಎಲ್ಲರಿಗೂ ನಮಸ್ಕಾರ

೧೦೦. ಅರಗಿನಕೊಡ, ಸೆರಗಿನ ಸಿಂಬೆ

ಶೀಲವಂತರ ಮಗಳು ಸೀತಾದೇವಿ

ದಾರಿ ಬಿಡ ಅಂದ್ರ ಮಾರಿ ನೋಡ್ತಾನ

೧೦೧. ಕೋಗಿಲೆ ಕೂಗುವುದು ಕುಹೂ ಕುಹೂ

ಮಗು ಕೂಗುವುದು ಅಮ್ಮಾ ಎಂದು

ರಾಯರು ಕೂಗುವುದು ..................ಎಂದು

೧೦೨. ಕಡಲಿರುವುದು ನೀರಿಗಾಗಿ

ಕವಿ ಇರುವುದು ಕವಿತೆಗಾಗಿ

ನಾನಿರುವುದು ನಮ್ಮ ಯಜಮಾನರಿಗಾಗಿ

೧೦೩. ಹಬೆಯ ಗುಣ ಹಾವು ಬಲ್ಲದು

ವೇಳೆಯ ಗುಣ ಕೋಳಿ ಬಲ್ಲದು

ಸಕ್ಕರೆ ಗುಣ ಇರುವೆ ಬಲ್ಲದು

೧೦೪. ಕಬ್ಬು ಬೆಳೆಯುವುದು ಕರಿಮಣ್ಣಿನಲ್ಲಿ

ವಿದ್ಯೆ ಇರುವುದು ಬುದ್ಧಿವಂತರಲ್ಲಿ

ನಿದ್ದೆ ಇರುವುದು ದರಿದ್ರರಲ್ಲಿ

೧೦೫. ಹಾವಿಗೆಹೆಡೆ ಚೆಂದ

ಮೂಗಿಗೆ ಮೂಗುತಿ ಚೆಂದ

ನಮ್ಮ ಕಣ್ಣಪ್ಪನ ಭಕ್ತಿಯೇ ಚೆಂದ

೧೦೬. ರಾಶಿ ಮೊರದಲ್ಲಿ ಶ್ರೀ ಕೃಷ್ಣದೇವರು ಕದ್ದಿದ್ದು ಜೆಣ್ಣೆ

.................. ಅವರು ಹಚ್ಚಿಕೊಳ್ಳುವುದು ಸುವ್ವಾಸದೆಣ್ಣೆ

೧೦೭. ಮಿರಿಮಿರಿ ಮಿಂಚುವುದು ನಾಗರ ಹೆಡಿ

ನಾವು ಉಟ್ಟಿದ್ದು ಪೀತಾಂಬರ ಮಡಿ

........... ಅವರ ಕಾಂಗ್ರೆಸ್ಸಿಗರ ನುಡಿ

೧೦೮. ಗುಂಡ ಹೂ ಗುಲಾಲ ಹೂ ಚೆಂಡ ಹೂ ಚಲ್ಲಾಟ ಹೂ

ಗಂಡ ಮಗನ ಬೇಡಿ ಚೆಂಡ ಬೆತ್ತಾಸ ಹಾರಿಸರದೇವರಗಿ .........

೧೦೯. ಅರಿಶಿಣ ಪತ್ತಲ ಅರವತ್ತ ನಿರಿಗಿ ಅರಸನ ಮಗಳ

ಆರತಿ ತೊಗೊಂಡು ಬರತಾಳ ದಾರಿ ಬಿಡಂದರ ಮಾರಿ ನೋಡತಾಳ

೧೧೦. ತೆಳ್ಳನರೊಟ್ಟಿ ಬೆಳ್ಳನ್ನ ಮಸರ, ನೆಳ್ಳಾಗ ಕುತ್ತ ನ್ಯಾರಿ ಮಾಡತಾರ..........

೧೧೧. ಬಟಾಟಿ ಬಜಿ, ಸಣ್ಣಕ್ಕಿ ಪಾಣಿ, ರಾಣಿ ...................... ಚೈನಿ

೧೧೨. ಹತ್ತು ಬಳ್ಳಾಗ ಹತ್ತುಂಗರ ನಡುವಿನ ಬಳ್ಳಾಗ ಸುತ್ತುಂಗರ

ಹತ್ತ ಮಂದ್ಯಾಗ ಕುತ್ತ ಹೌಂದ ಅನಸಗೊತಾರ

೧೧೩. ಹಣೆಗೆ ಕುಂಕುಮ ಚೆಂದ

ಮೂಗಿಗೆ ಮೂಗುತಿ ಚೆಂದ

ಕೊರಳಿಗೆ ಮಾಂಗಲ್ಯ ಚೆಂದ

ಕೈಗೆ ಬಳೆಯೇ ಚೆಂದ

ಕಾಲಿಗೆ ಕಾಲುಂಗುರ ಚೆಂದ

ನಮ್ಮ ರಾಯರ ಮಾತಿಗೆ ನಾನೆ ಚೆಂದ

೧೧೪. ಹಾಲಗ ಬಳ್ಳಿಗೆ ಹಂದರವೇ ಚೆಂದ

ದ್ರಾಕ್ಷಿ ಬಳ್ಳಿಗೆ ಗೋಣೆಯೆ ಚೆಂದ

ನಮ್ಮ ರಾಯರಿಗೆ ನಾವೇ ಚೆಂದ

೧೧೫. ಅಕ್ಕಿಗೆ ಅಗಳು ಹೆಚ್ಚು

ಚಪಾತಿಗೆ ಪದರು ಹೆಚ್ಚು

ನಮ್ಮ ರಾಯರಿಗೆ ನಾವೇ ಹೆಚ್ಚು

೧೧೬. ಚೈನಂಗಿ ನೈನಹಾದಿ ಭಕ್ತಿಯಿಂದ ಬಸವೇಶ್ವರನಿಗೆ ಹೋಗುತ್ತಾರೆ.

೧೧೭. ಆಲದ ಬಲೆಯ ಮೇಲೆ ಕೃಷ್ಣ ಮಲಗಿದ್ದು ಬಲು ಚಮತ್ಕಾರ

ನಮ್ಮ ರಾಯರ ಹೆಸರು ಹೇಳುತ್ತೇವೆ, ನಿಮ್ಮೆಲ್ಲರಿಗೂ ನಮಸ್ಕಾರ

೧೧೮. ಸಾಲಗೀಡ ಸೀರೆಟೆಕಾಯಿ

ಮರಾಠಿ ಕಲಿತು ಮನಿಗೆ ಬರುತ್ತಾರೆ

೧೧೯. ಆನೆಗೆ ಇರುವುದು ಸೊಂಡೆ

ಬಾಗಿಲಿಗೆ ಇರುವುದು ಕೊಂಡೆ, ನಮ್ಮ ರಾಯರ ಕೈಯಲ್ಲಿರುವುದು ಬೇಸನ್ ಉಂಡೆ

೧೨೦. ಅಂಗೈಯಲ್ಲಿ ಅರಗಿಣಿ, ಮುಂಗೈಯಲ್ಲಿ ಮುರುಗಿಣಿ

ಪಲ್ಲಕ್ಕಿಯೊಳಗೆ ಕುಳಿತು ಮಗನನ್ನು ಆಡಿಸುತ್ತಾರೆ

೧೨೧. ರಾಮನ ಪಕ್ಕದಲ್ಲಿರುವುದು ಸೀತೆ

ಈಶ್ವರನ ಪಕ್ಕದಲ್ಲಿರುವುದು ಪಾರ್ವತಿ

ನಮ್ಮವರ ಪಕ್ಕದಲ್ಲಿರುವುದು ನಾನು

೧೨೨. ಹಿತ್ತಾಳೆ ಕೊಡದ ಮೇಲೆಯಿರುವುದು ತಂದೆ ತಾಯಿರ ಹೆಸರು

ಅರಿಶಿಣ ಸೀರೆಯ ಮೇಲಿರುವುದು ಅತ್ತೆ ಮಾವನ ಹೆಸರು

ಮಾಂಗಲ್ಯ ಸೂತ್ರದ ಮೇಲಿರುವುದು ............... ಅವರ ಹೆಸರು

೧೨೩. ಗಿಳಿಯಿರುವುದು ಪಂಜರದಲ್ಲಿ

ಪಂಜರವಿರುವುದು ಅರಮನೆಯಲ್ಲಿ

ಅರಮನೆಯಿರುವುದು ಮೈಸೂರಿನಲ್ಲಿ

.......... ಅವರು ಇರುವುದು ನಮ್ಮ ಹೃದಯದಲ್ಲಿ

೧೨೪. ಅಂಗಳಕ್ಕೆ ರಂಗೋಲಿ ಚಂದ

ಆಕಾಶಕ್ಕೆ ಚುಕ್ಕಿ ಚೆಂದ

ನಮ್ಮ ರಾಯರಿಗೆ ನಾನೇ ಚೆಂದ

೧೨೫. ಉದುರು ಉಪ್ಪಿಟ ಪದರ ಚಪಾತಿ

೧೨೬. ಕಲ್ಲು ಕಲ್ಲಾಗಿ ಬಾ, ಸಕ್ಕರೆಯಾಗಿ ಬಾ

...........ಅವರ ಮಗಳಾಗಿ ಬಾ ...............ಅವರ

ತಂಗೆಯಾಗಿ ಬಾ .................. ಅವರ ಸೊಸೆಯಾಗಿ ಬಾ

....................ಅವರ ಪತ್ನಿಯಾಗಿ ಬಾ

೧೨೭.ಒಂದೂರ ಬಂದೂರ
ಎರಡೂರ ಎಡೂರ
ಮೂರೂರ ಮುತ್ತೂರ
ನಾಕಾರ ಸಾಕುರ
ಐದೂರ ಸೈದೂರ
ಆರೂರ ಬೇರೂರ
ಏಳೂರ ಬಿಳ್ಳೂರ
ಎಂಟೂರ ಗಂಟೂರ
ಒಂಬತ್ತೂರ ತುಂಬಿದೂರ
ಹತ್ತೂರ ಕಿತ್ತೂರ

ಕಿತ್ತೂರ ಕೋಟೆ ಮೇಲೆ ನಿಂತ ಮಗನನ್ನು ಆಡಿಸುತ್ತಾರೆ

೧೨೮. ಮನಸ್ಸೆಂಬ ಮಂದಿರದಲ್ಲಿ

ಕನಸೆಂಬ ಸಾಗರದಲ್ಲಿ

ಪ್ರೀತಿಯೆಂಬ ಅಲೆಯಲ್ಲಿ

ಧ್ರುವತಾರೆ ಎಂಬ ನಕ್ಷತ್ರದಲ್ಲಿ

ಮಿನುಗುತಿಯೆ ನೀನು

೧೨೯. ಹಾಲು ಹಾಲಾದೆ ನೀರು ನೀರಾದೆ ....................... ಅವರ

ಮಗಳಾದೆ ............... ಅವರ ಸೊಸೆಯಾದೆ ..........................

ಅವರ ಪತ್ನಿಯಾದೆ

೧೩೦. ಶಿವನ ಜಡೆಯಲ್ಲಿ ಸ್ಥಿರವಾಗಿ ನಿಂತಿರುವಳು ಗಂಗೆ

........................ಅವರ ಹೆಸರು ಹೇಳುತ್ತೇನೆ ................ ಅವರ ತಂಗಿ

೧೩೧. ಶಾಲೆಯಲ್ಲಿ ಸರಸ್ವತಿ ಪುರಾಣದಲ್ಲಿ ಪಾರ್ವತಿ

ಪಲ್ಲಕ್ಕಿಯಲ್ಲಿ ಕುಳಿತು ಪಗಡೆ ಆಡುತ್ತಾರೆ..................

೧೩೨. ಹಾಗಲ ಬಳ್ಳಿಗೆ ಹಂದರ ಚೆಂದ, ದ್ರಾಕ್ಷಿ ಬಣಕ್ಕೆ ಗೊಂಚಲು ಚೆಂದ

..............ಅವರಿಗೆ ನಾವು ಚೆಂದ

೧೩೩. ಬೆಳ್ಳಾನೆ ರೊಟ್ಟಿ ಬೆಳ್ಳಾನೆ ಮಸರಾ ಕಟ್ಟಿಕೊಂಡು

ಹೋಗಂದ್ರೆ ಸೆಟಕೊಂಡು ಹೋಗತಾರ

೧೩೪. ಅಡಕಿ ತಿಂದಾವ್ರ ಕಡಕಬಾಳ, ಲಾವಂಗ ತಿಂದಾವ್ರ

ಕೆಂಪಬಾಳ ಶೀಲವಂತರ ಮಗಳ ಶೀತಾದೇವಿ

ದಾರಿ ಬೀಡಂದ್ರ ಮಾರಿ ನೋಡ್ತಾರ

೧೩೫. ಜಾಲಿಗಿಡ ಜಗ್ಗಿಹಿಡಿ, ಮುತ್ತಿನ ಕುದರಿ ಮುಂದ

ಅಣ್ಣ.................. ಮನೆಗೆ ಹೆಣ್ಣು ಕೇಳಲಿಕ್ಕೆ ಬರುತ್ತಾರೆ.

ಹೀಗೆ ಈ ಭಾಗದಲ್ಲಿ ಜನತೆಯ ಬಾಯಲ್ಲಿ ಇಂದು ಜನಪದ ಸಾಹಿತ್ಯವು ಹಚ್ಚ ಹಸುರಾಗಿ ರಾರಾಜಿಸುತ್ತಿದೆ. ಎಂತಹ ವ್ಯಕ್ತಿಗಳನ್ನಾದರೂ ಮಂತ್ರ ಮುಗ್ಧರನ್ನಾಗಿ ಮಾಡುತ್ತಾರೆ. ಏಕೆಂದರೆ ಜನಪದ ಸಾಹಿತ್ಯವು ನಮ್ಮ ಭಾರತೀಯ ಸಂಸ್ಕೃತಿಯ ಪ್ರತೀಕವೂ ಹೌದು. ನಮ್ಮ ಉದಾತ್ತ ಸಂಸ್ಕೃತಿಯನ್ನು ಭಾವೀ ಪ್ರಜೆಗಳಿಗೆ ಬೋಧಿಸುವುದರ ಜೊತೆಗೆ, ಸಂಸ್ಕೃತಿಯ ವಾಹಕವಾದ ನಮ್ಮ ಪೀಳಿಗೆಗೆ ತರಬೇತಿ ನೀಡಲು ಕೂಡಾ ಸಹಾಯಕವೆಂದು ಹೇಳಬಹುದು. ಇಂತಹ ಉತ್ತಮವಾದ ಸಾಹಿತ್ಯವನ್ನು ಸಂಸ್ಕರಿಸಿದಾಗ ಅದು ಮುಂದಿನ ಪೀಳಿಗೆಗೆ ಸುಲಭವಾಗಿ ಲಭ್ಯವಾಗಲು ಸಾಧ್ಯ, ಸಹಾಯಕ ಎಂದು ಹೇಳಬಹುದು. ಆದೆ ಜನಪದ ಸಾಹಿತ್ಯ ಇಂತಹ ಆಧುನಿಕ ಕಾಲದಲ್ಲಿ ಇಂದು ಪ್ರತಿಯೊಬ್ಬರಿಗೆ ತಲುಪಬೇಕಾಗಿದೆ.

ಒಗಟು, ಒಡಪು ವೀರಭದ್ರದೇವರ ಒಡಪುಗಳು ಸಹ ಜನಪದ ಸಾಹಿತ್ಯದ ತುಣುಕುಗಳೆಂದೇ ಕರೆಯಬಹುದು. ಏಕತಾರಿ ಪದಗಳು, ದಾಸರ ಪದ, ಶರಣರ ವಚನಗಳನ್ನು ಕೂಡ ಇಲ್ಲಿಯ ಕಲಾವಿದರು ಹಾಡಿಕೊಂಡು ಬಂದಿದ್ದಾರೆ. ಒಗಟುಗಳಲ್ಲಿ ಗೂಡಾರ್ಥ ಅಡಗಿದ್ದರೆ, ಒಡಪುಗಳಲ್ಲಿ ಪತಿ ಪತ್ನಿಯರ ಹೆಸರು ಹೇಳುತ್ತಾರೆ. ಹೀಗೆ ಒಟ್ಟಾರೆ ಜನಪದ ಕಲೆ ಮತ್ತು ಕಲಾವಿದರ ಕುರಿತು ಎಷ್ಟು ಹೇಳಿದರೂ ಕಡಿಮೆಯೇ, ಕಾರಣ ನಾನು ನನ್ನ ಅಧ್ಯಯನದ ತೆಕ್ಕೆಗೆ ತೆಗೆದುಕೊಳ್ಳುವಲ್ಲಿ ವಿಶೇಷವಾಗಿ ಬಾಹುಸಾರ ಕ್ಷತ್ರಿಯ ಸಮುದಾಯದವರ ಕಲಾವಿದರನ್ನು ಪರಿಚಯಿಸುವ ಸಣ್ಣ ಪ್ರಯತ್ನವಿದು.

# ಅಧ್ಯಾಯ ೬

## ಬಾಹುಸಾರ ಕ್ಷತ್ರಿಯ ಸಮುದಾಯದ ಭಾಷೆ ಮತ್ತು ಸಾಹಿತ್ಯ

### ೧. ಭಾಷೆ

ಮಾನವನಿಗೆ ದೇವರು ಭಾಷೆಯನ್ನು ಕಾಣಿಕೆಯನ್ನಾಗಿ ನೀಡಿದ್ದಾನೆ. "ಭಾಷೆಯೊಂದು ಇರದಿದ್ದರೇ ಮನುಕುಲವು ಕತ್ತಲೆಯಲ್ಲಿ ಇರಬೇಕಾಗುತ್ತಿತ್ತು ಎಂದು ಲಾಕ್ಷಣಿಕಕಾರ 'ದಂಡಿ' ಯು ಬಹುಕಾಲದ ಹಿಂದೆ ವ್ಯಕ್ತಪಡಿಸಿದ್ದಾನೆ. ಭಾಷೆಯು ಕೇವಲ ಮಾನವನ ವ್ಯವಹಾರಕ್ಕಷ್ಟೇ ಅಲ್ಲ, ಸಂಸ್ಕೃತಿಯ ವಾಹಿನಿಯ ಶಕ್ತಿಯಾಗಿದೆ. ಮಾನವನ ನಾಗರೀಕ ಸಂಸ್ಕೃತಿಯು ತಲೆತಲೆಮಾರಿನಿಂದ ತಲೆಮಾರಿಗೆ ಜೀವಂತವಾಗಿ ಸಾಗುತ್ತಿದೆ. ಇದರ ಭಾಷೆಯು ಸಹಾಯಕ ಪಾತ್ರವಹಿಸಿ ಜನರ ರೀತಿನೀತಿ, ಆಚರಣೆ ಸಂಪ್ರದಾಯಗಳಂತೆ ಪರಿಣಾಮ ಬೀರುವ ಅಂಶಗಳಾಗಿವೆ.

ಭಾರತ ಸರಕಾರವು ೧೫ ಲಿಪಿಬದ್ಧವಾದ ಭಾಷೆಗಳನ್ನು ಗುರುತಿಸಿದೆ. ಲಿಪಿರಹಿತ ಭಾಷೆಗಳು ಭಾರತದಲ್ಲಿದ್ದು, ಅವುಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಭೌಗೋಳಿಕ ಸ್ತರದ ನೆಲೆಯಲ್ಲಿ ಒಂದೇ ಭಾಷೆ ಮಾತನಾಡುವವರೂ ಸಹ ಆಯಾ ಪ್ರದೇಶದಲ್ಲಿ ಉಪಭಾಷೆಯಾಗಿ ಪರಿವರ್ತನೆಗೊಳ್ಳುವುದು ಭಾಷೆಯ ವೈಶಿಷ್ಟ್ಯವಾಗಿದೆ. ಉಪಭಾಷೆ ಒಂದೇ ಪ್ರದೇಶದ ವಿಭಿನ್ನ ಸ್ಥಳಗಳಲ್ಲಿ ಭಿನ್ನತೆ ಹೊಂದಿ ಪ್ರಚಲಿತದಲ್ಲಿರುತ್ತದೆ. ಕರ್ನಾಟಕದ ಮಟ್ಟಿಗೆ ಕನ್ನಡ ಪ್ರಮುಖ ಭಾಷೆಯಾದರೂ, ಅನ್ಯ ಭಾಷೆ ಸಂಸರ್ಗ, ಕಾಲಾಂತರ ಭೇದದಿಂದ, ಪ್ರಾದೇಶಿಕತೆಯಿಂದ ಕನ್ನಡ ಭಾಷೆ ತನ್ನ ಅಸ್ತಿತ್ವವನ್ನು ಬದಲಾಯಿಸಿಕೊಳ್ಳುತ್ತಿದೆ. ಪ್ರಾಚೀನ ಕಾಲದಲ್ಲಿ ಸಂಸ್ಕೃತವು ಕನ್ನಡದ ಶಿಷ್ಟರೂಪದಲ್ಲಿ ಸಮಿಶ್ರಣಗೊಂಡು ಬಳಕೆಗೊಂಡಿತು. ಸಂಸ್ಕೃತ ಶಬ್ದಗಳು ಕನ್ನಡ ಶಬ್ದಗಳೇ ಎನ್ನುವ ಮಟ್ಟಿಗೆ ಬೇರೂರಿದೆ. ಇಂದು ಇಂಗ್ಲೀಷ್ ಭಾಷೆಯ ಪದಗಳು ಬರಹ ರೂಪದಲ್ಲಿ ಅಷ್ಟೇ ಅಲ್ಲ, ಆಡು ನುಡಿಯಲ್ಲಿ ಹಾಸುಹೊಕ್ಕಾಗಿ ಬಳಕೆಗೊಂಡು 'ಕಂಗ್ಲೀಷ್' ಎಂದು ಹೆಸರಿಸಬೇಕಾಗಿದೆ. ಕರ್ನಾಟಕದ ಇಂದಿನ ಭಾಷೆ ಕನ್ನಡವಲ್ಲ 'ಕಂಗ್ಲೀಷ್' ಎಂದು ಕರೆದರೆ ತಪ್ಪಾಗಲಿಕ್ಕಿಲ್ಲ. ನಮ್ಮ ಹಳ್ಳಿಗಳು 'ಕಂಗ್ಲೀಷ್' ಬಳಸುವುದು ವೈಶಿಷ್ಟ್ಯವಾಗಿದೆ. ಕನ್ನಡದ ವಿದ್ವಾಂಸರು ಇಂದಿನವರೆಗೂ ಧಾರವಾಡ ಕನ್ನಡ, ಮೈಸೂರು ಕನ್ನಡ, ಹೈದರಾಬಾದ್ ಕನ್ನಡ ಎಂದು ಪ್ರಾದೇಶಿಕ ಹಿನ್ನೆಲೆಯನ್ನು ಗುರುತಿಸಿದ್ದಾರೆ. ಆದರೆ ಇಂದು ಈ ಹಿನ್ನೆಲೆಯಲ್ಲಿ ಗುರುತಿಸುವ ಮನೋಭಾವ ಬದಲಾಬೇಕಾಗಿದೆ. ಜಾಗತೀಕರಣದ ಮಟ್ಟದಲ್ಲಿ ಇಂಗ್ಲೀಷ್ ವಿಪರೀತ ಪ್ರಭಾವ ಬೀರಿರುವುದರಿಂದ ನಮ್ಮ ಹಳ್ಳಿಯ ರೈತನೂ ಇಂಗ್ಲೀಷ್ ಪದ ಪ್ರಯೋಗಿಸುವುದು ವಿಸ್ಮಯ ಮೂಡಿಸುತ್ತದೆ. ಭಾಷೆ ಮತ್ತು ಉಪಭಾಷೆಗಳ ಅಂತರ್ಯದಲ್ಲಿ ಬದಲಾವಣೆ ಇದೆ.

ಕನ್ನಡದ ಪ್ರಾದೇಶಿಕ ಉಪಭಾಷೆಗಳೂ ಸಹ ತಮ್ಮ ಅಸ್ತಿತ್ವ ಅಳಿಸಿಕೊಳ್ಳುತ್ತಿವೆ. ಉಪಬಾಷೆಯ ಆಡುನುಡಿಯು ಪರಿವರ್ತನಾಶೀಲವಾಗಿದೆ. ಕನ್ನಡದ ಉಪಬಾಷೆಗಳ ಮೇಲೆ ಇಂಗ್ಲೀಷ್ ಭಾಷೆ ಪ್ರಮುಖವಾಗಿ ಪ್ರಭಾವ ಬೀರಿದರೆ, ಕನ್ನಡದ ಗಡಿಯ ಉಪಭಾಷೆಗಳ ಮೇಲೆ ಮರಾಠಿ, ತೆಲುಗು,

ತಮಿಳು, ಮಲೆಯಾಳಿ, ಉರ್ದು, ಕೊಂಕಣಿ ಇತರೆ ಬಾಷೆಗಳು ಪರಿಣಾಮ ಬೀರಿವೆ. ಪ್ರಸ್ತುತ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ ಭಾಷೆಯು ಈ ಮೇಲಿನ ಮಾತುಗಳಿಂದ ಹೊರತಾಗಿಲ್ಲ. ಆಡುನುಡಿ ಉಪಭಾಷೆಯನ್ನು ಅವಲೋಕಿಸುವುದು ಅವಶ್ಯ.

ಭಾಷೆ ಭಾವನೆಗಳನ್ನು ವ್ಯಕ್ತಪಡಿಸುವ ಮಾಧ್ಯಮ. ಮನುಷ್ಯನು ಬೆಳವಣಿಗೆಯಾದಂತೆಲ್ಲ, ಭಾಷೆ ಬದಲಾಗುತ್ತಾ ಬೆಳವಣಿಗೆ ಹೊಂದುತ್ತಿದೆ. ಮಗು ಬೆಳೆಯುತ್ತಿದ್ದಂತೆಯೇ ಅವನು ಮನೆಯಲ್ಲಿ ಆಡುವ ನುಡಿಗಳು ಪರಿಸರದ ಮೂಲಕ ದೊರೆಯುವ ಶಬ್ದಗಳು ಅವನ ಭಾಷೆಯಾಗಿ, ತುಂಬಾ ಆತ್ಮೀಯವಾಗುತ್ತವೆ. ಅದಕ್ಕಾಗಿಯೇ ಅವನಲ್ಲಿ ತಾನು ವಾಸಿಸುವ ನಾಡಿನ ಬಗ್ಗೆ ಆಪಾರ ಪ್ರೀತಿ, ಅಭಿಮಾನ ಮೂಡುತ್ತದೆ. ಕೆಲಮೊಮ್ಮೆ ಈ ಅಭಿಮಾನ ಅತಿಯಾಗಿ ಅನಾಹುತ, ಅಚಾತುರ್ಯಕ್ಕೆ ಕೂಡ ಎಡೆಯಾಗುತ್ತದೆ. ನಾವು ನಮ್ಮ ಮಾತೃಭಾಷೆ, ಮಾತೃ ಭೂಮಿಯ ಬಗ್ಗೆ ಎಷ್ಟೇ ಅಭಿಮಾನ ಹೊಂದಿದ್ದರೂ, ಬೇರೆಯವರ ಭಾಷೆ, ಆಚಾರ, ವಿಚಾರ ಸಂಸ್ಕೃತಿಯನ್ನು ಅರ್ಥಮಾಡಿಕೊಂಡು, ಅವರೊಡನೆ ಮಧುರವಾಗಿ ಸಂಬಂಧ ಹೊಂದಿರಬೇಕಾದುದು ಇಂದಿನ ಅವಶ್ಯಕತೆ ಆಗಿದೆ. "ಪಂಜಾಬ – ಸಿಂಧ, ಗುಜರಾತ್ – ಮರಾಠ, ದ್ರಾವಿಡ ಉತ್ಕಲವಂಗ" ಎಂದು ಹಾಡಿದ ವಿಶ್ವಕವಿ ರವೀಂದ್ರನಾಥ ಟಾಗೋರರ ಆಶಯವು ಭಾರತದ ಕಲ್ಪನೆಯನ್ನು ನೀಡುತ್ತದೆ. ಭಾಷೆಬೇರೆ, ವೇಷಬೇರೆ, ರೀತಿನೀತಿಗಳು ವಿಭಿನ್ನವಾಗಿದ್ದರೂ ನಾವೆಲ್ಲರೂ ಭಾರತೀಯರು. ಭಾರತ ಮಾತೆಯ ಮಕ್ಕಳು, ವಿವಿಧತೆಯೇ ನಮ್ಮ ಅಪಾರ ಸಂಪತ್ತು, ಸಂಸ್ಕೃತಿ, ಅಂತಹ ಏಕತೆಯ ಬಲದ ಮೇಲೆ ನಾವು ನಮ್ಮ ದೇಶವನ್ನು, ಸಂಸ್ಕೃತಿಯನ್ನು ಇಂದಿನವರೆಗೂ ಕಾಪಾಡಿಕೊಂಡು ಬೆಳೆಸಿದ್ದೇವೆ. ವಿದೇಶದ ಆಕ್ರಮಣ, ಭಾಷೆ, ಸಂಸ್ಕೃತಿಯ ಮೇಲೆ ನಡೆದ ದಬ್ಬಾಳಿಕೆಯನ್ನು ಸಮರ್ಥವಾಗಿ ಎದುರಿಸಿ ತನ್ನತನದಿಂದ ಮೆರೆದ ನಾಡು ನಮ್ಮ ಭಾರತ. ಭಾರತದ ವಿಜ್ಞಾನಿಗಳು ಪ್ರಪಂಚಕ್ಕೆ ನೀಡಿದ ಕೊಡುಗೆಗಳು ಅನನ್ಯ, ಅಪೂರ್ವ, ಅರ್ಥಪೂರ್ಣ, ಭಾರತ ಇಂದು ಸ್ವಾವಲಂಬಿಯಾಗಿ, ತನ್ನ ಸಾಮರ್ಥ್ಯದ ಮೇಲೆ ದೇಶವನ್ನು ಪ್ರಗತಿ ಪಥದಲ್ಲಿ ಮುನ್ನಡೆಸುತ್ತಿರುವುದು ಅಭಿಮಾನದ ಸಂಗತಿಯಾಗಿದೆ. ನೆರೆ ರಾಷ್ಟ್ರಗಳೊಡನೆ ಸೌಹಾರ್ದಯುತ ಸಂಬಂಧವನ್ನು ಬೆಳೆಸಿಕೊಂಡು, ಅಲಿಪ್ತ ದೇಶಗಳ ಒಕ್ಕೂಟದ ಸದಸ್ಯರಾಗಿ ಶಾಂತಿ ಸೌಹಾರ್ದತೆ ಭಾರತದ ರಾಷ್ಟ್ರೀಯ ಐಕ್ಯತೆಗೆ ಅವಶ್ಯ. ಬ್ರಿಟೀಷರ ಕಾಲದಲ್ಲಿ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಾದ ಧಾರವಾಡ, ಬೆಳಗಾವಿ, ವಿಜಾಪುರ, ಕಾರವಾರಗಳನ್ನು ಮುಂಬಯಿ ಪ್ರಾಂತ್ಯಕ್ಕೆ ಜೋಡಿಸಿದ್ದರಿಂದ ಕರ್ನಾಟಕದ ಸಂಬಂಧ ಮಹಾರಾಷ್ಟ್ರದ ಜೊತೆಗೆ ಹೆಚ್ಚು ನಿಕಟವಾಗಿದೆ. ಇವುಗಳ ಸಂಬಂಧ ಕೇವಲ ಭೌಗೋಳಿಕದಾಗಿರದೇ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಹಾಗೂ ಸಾಹಿತ್ಯಿಕ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಹಾಸು ಹೊಕ್ಕಾಗಿದೆ. ಖ್ಯಾತ ಸಂಶೋಧಕ ಶಂಬಾ ಜೋಶಿ ಅವರು ಉಲ್ಲೇಖಿಸಿದ ಹಾಗೆ ಕರ್ನಾಟಕ–ಮಹಾರಾಷ್ಟ್ರಗಳು ಅವಳಿ–ಜವಳಿಯ ಹಾಗೆ ಬೆಳೆದು ಬಂದಿವೆ. ಕನ್ನಡ– ಮರಾಠಿ ಈ ಎರಡೂ ಭಾಷೆಗಳು ಸಮಾರು ೨೦೦೦ ವರ್ಷಗಳಿಂದ ಬೇರೆ ಬೇರೆ ರಾಜವಂಶದ

ಆಡಳಿತವನ್ನು ಕಂಡಿವೆ. ತಮಿಳು ಭಾಷೆಯನ್ನು ಬಿಟ್ಟರೆ ಕನ್ನಡವು ಎಲ್ಲ ಭಾರತೀಯ ಭಾಷೆಗಳಲ್ಲಿ ಅತಿ ಪ್ರಾಚೀನವಾದುದು. ಯಾದವರ ಕಾಲವು ಮಹಾರಾಷ್ಟ್ರಸಂಸ್ಕೃತಿಯ ಉದಯಕಾಲವೆಂದು ಹಾಗೂ ಮರಾಠಿ ಭಾಷೆ ೬ ನೇ ಶತಕದಲ್ಲಿ ಉಗಮವಾಗಿದೆ ಎಂದು ಇತಿಹಾಸಕಾರರು ತಿಳಿಸಿದ್ದಾರೆ. ೧೩ ನೇ ಶತಮಾನ ಜ್ಞಾನೇಶ್ವರರ ಕಾಲದಲ್ಲಿ ಕನ್ನಡ ಭಾಷೆಯ ಪ್ರಭಾವ ಮರಾಠಿ ಭಾಷೆಯ ಮೇಲೆ ಆಗಿರುವುದು ಸಹಜ ಎಂಬ ಸಂಗತಿ ಗಮನಾರ್ಹ. ಕರ್ನಾಟಕ, ಮಹಾರಾಷ್ಟ್ರ ಇವುಗಳ ನಡುವೆ ಸುಮಾರು ೧೫೦೦ ವರ್ಷಗಳ ಆಡಳಿತಾತ್ಮಕ ಸಂಬಂಧವಿದೆ. ಖ್ಯಾತ ಸಂಶೋಧಕ ಡಾ. ಎಂ.ಎಂ. ಕುಲಬುರ್ಗಿಯವರು ಈ ವಿಷಯ ಕುರಿತು ಶಾಸನಗಳನ್ನು ಅಧ್ಯಯನ ಮಾಡಿ ಖಚಿತಪಡಿಸಿದ್ದಾರೆ. ಕರ್ನಾಟಕದಲ್ಲಿ ಶಿವ ಶರಣರು, ದಾಸರು, ಜನ ಸಾಮಾನ್ಯರಿಗೆ ತಮ್ಮ ವಚನ, ಪದಗಳಿಂದ ಸರಳ ಜೀವನ ಮಾರ್ಗವನ್ನು ತಿಳಿಸಿಕೊಟ್ಟಂತೆ, ೧೧ ನೇ ಶತಮಾನದ ಕನ್ನಡ ಸಾಹಿತ್ಯದ ಪ್ರಭಾವ, ಮುಂದೆ ೧೩ ರಿಂದ ೧೭ ನೆಯ ಶತಮಾನದ ಮರಾಠಿ ಸಾಹಿತ್ಯದ ಮೇಲೆ ಆಗಿರುವುದನ್ನು ಕಾಣುತ್ತೇವೆ.

ಪ್ರಾರಂಭದಲ್ಲಿ ಮರಾಠಿ ನಾಟಕಕಾರರು ಕನ್ನಡ ಹಾಡುಗಳನ್ನು ಬಳಸಿಕೊಂಡರು. ಮರಾಠಿ ನಾಟಕಕಾರರಿಂದ ಗಿರೀಶ್ ಕಾರ್ನಾಡ, ಚಂದ್ರಶೇಖರ ಕಂಬಾರ ಮುಂತಾದ ಕನ್ನಡ ನಾಟಕಕಾರರ ನಾಟಕಗಳು ಮಹಾರಾಷ್ಟ್ರದಲ್ಲಿ ಮರಾಠಿಯಲ್ಲಿ ಅನುವಾದಗೊಂಡು ರಂಗಭೂಮಿಯ ಮೇಲೆ ತುಂಬಾ ಯಶಸ್ವಿಯಾಗಿ ಪ್ರಯೋಗಗೊಂಡಿವೆ. ಹೀಗೆ ರಂಗಭೂಮಿ ಕನ್ನಡ-ಮರಾಠಿ ಸಂಬಂಧಗಳನ್ನು ಹೆಚ್ಚು ಗಟ್ಟಿಗೊಳಿಸಿದೆ.

ಆಧುನಿಕ ಸಾಹಿತ್ಯದ ಪ್ರಕಾರದಲ್ಲಿಯೂ ಕನ್ನಡ - ಮರಾಠಿ ಭಾಷೆಗಳಲ್ಲಿ ಅನ್ಯೋನ್ಯತೆಯನ್ನು ಕಾಣುತ್ತೇವೆ. ಕನ್ನಡ ಕಾದಂಬರಿ ಮೇಲೆ ಬಂಗಾಳಿ, ಮರಾಠಿ ಸಾಹಿತ್ಯದ ಪ್ರಭಾವವನ್ನು ಕಾಣುತ್ತೇವೆ. ಗಳಗನಾಥರು ಮರಾಠಿಕಾದಂಬರಿಗಳನ್ನು ಅನುವಾದಿಸಿದ್ದಾರೆ. ಕನ್ನಡದ ಶ್ರೇಷ್ಠ ಸಾಹಿತಿಗಳಾದ ಕುವೆಂಪು, ಬೇಂದ್ರೆ, ಗೋಕಾಕ, ಕಾರಂತ, ಮಾಸ್ತಿ ಇವರ ಸಾಹಿತ್ಯದ ಹಾಗೂ ಮಹಾರಾಷ್ಟ್ರದ ಸಮಕಾಲೀನ ಸಾಹಿತಿಗಳಾದ ಫಡಕೆ, ಅತ್ರೆ, ಖಾಂಡೇಕರ, ಸಾನೇ ಗುರೂಜಿ ಇವರ ಸಾಹಿತ್ಯದಲ್ಲಿ ಅನೇಕ ಸಮಾನ ಗುಣಗಳನ್ನು ಗಮನಿಸುತ್ತೇವೆ. ಅಂದಿನ ಸಾಹಿತ್ಯಗಳು ಬೇರೆ ಬೇರೆ ಭಾಷೆಯಲ್ಲಿ ಬರೆಯುತ್ತಿದ್ದರೂ ಅವರ ವಿಚಾರ ಧಾರೆಗಳು ಒಂದೇ ಆಗಿದ್ದವು. ಶಿವರಾಮ ಕಾರಂತ, ಭೈರಪ್ಪ, ಕಾರ್ನಾಡ, ಕಂಬಾರ, ಯು.ಆರ್. ಅನಂತಮೂರ್ತಿ, ಶ್ರೀಮತಿ ಸುಧಾಮೂರ್ತಿ ಅವರ ಅನೇಕ ಕೃತಿಗಳು ಮರಾಠಿಯಲ್ಲಿ ಅನುವಾದಗೊಂಡಿದೆ. ಸಾಹಿತ್ಯ, ಸಂಸ್ಕೃತಿ, ಕಲೆ, ಸಂಗೀತ ಮುಂತಾದ ಸಾಧಕರು ಕನ್ನಡ ಮರಾಠಿಗಳ ನಡುವೆ ಮಧುರ ಬಾಂಧವ್ಯ ಸೇತುವೆಯಾಗಿ ಅಮೂಲ್ಯ ಕೊಡುಗೆ ನೀಡಿದ್ದಾರೆ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಈ ಸಮುದಾಯದವರು ಎಲ್ಲೆಲ್ಲಿ ವಾಸವಾಗಿದ್ದರೋ ಆ ಪರಿಸರಕ್ಕೆ ಅನುಗುಣವಾಗಿ ಮಾತನಾಡುವುದನ್ನು ಕಲಿತಿದ್ದಾರೆ. ಇವರಿಗೆಂದೇ ಮರಾಠಿ

ಭಾಷೆಯೆಂಬುದಿದೆ. ಇಲ್ಲಿನ ಪರಿಸರದವರು ಮರಾಠಿ ಪ್ರಭಾವದಿಂದ ಮರಾಠಿ ಮಿಶ್ರಿತ ಕನ್ನಡವನ್ನು ಮಾತನಾಡುತ್ತಾರೆ. ಇಲ್ಲವೇ ಸುಧಾರಿಸಿದ ಕನ್ನಡ ಮಾತನಾಡುವವರು, ಮರಾಠಿಯನ್ನಷ್ಟೇ ಮಾತನಾಡುವ ಜನರು, ಮರಾಠಿ–ಕನ್ನಡ ಕೂಡಿಯೇ ಮಾತನಾಡುವ ಜನರನ್ನು ಕಾಣಬಹುದು.

ಭಾಷೆಯೊಂದು ಆಡುವ ನುಡಿ. ಈ ನುಡಿಯನ್ನು ಹಿಡಿದಿಡುವ ಸಾಧನ ಲಿಪಿ. ಭಾಷೆಯು ಮೊದಲು ಹುಟ್ಟಿಕೊಂಡಿದ್ದು, ನಂತರ ಅದನ್ನು ಗುರುತಿಸಲು ಲಿಪಿ ಜನ್ಮ ತಳೆಯಿತು. ಮೂಲಭಾಷೆಗಳಿಗೆ ಅನೇಕ ಉಪಭಾಷೆಗಳು ಹುಟ್ಟಿಕೊಂಡವು. ಲಿಪಿಬದ್ಧವಾದ ಬಳಿಕ ಪರಿಷ್ಕರಣೆಗೊಂಡ ಭಾಷೆಯು ಬಾಯಿ ಮಾತಿನಲ್ಲಿ, ಆಡು ನುಡಿಯಲ್ಲಿ ಏಕರೂಪವಾಗಿ ಉಳಿದಿಲ್ಲ, ಭಾಷೆಯನ್ನು ಎಲ್ಲಾ ವರ್ಗದವರೂ ಬಳಸುವುದರಿಂದ ಅದು ಮೂಲದಲ್ಲಿ ಒಂದೇ ರೀತಿಯಾಗಿದ್ದರೂ ಆಡುವ ಮಾತಿನಲ್ಲಿ ಅನೇಕ ರೂಪು ತಳೆಯಿತು.

**೨. ಶಿಷ್ಟ ಸಾಹಿತ್ಯ**

ಪ್ರಾಕೃತ ಮೂಲವಾದ ಮರಾಠೀ ಭಾಷೆ ಸುಮಾರು ಕ್ರಿ.ಶ. ಮೂರನೇ ಶತಮಾನದಿಂದ ರೂಪುಗೊಂಡು ಬೆಳೆಯತೊಡಗಿತೆಂದೂ, ಅದು ಸಾಹಿತ್ಯಕ ರೂಪ ಪಡೆದದ್ದು ಹನ್ನೊಂದನೆಯ ಶತಮಾನದ ಆದಿಯಿಂದ ಎಂದೂ ಸಂಶೋಧಕರ ಅಂಬೋಣ. ಮರಾಠೀ ಭಾಷಾ ಸಾಹಿತ್ಯವು ವ್ಯಾಪಕತೆ ಪಡೆದು ಭದ್ರಗೊಂಡದ್ದು ನಾಥ ಮಹಾನುಭಾವ ವಾರಕರೀ ಪಂಥಗಳ ಧಾರ್ಮಿಕ ಜಾಗೃತಿಯ ಕಾಲದಿಂದ ಎಂಬ ಮಾತು ಐತಿಹಾಸಿಕ ಸತ್ಯ. ಈ ಕಾಲದಿಂದಲೇ ಮರಾಠೀ–ಕನ್ನಡ ಸಾಹಿತ್ಯ ಬಾಂಧವ್ಯ ಶ್ರೀಕಾರಗೊಂಡಿದೆಯೆನ್ನಬೇಕು.

ಕನ್ನಡ ಮತ್ತು ಮರಾಠಿಗಳೆರಡೂ ಬೇರೆ ಬೇರೆ ಕುಟುಂಬಗಳಿಗೆ ಸೇರಿದ ಭಾಷೆಗಳು. ಕನ್ನಡ ದ್ರಾವಿಡ ವರ್ಗದ್ದಾದರೆ ಮರಾಠಿ ಆರ್ಯಭಾಷಾ ವರ್ಗದ್ದು. ಡಾ. ಶಂ.ಬಾ. ಜೋಶಿ ಅವರು ಬೆಳೆದದ್ದು ಕನ್ನಡ ತಾಯಿ ಮೊಲೆಹಾಲು ಕುಡಿದು ಎಂದಿದ್ದಾರೆ. ಕ್ರಿ.ಶ. ಒಂಬತ್ತನೆಯ ಶತಮಾನದವರೆಗೆ ಮಹಾರಾಷ್ಟ್ರದ ಬಹುತೇಕ ಭಾಗದಲ್ಲಿ ಕನ್ನಡವೇ ಪ್ರಚಾರದಲ್ಲಿತ್ತೆಂಬುದನ್ನು ಮರೆಯುವಂತಿಲ್ಲ.

ಮರಾಠಿಯ ಮೇಲೆ ಮೊದಲಿನಿಂದಲೂ ಕನ್ನಡದ ಪ್ರಭಾವವಾಗಿದೆ. ಜ್ಞಾನಸಿಂಧು ಪ್ರಭುಲಿಂಗ ಲೀಲೆ, ಕುಮಾರವ್ಯಾಸ ಭಾರತದಂಥ ಕಾವ್ಯಗಳು ಕನ್ನಡದಿಂದ ಮರಾಠಿಗೆ ಬಹುಹಿಂದೆಯೇ ಅನುವಾದಗೊಂಡಿವೆ. ಕರ್ನಾಟಕದ ದಾಸರನ್ನೂ ಮಹಾರಾಷ್ಟ್ರದ ಸಂತರನ್ನೂ ಸಂಧಿಸುವಂತೆ ಮಾಡಿದ ದೇವರೆಂದರೆ ಪಂಢರಪುರದ ವಿಠ್ಠಲ. ಈ ಎರಡೂ ಪಂಥಗಳ ಧಾರ್ಮಿಕ ಚಿಂತನೆಯಲ್ಲಿ ಆಂತರಿಕ ಸಂಬಂಧವಿದೆ. "ಕಾನಡಾಹೋ ವಿಠ್ಠಲೂ ಕರ್ನಾಟಕು" ಎಂದು ಸಂತ ಜ್ಞಾನೇಶ್ವರ ಉದ್ಗರಿಸಿರುವುದನ್ನೂ "ನಮೋ ಕಾನಡೀ ಭಾಷಾ" ಎಂದು ಪುರಂದರದಾಸರ ಸಮಕಾಲೀನವಾದ ಸಂತ ಏಕನಾಥರು ನಮಿಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಮರಾಠೀ ಸಂತ ಸಾಹಿತ್ಯದ ಮೇಲೆ ಕನ್ನಡದ ಅನುಭಾವ

ಸಾಹಿತ್ಯ ಪ್ರಭಾವ ಬೀರಿರುವುದನ್ನೂ ನಾವು ಗುರುತಿಸಬಹುದು. ವೀರಶೈವ ಶರಣ–ಸಂತರು ಎರಡೂ ಕಡೆಗಿದ್ದು ಉಭಯ ಭಾಷೆಗಳಲ್ಲೂ ಸಾಹಿತ್ಯ ರಚನೆ ಮಾಡಿರುವುದನ್ನೂ ಕಾಣಬಹುದು. ಹೀಗೆ, ವಿಠಲನೊಂದೇ ಅಲ್ಲ, ಮೈಲಾರಲಿಂಗ ಮತ್ತು ಸವದತ್ತಿ ಯಲ್ಲವ್ವ ಮುಂತಾದ ದೇವತೆಗಳೂ ಈ ಉಭಯ ರಾಜ್ಯಗಳ ಜನರಿಗೆ ಕುಲದೇವತೆಗಳ ಸ್ಥಾನದಲ್ಲಿದ್ದು ಆರಾಧ್ಯರಾಗಿ ಉಳಿದು ಬಂದಿದ್ದಾರೆಂಬುದು ಸರ್ವವಿದಿತ.

ಮಹಾನ್ ಭಗವದ್ ಭಕ್ತ ಶಿರೋಮಣಿ ಜಗದ್ಗುರು ಶ್ರೀ ಸಂತ ತುಕರಾಮ ಮಹಾರಾಜರು ಯುಗ ಯುಗಗಳಿಂದಲೂ ಭಗವಂತನ ಅನನ್ಯ ಭಕ್ತರಾಗಿ ನಿಷ್ಕಾಮ ಸೇವಾ ಸಮರ್ಥರಾಗಿದ್ದರು. ಕೃತಯುಗದಲ್ಲಿ ಭಕ್ತ ಪ್ರಹ್ಲಾದರಾಗಿ ಶ್ರೀ ನಾರದಮುನಿಗಳ ಕೃಪಾಶೀರ್ವಾದದಿಂದ ಚಿಕ್ಕಂದಿನಲ್ಲಿಯೇ ಶ್ರೀ ನಾರಾಯಣನ ನಾಮಸ್ಮರಣೆಯಲ್ಲಿ ತಲ್ಲೀನರಾಗುತ್ತಿದ್ದರು ಎಂಬ ಪ್ರತೀತಿ ಇದೆ. ಇವರಿಗೆ ಚರಾಚರಗಳೆಲ್ಲವೂ ಶ್ರೀಹರಿ ಸ್ವರೂಪವಾಗಿ ತೋರುತ್ತಿದ್ದವು. ತಮ್ಮ ತಂದೆ ಹರಿದ್ರೋಹಿ ಹಿರಣ್ಯಕಶ್ಯಪನಿಂದ ಅನೇಕಾನೇಕ ಚಿತ್ರಹಿಂಸೆಯನ್ನು ಸಹಿಸಿದರು. ಇವರಿಗೆ ಒದಗಿದ ಸರ್ವ ಸಂಕಟಗಳನ್ನು ಶ್ರೀಹರಿಯು ಪರಿಹರಿಸಿದನು. ನಾಗಸರ್ಪಗಳಿಂದ ಅಗ್ನಿ–ಶಸ್ತ್ರ–ವಿಷ–ಜಲ–ಪರ್ವತಗಳಿಂದ ಕರುಣಾಳು ಶ್ರೀ ನಾರಾಯಣನು ರಕ್ಷಿಸಿದನು. ಕೊನೆಯಲ್ಲಿ ಆತನ ತಂದೆ "ಎಲ್ಲಿ ನಿನ್ನ ನಾರಾಯಣ? ತೋರಿಸು, ಈಗಲೇ ಅವನನ್ನು ನಿನ್ನೆದುರು ಕೊಂದು ಬಿಡುವೆ" ಎಂದು ಗುಡುಗಿದನು. ಆಗ ಪ್ರಹ್ಲಾದನು ನನ್ನ ನಾರಾಯಣನು ಇಲ್ಲದ ಸ್ಥಳವೇ ಇಲ್ಲ. ಎಲ್ಲೆಲ್ಲಿಯೂ ಇರುವನು ಎಂದು ಅತಿ ವಿನಮ್ರನಾಗಿ ಉತ್ತರಿಸಿದನು. ಕೂಡಲೇ ಆ ದುಷ್ಟ ತಂದೆಯು ಈ ಕಂಭದಲ್ಲಿ ತೋರಿಸು ಎಂದು ಅದಕ್ಕೆ ಜಗಿದು ಒದೆಯುವದೊಂದೇ ತಡ, ತಕ್ಷಣವೇ ಶ್ರೀಹರಿಯು ಘನ ಗರ್ಜನೆಯೊಂದಿಗೆ ನರಸಿಂಹ ಅವತಾರ ತೊಟ್ಟು ಮಹಾ ಬಳನಾಗಿರುವ ಹಿರಣ್ಯಕಶ್ಯಪನನ್ನು ತನ್ನ ಉಗುರುಗಳಿಂದಲೇ ಆತನ ಎದೆಯನ್ನು ಸೀಳಿ ಸಂಹರಿಸಿದನು.

ತ್ರೇತಾಯುಗದಲ್ಲಿ ಆದೇ ಪ್ರಹ್ಲಾದನು ವಾಲಿಪುತ್ರ ಅಂಗದನಾಗಿ ಅವತರಿಸಿ, ಪ್ರಭು ಶ್ರೀರಾಮಚಂದ್ರನ ಅನನ್ಯ ಭಕ್ತನಾಗಿ ಆತನ ಕೃಪೆಗೆ ಪಾತ್ರನಾದನು.

ದ್ವಾಪರ ಯುಗದಲ್ಲಿ ಉದ್ಧವ ಭಕ್ತನಾಗಿ ಶ್ರೀ ಕೃಷ್ಣ ಪರಮಾತ್ಮನ ಅನನ್ಯ ಸೇವಕನಾದರು. ನಿಜಧಾಮಕ್ಕೆ ತೆರಳುವ ಮುನ್ನ ಶ್ರೀ ಕೃಷ್ಣ ಪರಮಾತ್ಮನು ತನ್ನ ಹೃದಯದಲ್ಲಿದ್ದ ಸಮಸ್ತ ಜ್ಞಾನ ಭಾಂಡಾರವನ್ನು ಉದ್ಧವನಿಗೆ ಸಮರ್ಪಿಸಿ ಆತನಿಗೆ ಪರಿಪೂರ್ಣ ಬ್ರಹ್ಮಜ್ಞಾನಿಯಾಗಿ ಮಾಡಿ ಮೂರು ಲೋಕಗಳಲ್ಲಿಯೂ ಈತನನ್ನು ಪ್ರಸಿದ್ಧಿಯನ್ನಾಗಿ ಮಾಡಿದನು. ಈ ಮಹಾಭಕ್ತ ಪರಮಜ್ಞಾನಿ ಉದ್ಧವನು ಶ್ರೀ ಕೃಷ್ಣ ಪರಮಾತ್ಮನ ಆಜ್ಞೆಯಂತೆ ತ್ರೈಲೋಕ್ಯಗಳಲ್ಲಿ ಸಂಚರಿಸಿ ಶ್ರೀ ಹರಿಭಕ್ತಿಯನ್ನು ಪ್ರಚಾರಗೊಳಿಸಿ ಮುಕ್ತನಾದನು.

ಈ ಉದ್ಧವನೇ ಈ ಕಲಿಯುಗದಲ್ಲಿ ಭಕ್ತ ನಾಮದೇವನಾಗಿ ಅವತರಿಸಿ ಪ್ರಭು ಪಂಢರೀನಾಥನ ಪರಮ ಭಕ್ತನಾದನು. ಈತನ ಪರಿಶುದ್ಧ ನಿಜನಿಷ್ಠೆ ನಿಜ ಪ್ರೇಮ ಭಕ್ತಿಗೆ ಮರುಳಾಗಿ ಶ್ರೀ ಪಂಢರೀನಾಥ ಪಾಂಡುರಂಗನು ಶ್ರೀ ಸಂತ ಸನಕ ಸನಂದಾದಿ ಪರಮ ಭಕ್ತರ ಮೇಲಿಟ್ಟ ಪ್ರೇಮವನ್ನು ಮರೆತುಬಿಟ್ಟನು. ಭಕ್ತ ನಾಮದೇವನು ಬಾಲ್ಯದಲ್ಲಿಯೇ ಶ್ರೀ ಪಾಂಡುರಂಗನನ್ನು ಒಲಿಸಿಕೊಂಡು ಆತನಿಗೆ ಸ್ವತಃ ಊಟ ಮಾಡಿಸಿದನು. ಪರಸ್ಪರರು ಸಂವಾದ ಮಾಡುತ್ತಿದ್ದರು. ಹೀಗೆ ಭಕ್ತ ನಾಮದೇವನು  ಶ್ರೀ ಪಾಂಡುರಂಗನ ಅತ್ಯಂತ ಸಲುಗೆಯ ಶ್ರೇಷ್ಠ ಭಕ್ತನಾದನು. ಕೀರ್ತನ ರಂಗದಲ್ಲಿ ಕಾಲುಗಳಿಗೆ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತ ಜಗತ್ತಿನಲ್ಲಿ ಭಕ್ತಿ ಜ್ಞಾನ ವೈರಾಗ್ಯದ ಜ್ಯೋತಿಯನ್ನೇ ಬೆಳಗಿಸಿದನು. ಜಗತ್ ಕಲ್ಯಾಣ ದೃಷ್ಟಿಯಿಂದ ಬೃಹತ್ ಪ್ರಮಾಣದಲ್ಲಿ ಅಭಂಗಗಳನ್ನು ರಚಿಸಿ ಬಹು ಕೀರ್ತಿಗೆ ಪಾತ್ರನಾದನು. ಸಂತಶ್ರೇಷ್ಠ ಶ್ರೀ ಜ್ಞಾನೇಶ್ವರ ಮಹಾರಾಜರೊಂದಿಗೆ ಶ್ರೀ ಪಾಂಡುರಂಗನ ಆಜ್ಞೆ ಪಡೆದು ದೆಹಲಿ ಪಂಜಾಬದವರೆಗೆ ಪಾದಯಾತ್ರೆಯೊಂದಿಗೆ ಸಂಚರಿಸಿ ಹರಿಭಕ್ತಿಯನ್ನು ಪ್ರಚಾರಗೊಳಿಸಿದರು ಎಂಬ ಪ್ರತೀತಿ ಇದೆ.. ಸೇವೆಯು ಸಂಪೂರ್ಣ ಸಮಾಪ್ತಿಯಾದಾಗ ತಮ್ಮ ೮೦ ನೇ ವಯಸ್ಸಿನಲ್ಲಿ ತಮ್ಮ ಕುಟುಂಬದ ೧೩ ಮಂಡಳಿ ಸಮೇತರಾಗಿ ಶ್ರೀ ಪಾಂಡುರಂಗನ ಹಸ್ತದಿಂದಲೇ ಮಂದಿರದ ಮಹಾದ್ವಾರ ಪಾವುಟಿಗೆಯಲ್ಲಿ ಸಜೀವ ಸಮಾಧಿಯನ್ನು ಸ್ವೀಕರಿಸಿದರು. ಇವರ ಪಾದ ಪದ್ಮಗಳಿಗೆ ಎಷ್ಟೇ ವಾಙ್ಮಯ ಪುಷ್ಪಗಳನ್ನು ಸಮರ್ಪಿಸಿದರೂ ಎಂದಿಗೂ ಸಾಲದು. ಕಾಯಾ, ವಾಚಾ, ಮನದಿಂದ ಇವರ ಪವಿತ್ರ ಚರಣಗಳಿಗೆ ದಂಡವತ ನಮಸ್ಕಾರ ಮಾಡುವುದೊಂದೇ ಉಪಾಯವಾಗಿರುವುದು ಎಂಬ ಅಭಿಪ್ರಾಯಗಳು ಚಾಲ್ತಿಯಲ್ಲಿದೆ.

ಈ ಶ್ರೀ ಸಂತ ನಾಮದೇವ ಮಹಾರಾಜರೇ ದೇಹೂ ಗ್ರಾಮದಲ್ಲಿ ಶಾಲಿವಾಹನ ಶಕೆ ೧೫೩೦ ನೇ ಮಾಘ ಶು॥೫ ನೇಯ ಶುಭ ಮಹೂರ್ತದಲ್ಲಿ ಶ್ರೀ ಪಾಂಡುರಂಗನ ಆಜ್ಞೆ ಮೇರೆಗೆ ಶ್ರೀ ಸಂತ ತುಕಾರಾಮ ಮಹಾರಾಜರಾಗಿ ಅವತರಿಸಿದರು. ಇವರ ಅವತಾರ ಕಾಲದಲ್ಲಿ ಅಧರ್ಮವು ತಾಂಡವವಾಡುತ್ತಿತ್ತು. ಹರಿಪ್ರಾಪ್ತಿಯ ಸಾಧನೆಗಳಾದ ಭಜನೆ, ಪೂಜನ, ಶ್ರವಣ, ಮನನ, ಜಪತಪ ಅನುಷ್ಠಾನ, ತೀರ್ಥ ಪರ್ಯಟನ ಇತ್ಯಾದಿಗಳು ಲೋಪವಾಗಿ ಸರ್ವರೂ ವಿಷಯ ಲಂಪಟರಾಗಿ ನಾನು ನನ್ನದೆಂಬ ದುರಂಹಕಾರಗಳಿಂದ ಅಜ್ಞಾನಾಂಧಕಾರಗಳಲ್ಲಿ ಮುಳುಗಿ ಕೇವಲ ದುಃಖಕ್ಕೆ ಗುರಿಯಾಗಿದ್ದರು. ಇಂತಹ ದುರ್ಧರ ಪ್ರಸಂಗದಲ್ಲಿ ಶ್ರೀ ಸಂತ ತುಕಾರಾಮ ಮಹಾರಾಜರು ವೇದ, ಶ್ರುತಿ, ಶಾಸ್ತ್ರ, ಪುರಾಣಗಳ ಆಜ್ಞೆಯಂತೆ ಹಾಗೂ ಋಷಿ ಮುನಿಗಳು ಲೋಕಕಲ್ಯಾಣ ದೃಷ್ಟಿಯಿಂದ ಬೋಧಿಸಿದಂತೆ ಸ್ವತಃ ಆಚರಿಸಿ ಬಡಜೀವಿಗಳಿಗೆ ಸನ್ಮಾರ್ಗಕ್ಕೆ ಹಚ್ಚಿದರು. ಇವರು ಜಗತ್ತಿಗೆ ಮಾಡಿದ ಮಹದುಪಕಾರಕ್ಕೆ ಅವರ ಚರಣಗಳಲ್ಲಿ ಜೀವ ಸಮರ್ಪಿಸಿದರೂ ಕೂಡ ಅದು ಸ್ವಲ್ಪವೇ ಆಗುವುದು.

**೧೯೭೮. ದುಷ್ಟ ಭೂಷಣ ಸಜ್ಜನಾಚೇ । ಅಲಭ್ಯಲಾಭ ಪುಣ್ಯ ತ್ಯಾಚೇ ॥೧॥ ಧನ್ಯ ಐಸಾ ಪರ ಉಪಕಾರೀ । ಚಾಯ ನರಕಾ ಅಣಿಕಾ ವಾರಿ ॥೨॥ ಮೆಳ ಖಾಯೇ ಸಂವದಣೀ । ಕರೀ ಆಣಿಕಾಂಚೀ ಉಜಳಣೀ ॥೩॥ ತುಕಾ ಮ್ಹಣೇ ತ್ಯಾಚಾ । ಪ್ರೀತೀ ಅದರ ಕರಾ ಸಾಚಾ ॥೪॥**

**ಅರ್ಥ:** – ದುಷ್ಟ ಜನರು ಸಜ್ಜನರು ಭೂಷಣೆಗಳಾಗಿರುವರು. ಕಾರಣ ದುಷ್ಟರು ಸಜ್ಜನರನ್ನು ನಿಂದಿಸುವರು. ಇದರಿಂದ ಸಜ್ಜನರ ಪಾಪಗಳು ದುಷ್ಟರಲ್ಲಿ ಹೋಗುವುವು ಮತ್ತು ದುಷ್ಟರು ಮಾಡಿರುವ ಪುಣ್ಯವು ಸಜ್ಜನರತ್ತ ಬರುವುದು ಹೀಗೆ ಸಜ್ಜನರಿಗೆ ಅಲಭ್ಯ ಲಾಭವಾಗುವುದು ॥೧॥ ಆದ್ದರಿಂದ ದುಷ್ಟರು ಜಗತ್ತಿನಲ್ಲಿ ಧನ್ಯರು. ಏಕೆಂದರೆ ಅವರಂತಹ ಪರೋಪಕಾರಿಯು ಇನ್ನೊಬ್ಬರಿಲ್ಲ. ಕಾರಣ ತಾವು ಸ್ವತಃ ನರಕಕ್ಕೆ ಹೋಗಿ ಇತರರ ಪಾಪದ ಕ್ಷಾಲನೆ ಮಾಡುವರು ಮತ್ತು ಆತನಿಗೆ ನರಕಕ್ಕೆ ಹೋಗುವುದನ್ನು ತಪ್ಪಿಸುವರು ॥೨॥ ಅಗಸನ ಮನೆಯಲ್ಲಿ ಬಟ್ಟೆ ಒಗೆಯುವ ಡೋಣಿಯು ತಾನು ವಸ್ತ್ರಗಳ ಹೊಲಸನ್ನು ತಿಂದು ಅವುಗಳನ್ನು ಸ್ವಚ್ಛ ಮಾಡುವುದು ॥೩॥ ಅಹೋ ಸಜ್ಜನರೇ, ಹೀಗೆ ನಿಂದಿಸುತ್ತಿರುವ ದುಷ್ಟರನ್ನು ನೀವು ತಿರುಗಿ ನಿಂದಿಸಬೇಡಿರಿ. ಬದಲಾಗಿ ಅವರನ್ನು ಪ್ರೀತಿಯಿಂದ ಆದರಿಸಿ ಅವರನ್ನು ಗೌರವಿಸಿರಿ ಎಂದು ತುಕಾರಾಮ ಮಹಾರಾಜರು ಹೇಳುವರು ॥೪॥

**೧೯೭೯. ಸಾಹೋನಿ ಟಾಂಕೀ ಘಾಯೇ । ಪಾಷಾಣ ದೇವಚಿ ಪಾಹೇ ॥೧॥ ತಯಾರೀತೀ ದೃಢ ಮನ। ಕರೀ ಸಾಧಾಯ ಕಾರಣ ॥೨॥ ಬಾಣ ಶಸ್ತ್ರ ಸಾಹೋನಿ ಗೋಳೀ । ಶೂರಾ ಠಾವ ಉಂಚ ಸ್ಥಳೀ ॥೩॥ ತುಕಾ ಮ್ಹಣೇ ಸತೀ । ಅಗ್ನಿ ನ ದೇಖೇ ಜ್ಯಾ ರೀತೀ ॥೪॥**

**ಅರ್ಥ:**– ಕಬ್ಬಿಣದ ಉಳಿಯ ಹೊಡೆತಗಳನ್ನು ಸಹಿಸಿಕೊಂಡು ಕಲ್ಲು ದೇವರ ಮೂರ್ತಿಯಾಗಿರುವುದು. ಇದನ್ನು ತಿಳಿದು ನೋಡಿರಿ ॥೧॥ ಅದರಂತೆ ಮುಂದಿರುವ ಮೋಕ್ಷ ರೂಪದ ಕಾರ್ಯವನ್ನು ಸಾಧಿಸುವುದಕ್ಕಾಗಿ ಮನಸ್ಸನ್ನು ದೃಢವಾಗಿ ನಿಶ್ಚಯಗೊಳಿಸಿರಿ ॥೨॥ ಬಾಣಗಳ, ಶಸ್ತ್ರಗಳ ಮತ್ತು ಬಂದೂಕು ಗುಂಡಿನ ಹೊಡೆತಗಳನ್ನು ಸಹಿಸಿಕೊಂಡೇ ಶೂರನಾದ ಮನುಷ್ಯನು ಹಿರಿದಾದ ಸೇನಾಪತಿ ಪದವಿಯನ್ನು ಪ್ರಾಪ್ತ ಮಾಡಿಕೊಳ್ಳುವನು ॥೩॥ ಸತಿಯು ಸಹಗಮನ ಕಾಲದಲ್ಲಿ ಅಗ್ನಿಯತ್ತ ನೋಡುವುದೇ ಇಲ್ಲ. ಅದರಂತೆ ಸಾಧಕನು ತನಗೆ ಮುಂದಾಗುವ ಮೋಕ್ಷರೂಪ ಕಾರ್ಯ ಸಾಧಿಸಲು ದುಷ್ಟರ ನಿಂದೆ ದ್ವೇಷಗಳ ಹೊಡೆತಗಳನ್ನು ನಿರ್ವಿಕಾರ ಬುದ್ಧಿಯಿಂದ ಸಹಿಸಿಕೊಳ್ಳಬೇಕಾಗುವುದು ಎಂದು ತುಕಾರಾಮ ಮಹಾರಾಜರು ಹೇಳುವರು ॥೪॥

**೧೯೮೦. ತೇಣೇ ವೇಶೇ ಮಾಝೀ ಚೋರಿಲೀ ಅಂಗೇ । ಮಾನವಯಾ ಜಗ ಆಪ್ತಪಣೇ । ನಾಹೀ ಚಾಡ ಭೀಡ ಸಂಸಾರಾಚೇ ಕೋಡ । ಉದಾಸೀನ ಸರ್ವ ಗುಣೇ । ಭಯ ಮೋಹ ಲಜ್ಜಾ ನಿರಸಲೀ ಶಂಕಾ । ಅವಘಿಯಾ ಏಕಚಿಪಣೇ । ವಿಠ್ಠಲಾಚ್ಯಾ ಪಾಯೀ ಬೈಸೋನಿ ರಾಹಿಲೀ । ಭಾಗಲೀ ನುಠಿತ ತೇಣೇ ॥೧॥ ಆತಾ ತ್ಯಾಂಸೀ ಕಾಯ ಚಾಲೇ ಮಾಝೇ ಬಳ । ಜಾಲೋಸೇ ದುರ್ಬಳ ಸತ್ತ್ವಹೀನ । ದಗ್ಧ ಪಟ ದಿಸೇ ಸಂಗೀತ ಬರವಂಟ । ಕಾಯ ತ್ಯಾಚೇ ಕಾರಣ ॥೨॥ ಆಳಸ ದೃಷ್ಟೀ ನ ಪಾಹೇ ಆಪುಲೇ । ಏಕಚಿ ದೇಖಿಲೇ**

ಸರ್ವರೂಪ । ಮಾನಾಮಾನ ತೇಥೇ ಖುಂಟೋನಿ ರಾಹಿಲೇ । ಪಿಶುನ ತೋ ಕೋಣ ಬಾಪ । ಜ್ಯೋತಿ ನಾ ಅಂಧಾರ ಅವಘಾ ಏಕಂಕಾರ । ತೇಥೇ ಕಾಯ ಪುಣ್ಯ ಪಾಪ । ವಿಠ್ಠಲಾವಾಚುನಿ ಕಾಂಹೀಚ ನಾವಡೇ । ವೇಗಳಾಲ್ಯಾ ಭಾವೇ ರೂಪ ॥೩॥ ಬಳಬಡಿವಾರ ಲೌಕಿಕ ವೇವ್ಹಾರ । ಗೇಲೀ ಆಶಾ ತೃಷ್ಣಾ ಮಾಯಾ । ಸುಖದುಃಖಾಚೀ ವಾರ್ತಾ ನಾಇಕೇ । ಅಂತರಲೋ ದುರೀ ತಯಾ । ಮೀತೂಪಣಾ ನಿಷ್ಕಾಮ ಹೋ ಊನಿ । ರಾಹಿಲೋ ಆಪುಲಿಯಾ ಠಾಯಾ । ತುಜವಿಣ ಆತಾ ಮಜ ನಾಹೀ ಕೋಣೇ । ತುಕಾ ಮ್ಹಣೇ ದೇವರಾಯಾ ॥೪॥

**ಅರ್ಥ** : – ಶ್ರೀ ಹರಿಯು ಸದ್ಗುರುವಿನ ರೂಪ ಧರಿಸಿ ನನ್ನ ಸ್ಥೂಲ, ಸೂಕ್ಷ್ಮ ಶರೀರಗಳನ್ನು ಕಳ್ಳತನ ಮಾಡಿದನು. ಸರ್ವ ಜಗತ್ತಿನವರು ನನ್ನ ಬಂಧು ಬಳಗದವರೆಂಬ ಭಾವನೆ ಮೂಡಿಸಲು ದೇವನು ನನ್ನ ಶರೀರದಲ್ಲಿನ ಅಹಂಭಾವವನ್ನು ನಾಶ ಮಾಡಿದನು. ಈಗ ನನಗೆ ಯಾವುದರ ಇಚ್ಛೆ ಇಲ್ಲ. ಯಾರ ಭಿಡೆಯೂ ಉಳಿದುಕೊಂಡಿಲ್ಲ. ಈಗ ಸಂಸಾರವು ಕೌತುಕವಾಗಿಯೂ ಕಾಣುವುದಿಲ್ಲ. ಎಲ್ಲ ದೃಷ್ಟಿಯಿಂದ ಉದಾಸನಾಗಿರುವೆನು. ನನ್ನ ಚಿತ್ತದಲ್ಲಿನ ಭಯ, ಮೋಹ, ಲಜ್ಜೆ, ಶಂಕೆ ಇತ್ಯಾದಿ ಸರ್ವವೂ ನಾಶವಾಗಿ ಸರ್ವ ಜಗತ್ತು ಒಬ್ಬ ಶ್ರೀ ಹರಿಯರೂಪದಿಂದ ಕಾಣುತ್ತಿರುವುದು. ಸರ್ವ ಇಂದ್ರಿಯಗಳು ಮತ್ತು ಅಂತಃಕರಣ ವೃತ್ತಿಯು ಶ್ರೀ ವಿಠ್ಠಲನ ಚರಣಗಳಲ್ಲಿ ಸ್ಥಿರವಾಗಿವೆ. ವಿಷಯ ಭೋಗಗಳಿಂದ ದಣಿದುಕೊಂಡಿರುವ ಇಂದ್ರಿಯಗಳು ಈಗ ಶ್ರೀಹರಿಯ ಪಾದಗಳನ್ನು ಬಿಟ್ಟು ಮೇಲಕ್ಕೇಳಲು ಸಿದ್ಧವಿಲ್ಲ ॥೧॥ ನಾನು ಸ್ಥೂಲ ಮತ್ತು ಸೂಕ್ಷ್ಮ ಶರೀರಗಳ ಅಹಂಭಾವವನ್ನು ಬಿಟ್ಟುಕೊಟ್ಟಿರುವುದರಿಂದ ಅವೂ ಕೂಡಾ ನನ್ನ ಸಂಬಂಧ ಕಡಿದುಕೊಂಡಿರುವುವು. ಆದ್ದರಿಂದ ಅವರಲ್ಲಿ ನನ್ನ ಯಾವ ಅಧಿಕಾರ ನಡೆಯಬೇಕಾಗಿದೆ? ನಾನು ಪರಿಪೂರ್ಣವಾಗಿ ದುರ್ಬಲ, ಶಕ್ತಿಹೀನನಾಗಿರುವೆನು. ಸುಟ್ಟಿರುವ ವಸ್ತ್ರದ ಗಳಿಗೆಯು ತಾನು ಇದ್ದಂತೆಯೇ ಇರುವುದು. ಹೀಗೆ ತೋರಿದರೂ ಅದರಿಂದ ಯಾವ ಉಪಯೋಗವಾಗುವುದಿದೆ ? ಅದರಂತೆ ನನ್ನ ಶರೀರವು ಜ್ಞಾನದಿಂದ ಬಾಧಿತವಾಗಿರುವುದರಿಂದ ಯಾವುದೇ ಸಂಸಾರದ ಕಾರ್ಯ ಮಾಡಲು ಸಮರ್ಥವಾಗಿರುವುದಿಲ್ಲ ॥೨॥ ನನ್ನ ದೃಷ್ಟಿಗೆ ಯಾವುದೇ ಸಂಸಾರದ ಪದಾರ್ಥಗಳನ್ನು ನೋಡಲು ಭಾರಿ ಆಲಸ್ಯತನ ಉಂಟಾಗಿರುವುದು. ಆದರೆ ಒಬ್ಬ ಶ್ರೀ ಹರಿಯು ಮಾತ್ರ ಎಲ್ಲ ಕಡೆಗಳಲ್ಲಿಯೂ ಕಾಣುತ್ತಿರುವನು. ಇದರಿಂದ ನನ್ನ ಮಾನ ಅಪಮಾನಗಳು ಸೋರಿ ಹೋಗಿವೆ. ನೀಚರು ಯಾರು, ಉಚ್ಚರು ಯಾರು, ಅಜ್ಞಾನ ಯಾವುದು, ಜ್ಞಾನ ಎಂತಹದ್ದು ಎಂಬುದು ನನಗೆ ತಿಳಿಯುತ್ತಿಲ್ಲ. ಕಾರಣ ಯಾವುದೇ ಪದಾರ್ಥಗಳಾಗಲಿ ಭಿನ್ನ ಭಿನ್ನವಾಗಿ ತೋರುವುದೇ ಇಲ್ಲ. ಸರ್ವವೂ ಹರಿರೂಪವಾಗಿರುವುವು. ಇಂತಹ ಸಾಮ್ಯ ಅವಸ್ಥೆಯಲ್ಲಿ ಪಾಪ ಪುಣ್ಯಗಳಾದರೂ ಹೇಗೆ ಇರಲು ಸಾಧ್ಯ ? ನನಗೆ ವಿಠ್ಠಲನ ಹೊರತಾಗಿ ಯಾವುದೂ ಪ್ರಿಯವಾಗುವುದಿಲ್ಲ ನಾನು ಸಂಸಾರದಲ್ಲಿನ ಯಾವುದೇ ಪದಾರ್ಥಗಳಲ್ಲಿ ಪ್ರೇಮ, ದ್ವೇಷ, ಉಪೇಕ್ಷೆ ಅಥವಾ ಆಶೆ, ಹೀಗೆ ಯಾವುದೇ ಭಾವನೆಯಿಂದ ನೋಡುವುದಿಲ್ಲ ॥೩॥ ನನ್ನ ಶಕ್ತಿ, ನನ್ನ ದೊಡ್ಡಸ್ತಿಕೆ ಮತ್ತು ಲೌಕಿಕ ವ್ಯವಹಾರ ಇವುಗಳನ್ನು ನಾನು ತ್ಯಜಿಸಿರುವೆನು. ಇದರಿಂದ ಸಹಜವಾಗಿಯೇ ಆಶೆ, ತೃಷೆ, ಪ್ರೇಮ ಇವು ನಷ್ಟವಾಗಿರುವುವು. ಸುಖ

ದುಃಖಗಳ ವಾರ್ತೆಗಳನ್ನು ನಾನು ಕೇಳುವುದೇ ಇಲ್ಲ. ನಾನು, ನೀನೆಂಬುದನ್ನು ದೂರ ಓಡಿಸಿರುವೆನು. ನಾನು ನನ್ನ ಸ್ವರೂಪದಲ್ಲಿ ನಿಷ್ಕಾಮನಾಗಿ ಉಳಿದುಕೊಂಡಿರುವೆನು. ಹೇ ದೇವರಾಯನೇ, ನಿನ್ನನ್ನು ಬಿಟ್ಟರೆ ಇನ್ನು ನನಗೆ ಅನ್ಯರು ಯಾರೂ ಇಲ್ಲ ಎಂದು ತುಕಾರಾಮ ಮಹಾರಾಜರು ಹೇಳುವರು ॥೪॥

**೧೯೮೧. ಕಥಾ ಪುರಾಣ ಐಕತಾ । ಝೋಪೇ ನಾಥಿಲೇ ತತ್ತ್ವತಾ । ಖಾಟೇವರಿ ಪಡತಾ । ವ್ಯಾಪೀ ಚಿಂತಾ ತಳಮಳ ॥೧॥ ಐಸೀ ಗಹನ ಕರ್ಮಗತಿ । ಕಾಯ ತಯಾಸೀ ರಡತೀ । ಜಾಲೇ ಜಾಣತೇ ಜೇ ಚಿತ್ತೀ । ಕಾಂಹೀ ನೇಘೇ ಅಪುಲ್ಯಾ ॥೨॥ ಉದಕ ಲಾವಿತಾ ನ ಧರೇ । ಚಿಂತಾ ಕರೀ ಕೇವ್ಹಾ ಸರೇ । ಜಾಊ ನಕಾ ಧೀರೇ । ಮ್ಹಣೇ ಕರಿತಾ ಥವಾಳ್ಯಾ ॥೩॥ ಜವಳೀ ಗೋಚಿಡ ಕ್ಷೀರಾ । ಜೈಸೀ ಕಮಳಣೀ ದುರ್ದುರಾ । ತುಕಾ ಮ್ಹಣೇ ದುರ । ದೇಶತ್ಯಾಗ ತಯಾಸೀ ॥೪॥**

**ಅರ್ಥ :–** ಹರಿಕಥೆ ಅಥವಾ ಪುರಾಣ ಕೇಳಲು ಕುಳಿತಾಗ ಸಾವಕಾಶವಾಗಿ ನಿದ್ರೆ ಆವರಿಸುವುದು. ಮಲಗಬೇಕೆಂದು ಮನೆಗೆ ಬಂದು ಪಲ್ಲಂಗದ ಮೇಲೆ ಬಿದ್ದುಕೊಳ್ಳಲು ಆಗ ಸಂಸಾರದ ಚಿಂತೆ ಹತ್ತಿ ತಳಮಳ ಉಂಟಾಗುವುದು ॥೧॥ ಹೀಗೆ ಕರ್ಮಗತಿಯು ಗಹನವಾಗಿದೆ. ಇಂತಹ ವಿಚಿತ್ರ ಗತಿ ಎದುರಿನಲ್ಲಿ ಈ ಪಾಮರರು ಏನೆಂದು ಅಳುವರು? ಏನೆಂದು ಮಾಡಲು ಸಾಧ್ಯ? ಜಾಣರಾದವರೂ ಕೂಡ ತಮ್ಮ ಚಿತ್ತದಲ್ಲಿ ಸದ್ವಿಚಾರಕ್ಕೆ ಅವಕಾಶ ಕೊಡುವುದಿಲ್ಲ ॥೨॥ ಕಥಾ ಕೀರ್ತನದಲ್ಲಿ ಕಣ್ಣುಗಳಿಗೆ ನಿದ್ರೆ ಆರಂಭಿಸಿದರೆ ಆಗ ಅವುಗಳಿಗೆ ನೀರು ಒರೆಸುವರು. ಹೀಗೆ ಏನು ಮಾಡಿದರೂ ಕೂಡ ನಿದ್ರೆ ಹೋಗದೇ ಈ ಪುರಾಣವು ಎಂದು ಮುಗಿದೀತು ಎಂದು ಚಿಂತಿಸಬೇಕಾಗುವುದು. ಇವನೇ ಬೇರೆಯವರಿಗೆ ಚೇಷ್ಟೆ ಮಾಡುತ್ತಾ ಕುಳಿತಾಗ ಯಾರಾದರೂ ಅಲ್ಲಿಂದ ಏಳಲು ಪ್ರಯತ್ನಿಸಿದರೆ "ಏಳಬೇಡಿರಿ, ಇನ್ನು ಮುಂದೆ ನಿಮಗೆ ಚಮತ್ಕಾರ ವಿಷಯ ಹೇಳಬೇಕಾಗಿದೆ " ಎಂದು ಅವರನ್ನು ತಡೆಯುವನು ॥೩॥ ಉಣ್ಣೆಯು ಕೆಚ್ಚಲದಲ್ಲಿಯೇ ಇರುವುದು. ಆದರೆ ಅದು ಮಧುರವಾಗಿರುವ ಹಾಲನ್ನು ಸೇವಿಸದೇ ಅಶುದ್ಧ ರಕ್ತದ ಸೇವನೆ ಮಾಡುತ್ತಿರುತ್ತದೆ. ಕಮಲ ಮತ್ತು ಕಪ್ಪೆ ಒಂದೇ ಸ್ಥಳದಲ್ಲಿರುವುವು. ಆದರೆ ಕಪ್ಪೆಯು ಕಮಲ ಪರಾಗವನ್ನು ಎಂದೂ ಸೇವಿಸುವುದಿಲ್ಲ. ಅದರಂತೆ ಮೂರ್ಖರಾದವರು ಹರಿಕಥೆ ಪುರಾಣಗಳನ್ನು ಕೇಳದೇ ಎದ್ದು ಹೋಗುವರು ಎಂದು ತುಕಾರಾಮ ಮಹಾರಾಜರು ಹೇಳುವರು ॥೪॥

**೧೯೮೪. ನಾವಡೇ ಜ್ಯಾ ಕಥಾ ಉಠೋನಿಯಾ ಜಾತೀ । ತೇ ಯಮಾ ಫಾವತೀ ಬರೇವೋಜಾ ॥೧॥ ತೋ ಅಸೇ ಜವಳೀ ಗೋಚಿಡಾಚ್ಯಾ ನ್ಯಾಯೇ । ದೇಶತ್ಯಾಗೇ ಠಾಯ ತಯಾದುರೀ ॥೨॥ ನವ್ಹೇ ಭಲಾ ಕೋಣೇ ನಾವಡೇ ದುಸರಾ । ಪಾಹುಣಾ ಕಿಂಕರಾ ಯಮಾ ಹೋಯ ॥೩॥ ತುಕಾ ಮ್ಹಣೇ ತಯಾ ಕರಾವೇ ತೇ ಕಾಈ ! ಪಾಷಾಣ ಕಾ ನಹೀ ಜಳಾಮಧ್ಯೇ ॥೪॥**

**ಅರ್ಥ :–** ಯಾರಿಗೆ ಹರಿಕಥೆ ಕೀರ್ತನೆಯು ಇಷ್ಟವಾಗುಗುದಿಲ್ಲವೋ ಮತ್ತು ಯಾರು ಹರಿಕಥೆ ಕೀರ್ತನೆಯಲ್ಲಿ ಎದ್ದು ಹೋಗುವರೋ, ಅವರ ಪತ್ತೆಯು ತಪ್ಪದೇ ಯಮನ ಕೈಗೆ ಸಿಗುವುದು ॥೧॥ ಈ

ಅಭಾವಿಕನು ಹರಿಕಥೆಯ ಸಮೀಪವಿರುವನು ನಿಜ, ಆದರೆ ಆಕಳ ಕೆಚ್ಚಲಿನ ಉಣ್ಣೆಯಂತೆ ಕಥಾಮೃತವನ್ನು ಸೇವಿಸಲಾರನು. ಅಷ್ಟೇ ಅಲ್ಲ, ಇವನು ಆ ಸ್ಥಳವನ್ನು ಬಿಟ್ಟು ಕೊಟ್ಟು ದೂರ ಹೋಗಿ ಕುಳಿತುಕೊಳ್ಳುವನು ॥೨॥ ಇವನಿಗೆ ತನಗಿಂತ ಹೆಚ್ಚಿನ ಜಾಣರು ಮತ್ತು ಉತ್ತಮ ನಡತೆಯವರು ಪ್ರಿಯರಲ್ಲ. ಇವನು ಯಮದೂತರ ದಾಸನಾಗಿ ಅವರ ಸಮೀಪದವನಾಗುವನು ॥೩॥ ಇಂತಹ ಶ್ರದ್ಧಾಹೀನ ಉನ್ಮತ್ತನಿಗೆ ಏನು ಮಾಡಬೇಕು? ನೀರಿನಲ್ಲಿ ಕಲ್ಲು ಇರುವುದಿಲ್ಲವೇ? ಎಂದು ತುಕಾರಾಮ ಮಹಾರಾಜರು ಹೇಳುವರು ॥೪॥

**೧೯೮೫. ಜವಳೀ ನಾಹೀ ಚಿತ್ತ । ಕಾಯ ಮಾಂಡಿಯೇಲೇ ಪ್ರೇತ ॥೧॥ ಕೈಸಾ ಪಾಹೇ ಚಂದ್ರೀದೃಷ್ಟೀ । ದೀಪ ಸ್ನೇಹಾಚ್ಯಾ ಶೇವಟೀ ॥೨॥ ಕಾತೇಲೇಸೇ ಶ್ವಾನ । ತೈಸೇ ದಿಶಾ ಹಿಂಡೇ ಮನ ॥೩॥ ತ್ಯಾಚೇ ಕಾನೀ ಹಾಣೇ । ಕೋಣ ಬೋಂಬ ತುಕಾ ಮ್ಹಣೇ ॥೪॥**

**ಅರ್ಥ** :- ಹರಿಕಥೆ ಕೀರ್ತನೆಯಲ್ಲಿ ಕುಳಿತುಕೊಂಡರೂ ಕೂಡ ಯಾರ ಚಿತ್ತವು ಸ್ವಾಧೀನವಿಲ್ಲವೋ, ಅವರು ಶೃಂಗರಿಸಿದ ಪ್ರೇತ ಸಮಾನರು ಎಂದು ತಿಳಿಯಬೇಕು ॥೧॥ ಕೆಲವರು ಕಥೆಯಲ್ಲಿನ ಪ್ರತಿಪಾದ್ಯ ವಿಷಯವನ್ನು ತಿಳಿಯದೇ ಸಂಶಯ ದೃಷ್ಟಿಯಿಂದ ನೋಡುವರು. ಇವರು ಎಣ್ಣೆ ಮುಗಿದ ದೀಪದಂತೆ ತೋರುವರು ॥೨॥ ಮೆಟ್ಟಿಕೊಂಡ ನಾಯಿಗಳಂತೆ ಇವರ ಮನಸ್ಸು ಸಿಕ್ಕ ಸಿಕ್ಕಲ್ಲಿ ತಿರುಗುತ್ತಿರುವುದು ॥೩॥ ಇಂತಹ ಅಯೋಗ್ಯ ಮನುಷ್ಯನ ಕಿವಿಗಳಲ್ಲಿ ಯಾರು ಬೊಬ್ಬೆ ಇಡಬೇಕು? ಇಟ್ಟರೂ ಕೂಡ ಯಾವ ಉಪಯೋಗ? ಎಂದು ತುಕಾರಾಮ ಮಹಾರಾಜರು ಹೇಳುವರು ॥೪॥

**೧೯೮೬. ದುರ್ಬಳಾ ವಾಣೇಚ್ಯಾ ಏಕ ದೋನ ಸಿಧ್ಧಿ । ಸದೈವಾ ಸಮಾಧಿ ವಿಶ್ವರೂಪೀ ॥೧॥ ಕಾಯ ತ್ಯಾಚೇ ವಾಯಾ ಗೇಲೇ ತೇ ಏಕ । ಸದಾ ಪ್ರೇಮಸುಖ ಸರ್ವಕಾಳ ॥೨॥ ತೀರ್ಥ ದೇವ ಕುರೀ ತಯಾ ಭಾಗ್ಯಹೀನಾ । ವಿಶ್ವ ತ್ಯಾ ಸಜ್ಜನಾ ದುಮದುಮಿಲೇ ॥೩॥ ತುಕಾ ಮ್ಹಣೇ ಏಕ ವಾಹಾತೀ ಮೋಳಿಯಾ । ಭಾಗ್ಯೇ ಆಗಳಿಯಾ ಘರಾ ಯೇತೀ ॥೪॥**

**ಅರ್ಥ** :- ಕೆಲವರು ಯೋಗಾಭ್ಯಾಸದ ಕಷ್ಟ ಸೋಸಿ ಒಂದೆರಡು ಸಿಧ್ಧಿಗಳನ್ನು ಪ್ರಾಪ್ತ ಮಾಡಿಕೊಳ್ಳುವರು. ಇವರು ಬಡವ ದರಿದ್ರರು. ವಿಶ್ವರೂಪ ಪರಮಾತ್ಮನಲ್ಲಿ ಸಮ ಬ್ರಹ್ಮವನ್ನು ಕಾಣುವ ಜ್ಞಾನೀ ಭಕ್ತರು ಭಾಗ್ಯವಂತರು. ಏಕೆಂದರೆ ಅವರಿಗೆ ನಿತ್ಯ ಸಮಾಧಿ ಪ್ರಾಪ್ತವಾಗುವುದು ॥೧॥ ಈ ಜ್ಞಾನೀ ಭಕ್ತರ ಕಷ್ಟವು ಒಂದಾದರೂ ವ್ಯರ್ಥ ಹೋಗುವುದೇ ? ಇವರ ಕಷ್ಟಗಳು ಸಫಲವಾಗುವುವು. ಅಲ್ಲದೇ ಶ್ರೀಹರಿಯ ಪ್ರೇಮಸುಖವನ್ನು ಸರ್ವಕಾಲದಲ್ಲಿ ಅಖಂಡವಾಗಿ ಭೋಗಿಸುವರು ॥೨॥ ಭಾಗ್ಯ ಹೀನರಿಗೆ ತೀರ್ಥಗಳು ದೇವರು ದೂರ ಇರುವುವು. ಆದರೆ ಭಕ್ತರಿಗೆ ಸರ್ವ ಜಲವು ಗಂಗಾರೂಪವಾಗಿ ಮತ್ತು ಸರ್ವ ಭೂತಗಳು ದೇವರಾಗಿ ತೋರುವುದು. ಅದ್ದರಿಂದ ಇವರಿಗೆ ಸರ್ವ ವಿಶ್ವವು ತೀರ್ಥ ದೇವರಿಂದ ತುಂಬಿದಂತೆ ಕಾಣುವುದು ॥೩॥ ಎಷ್ಟೋ ಜನರು ಅಲ್ಪ ಹಣಕ್ಕಾಗಿ ತಲೆಯ ಮೇಲೆ ಕಟ್ಟಿಗೆಯ ಹೊರೆ

ಹೊರುವರು. ಕೆಲವು ಭಾಗ್ಯವಂತರಿಗೆ ಮಹತ್ವದ ಲಾಭವು ಮನೆಗೆ ನಡೆದು ಬರುವುದು. ಆದ್ದರಿಂದ ಯೋಗಿಗಳಿಗಿಂತ ಭಕ್ತರು ಶ್ರೇಷ್ಠರು ಎಂದು ತುಕಾರಾಮ ಮಹಾರಾಜರು ಹೇಳುವರು ॥೪॥

**ತುಕಾರಾಮನು ಇಂದ್ರಾಯಣಿಯಲ್ಲಿ ಮುಳುಗಿಸಿದ ಸಾಲದ ಕಿರ್ದಿ ಪುಸ್ತಕ**

ತುಕಾರಾಮನ ಚರಿತ್ರೆಯನ್ನು ಬರೆಯುವ ಮಹಿಪತಿಯು ಈ ಸಂದರ್ಭದ ಕುರಿತು ನೀಡಿದ ಮಾಹಿತಿಯು ಹೀಗಿದೆ– ತುಕಾರಾಮನು ದೋಹೂ ಸನಿಹದಲ್ಲಿರುವ ಭಾಂಬನಾಥ ಎಂಬ ಬೆಟ್ಟದಲ್ಲಿ ಏಳುದಿನ ಚಿಂತನೆಯಲ್ಲಿ ಕಳೆದು ಏಳು ದಿನ ಶೋಧ ನಡೆಸಿದ ಬಳಿಕ ಅವನು ಆ ಬೆಟ್ಟದಲ್ಲಿ ಗೋಚರಿಸಿದನು. ಅನಂತರ ಕಾನ್ಹೋಬಾ ಎಂಬುವವನು ಅವನನ್ನು ದೋಹೂಗೆ ಕರೆತಂದನು. ಮರಳುವಾಗ ತುಕಾರಾಮನು ಇಂದ್ರಾಣಿಯ ಹೊಳೆಯ ದಡದಲ್ಲಿ ಕುಳಿತನು. ಸೂರ್ಯೋದಯದ ಕಾಲಕ್ಕೆ ಸ್ನಾನ ಮುಗಿಸಿ ಅವರಿಬ್ಬರೂ ಏಳು ದಿನಗಳ ಉಪವಾಸವನ್ನು ತೊರೆದರು. ಅವನ ತಂದೆ ಜನರಿಗೆ ಸಾಲವನ್ನು ನೀಡಿದ್ದ. ತುಕಾರಾಮನು ಕಾನ್ಹೋಬಾನನ್ನು ಮನೆಗೆ ಕಳಿಸಿ ಆ ಕಿರ್ದಿ ಪುಸ್ತಕವನ್ನು ತರಿಸಿದನು. ಆನಂತರ ಆ ಕಾಗದ ಪತ್ರವನ್ನು ಸರಿಯಾಗಿ ಇಬ್ಭಾಗ ಮಾಡಿದನು. ಅದರಲ್ಲಿಯ ಒಂದು ಭಾಗವನ್ನು ಕಾನ್ಹೋಬಾನಿಗೆ ನೀಡಿದನು. ತನ್ನ ಪಾಲಿಗೆ ಬಂದ ಕಾಗದ ಪತ್ರಗಳನ್ನು ಇಂದ್ರಾಣಿಯ ಹೊಳೆಯಲ್ಲಿ ಮುಳುಗಿಸಿದನು.

ಈಗ ನಾವು ಈ ಘಟನೆಯ ಹಿನ್ನೆಲೆ ಮತ್ತು ಸ್ವರೂಪ, ತುಕಾರಾಮನ ಜೀವನದಲ್ಲಿ ಅದಕ್ಕಿರುವ ಸ್ಥಾನ ಮತ್ತು ಮಹತ್ವ, ಅದರ ಸರಿಯಾದ ಅನ್ವಯಾರ್ಥ, ವಿವಿಧ ಲೇಖಕರು ಅದರ ಬಗೆಗೆ ಬರೆದ ಲೇಖನಗಳ ವಿಷಯದ ಕುರಿತು ಒಂದಿಷ್ಟು ವಿವೇಚನೆ ಮಾಡೋಣ.

ಹಲವು ತಲೆಮಾರಿನಿಂದ ತುಕಾರಾಮನ ಮನೆತನದವರು ಬಡ್ಡಿ ವ್ಯವಹಾರ ಮಾಡುತ್ತಿದ್ದರು. ಅವನ ತಂದೆ ನೀಡಿದ ಸಾಲವನ್ನು ಊರಲ್ಲಿಯ ಹಲವು ಜನರಿಂದ ವಸೂಲಿ ಮಾಡಬೇಕಿತ್ತು. ಮಹಾಜನ ಮಾಡುವ ಕಾರ್ಯವೂ ಅವರ ಕುಟುಂಬದವರ ಬಳಿಗಿತ್ತು. ಅಂದರೆ ವ್ಯಾಪಾರಿಗಳ ತೂಕದ ಮೇಲೆ ನಿಯಂತ್ರಣವಿಡುವ ಕಾರ್ಯ ಅವರ ಕಡೆಗಿತ್ತು. ಅವರ ವ್ಯಾಪಾರವೂ ಚೆನ್ನಾಗಿ ನಡೆಯುತ್ತಿತ್ತು. ಅಲ್ಲದೆ ಹೊಲದಿಂದಲೂ ಒಳ್ಳೆಯ ಆದಾಯ ಬರುತ್ತಿತ್ತು. ಅಂದರೆ ಆರ್ಥಿಕವಾಗಿ ತುಕಾರಾಮನು ಅತ್ಯಂತ ಸುರಕ್ಷಿತ ಮತ್ತು ಸುಸ್ಥಿರನಾಗಿದ್ದ ಎಂದರ್ಥ.

**ಜೀವಿತಕಾರ್ಯದ ಆರಂಭ ಬಿಂದು**

ಬಾಹ್ಯನೋಟಕ್ಕೆ ಈ ಸಾಲದ ಕಿರ್ದಿ ಪುಸ್ತಕವನ್ನು ಮುಳುಗಿಸಿದ ಘಟನೆಯು ಯಾರಿಗೇ ಆದರೂ ಅಸಾಧಾರಣವೆನಿಸುತ್ತದೆ. ಸಂಪನ್ನ ಪರಿಸ್ಥಿತಿಯ ಪರಿವಾರದಲ್ಲಿರುವ ವ್ಯಕ್ತಿಯು ಈ ಬಗೆಯ ನಿರ್ಣಯವನ್ನು ಅಪರೂಪಕ್ಕೆ ತೆಗೆದುಕೊಳ್ಳುತ್ತಾನೆ. ಸಂಸಾರಿಕ ಹೊಣೆಯನ್ನು ಹೊತ್ತನಂತರ

ತುಕಾರಾಮನು ಕೈಗೊಂಡ ಮಹತ್ವದ ನಿರ್ಣಯವೆಂದು ಈ ಘಟನೆಯನ್ನು ಪರಿಗಣಿಸಬಹುದಾಗಿದೆ. ಒಂದರ್ಥದಲ್ಲಿ ಈ ನಿರ್ಣಯವು ತುಕಾರಾಮನ ಜೀವನದ ಆರಂಭ ಬಿಂದುವೆನ್ನಲಡ್ಡಿಯಿಲ್ಲ. ಅವನು ಮುಂದಿನ ಇಪ್ಪತ್ತು ವರುಷಗಳಲ್ಲಿ ಮಂಡಿಸಿದ ಜೀವನ ಮೌಲ್ಯದ ಸಂಪೂರ್ಣ ಸಾರವು ಈ ಘಟನೆಯಲ್ಲಿದೆ. ಈ ಕೃತಿಯ ಒಂದು ಶ್ರೇಷ್ಠ ಬೀಜವಾಗಿದ್ದು, ಅದುವೇ ಮುಂದೆ ತುಕಾರಾಮನ ಜೀವನ ಕಾರ್ಯದ ರೂಪದಲ್ಲಿ ಅಂಕುರಿಸಿತು, ಅರಳಿತು, ಹೂವು ಬಿಟ್ಟಿತು, ಪರಿಮಳ ಹರಡಿತು. ನಾವು ಅವನ ಈ ಕಾರ್ಯದಲ್ಲಿ ನಿರ್ಮಲ ಜೀವನದ ಪವಿತ್ರ ಪ್ರತಿಬಿಂಬವನ್ನು ಕಾಣುತ್ತೇವೆ. ಈ ಕಾರ್ಯವು ಅವನ ಜೀವನದ ಕೇಂದ್ರಬಿಂದುವಾಗಿದ್ದು, ಅದು ಸುತ್ತಲಿನ ಪರಿಸರದಲ್ಲಿ ವಿಸ್ತರಿಸುವಷ್ಟು ಅಮೂಲ್ಯವಾಗಿತ್ತು.

**ಸಾಕ್ಷಾತ್ಕಾರದ ಆಶಯ ಸಾಮಾಜಿಕವಾದದ್ದು**

ಭಾಂಬನಾಥನ ಬೆಟ್ಟದಲ್ಲಿ ಏಳು ದಿನಗಳ ಕಾಲ ಚಿಂತನೆಯಲ್ಲಿ ಕಳೆದ ಬಳಿಕ ತುಕಾರಾಮನಿಗೆ ಜೀವನದ ಕುರಿತು ವಿಶೇಷ ಸಾಕ್ಷಾತ್ಕಾರವಾಯಿತು. ಈ ಸಾಕ್ಷಾತ್ಕರದ ಪ್ರತ್ಯಕ್ಷ ಪರಿಣಾಮವಾಗಿ ಅವನು ಮತ್ತೆ ಮನೆಯಲ್ಲಿ ಕಾಲಿರಿಸಿರುವ ಮೊದಲು ಸಾಲದ ಕಿರ್ದಿ ಪುಸ್ತಕವನ್ನು ಇಂದ್ರಾಣಿಯಲ್ಲಿ ಮುಳುಗಿಸಿದನು. ಸಾಕ್ಷಾತ್ಕಾರವಾಯಿತೆಂದು ಅವನು ಕಾವೀ ಬಟ್ಟೆ ಧರಿಸಿ ಸನ್ಯಾಸ ಸ್ವೀಕರಿಸಲಿಲ್ಲ. ಅಥವಾ ಇನ್ನಾವುದೇ ಬಗೆಯ ಧಾರ್ಮಿಕ, ಆಧ್ಯಾತ್ಮಿಕವಾದ ಹೆಜ್ಜೆಯನ್ನು ಎತ್ತಲಿಲ್ಲ. ಆದರೆ ಸಾಕ್ಷಾತ್ಕಾರದ ನಂತರ ಕೈಗೊಂಡ ಮೊದಲ ಕಾರ್ಯವಾದ ಹೆಜ್ಜೆಯನ್ನು ಎತ್ತಲಿಲ್ಲ. ಆದರೆ ಸಾಕ್ಷಾತ್ಕಾರವು ಗೂಢ, ಗಹನವಾದ ಆಧ್ಯಾತ್ಮಿಕ ಸ್ವರೂಪದ್ದಲ್ಲ. ಅದು ಸಮಾಜಸ್ಥಿತಿಯ ಅಮಾಯಕ ಮತ್ತು ಸಹೃದಯ ನಿರೀಕ್ಷಣೆಯಿಂದ ನಿರ್ಮಾಣಗೊಂಡ ಅಸಲೀ ಜೀವನದರ್ಶನದ ಸ್ವರೂಪದ್ದಾಗಿತ್ತು. ಭಾಂಬನಾಥ ಬೆಟ್ಟದಲ್ಲಿ ನಡೆಸಿದ ಚಿಂತನೆಯು ಆಧ್ಯಾತ್ಮ ಸ್ವರೂಪದ್ದಲ್ಲ. ಅದು ಸಮಾಜದಲ್ಲಿಯ ಅನ್ಯಾಯವನ್ನು ಹೋಗಲಾಡಿಸುವ, ಸಮಾಜದಲ್ಲಿ ನಿಜವಾದ ನೀತಿಯನ್ನು ನಿರ್ಮಾಣ ಮಾಡುವಂತಹದಾಗಿತ್ತು. ಈ ಸಾಕ್ಷಾತ್ಕಾರದ ನಂತರ ಅವನು ದೇವರ ಭಕ್ತಿಯ ಕಡೆಗೆ ಹೊರಳಿದನು. ಅಂದರೆ ಅವನು ದೇವರ ಕಡೆಗೆ ಹೊರಟ ಮಾರ್ಗ ಸಹ ಆಧ್ಯಾತ್ಮಿಕ ಸ್ವರೂಪದ್ದಾಗಿರಲಿಲ್ಲ. ಅದು ಸಾಮಾಜಿಕ ಆಶಯದ್ದಾಗಿತ್ತು ಎಂದೇ ಅರ್ಥ.

**ವಿಠ್ಠಲನತ್ತ ಮುಖ ಮಾಡುವ ನಿಜವಾದ ಅರ್ಥ**

ಈ ಸಂಕಟಕ್ಕೆ ಕುಗ್ಗಿದ್ದಲ್ಲ, ಬಗ್ಗಿದ್ದಲ್ಲ, ಹೆದರಿದ್ದಲ್ಲ, ಸಂಸಾರದ ಬಗೆಗೆ ಅಸಹ್ಯಗೊಂಡಿದ್ದಲ್ಲ, ಬೇಸತ್ತಿದ್ದಲ್ಲ, ಹಾಗೇ ಇದೊಂದು ಉಚ್ಚಕೋಟಿಯ ಧ್ಯೇಯವಾದವಾಗಿತ್ತು. ಇದೊಂದು ಮಾನವೀಯ ಯಾತ್ರೆಯ ಉತ್ತುಂಗ ನೆಗೆತವಾಗಿತ್ತು. ಖರೆಯೆಂದರೆ ಇದೇ ಕಾರಣಕ್ಕಾಗಿ ಅವನು ವಿಠ್ಠಲನ ಕಡೆಗೆ ಮುಖ ಮಾಡಿದ್ದ. ಇದುವೇ ಅವನ ಈಶ್ವರ ಪೂಜೆಯಾಗಿತ್ತು. ದೀನ-ದಲಿತರನ್ನು ಯಾರು ಅಪ್ಪಿ ಕೊಳ್ಳುತ್ತಾರೋ ಅವನೇ ನಿಜವಾದ ಸಾಧು-ಸಂತ, ದೇವರು ಇಂತಹ ಸಾಧು-ಸಂತರ ಬಳಿಯಲ್ಲೇ ಇರುತ್ತಾನೆ ಎಂದವನು ದೇವರ ಪ್ರಾಪ್ತಿಯ ವ್ಯಾಖ್ಯೆ ನೀಡಿದ್ದಾನೆ. ಆ ಸಾಧುತ್ವ ಆ ದೇವರು ದುಃಖ-

ಸಂಕಟಗ್ರಸ್ತ ಜನರ ಕಂಗಳಲ್ಲಿ ಕಣ್ಣೀರು ತರುವ ಮಾರ್ಗದಿಂದಲ್ಲ, ಅವರ ಕಂಬನಿಯನ್ನು ಒರೆಸುವ ಮಾರ್ಗದಿಂದ ಪ್ರಾಪ್ತವಾಗುತ್ತಾನೆ ಎಂಬ ಶ್ರದ್ಧೆ ಅವನದಾಗಿತ್ತು. ಅವನು ಸಂಸಾರಕ್ಕೆ ಬೇಸತ್ತು ದೂರದಲ್ಲೆಲ್ಲೋ ಇದ್ದ ದೇವರ ಕಡೆಗೆ ಮುಖಮಾಡಿದ್ದಲ್ಲ, ಸಂಸಾರ ಸಾಗಿಸುತ್ತಲೇ ಮಾನವೀಯತೆಯನ್ನು ಜೋಪಾನ ಮಾಡುವ ಸ್ವರೂಪದಲ್ಲಿರುವ ದೇವರ ಪ್ರಾಪ್ತಿಗಾಗಿ ಅವನು ತನ್ನ ಸರ್ವಸ್ವವನ್ನು ಪಣಕ್ಕೊಡ್ಡಿದ್ದ ಎನ್ನುವುದೇ ನಿಜವಾದದ್ದು. ತುಕಾರಾಮನು ಉತ್ಕಟತೆಯಿಂದ ವಿಠ್ಠಲನ ಕಡೆಗೆ ಮುಖ ಮಾಡಿದ್ದು ಅಲ್ಲದೆ ಅವನನ್ನೇ ದೃಢವಾಗಿ ತಬ್ಬಿಕೊಳ್ಳಲು ಮತ್ತೆ ಒಂದು ಪ್ರಬಲ ಕಾರಣವಿತ್ತು. ಒಂದೆಡೆ ಅವನು ಶೂದ್ರತ್ವವನ್ನು ಉದ್ಧಾರ ಮಾಡಿ ಅವನನ್ನು ಅಪಮಾನಗೊಳಿಸುವ, ತುಚ್ಛವಾಗಿ ಕಾಣುವ ವೈದಿಕ ಪರಂಪರೆಯಿತ್ತು. ಅವನು ಸ್ವೀಕರಿಸಿದ ಜೀವನ ಕ್ರಮಕ್ಕೆ ಅವರ ಬೆಂಬಲ ಸಿಗುವುದಾಗಲಿ ಪ್ರೋತ್ಸಾಹ ಸಿಗುವುದಾಗಲಿ ಅಸಾಧ್ಯದ ಮಾತಾಗಿತ್ತು. ಅದು ಕಡುವಾಗಿ ವಿರೋಧಿಸುವ, ತುಚ್ಛತೆ ಮತ್ತು ತಿರಸ್ಕಾರವೇ ಸಿಗುವ ಸಾಧ್ಯತೆಯಿತ್ತು. ಇಂಥ ಸ್ಥಿತಿಯಲ್ಲಿ ಲಾಭವಿಲ್ಲದೆ ಪ್ರೀತಿಸುವ, ತಾಯಿಯಂತೆ ಕರುಣಾಳು ಮತ್ತು ವಾತ್ಸಲ್ಯಮಯಿಯಾದ ವಿಠ್ಠಲನ ಸಹಾಯದಿಂದಲೇ ಅವನು ಹೋರಾಟಕ್ಕೆ ಸನ್ನದ್ಧನಾದ ಎಂಬುದೇ ಮತ್ತೊಂದು ಕಾರಣ.

**ಸ್ಪರ್ಶದಿಂದಲ್ಲ, ಸಂಕುಚಿತ ಮನೋಭಾವನೆಯಿಂದ ಮೈಲಿಗೆ**

ಸ್ವತಃ ಬ್ರಾಹ್ಮಣನಾದವನು ಚಾಂಡಾಲನನ್ನು ಸ್ಪರ್ಶಿಸುವುದಿಲ್ಲ. ಚಾಂಡಾಲನ ಈ ಮೈಲಿಗೆಯನ್ನು ತಪ್ಪಿಸುವುದರಿಂದ ತನ್ನ ಪರಿಶುದ್ಧತೆಯು ಖಾಯಂ ಉಳಿಯುತ್ತದೆ ಎಂದವನ ಭಾವನೆ. ವಾಸ್ತವಿಕ ಸಂಗತಿಯೆಂದರೆ ಅವನ ಅಂತರಂಗದಲ್ಲೇ ಮೈಲಿಗೆಯಿದೆ. ಏಕೆಂದರೆ ಮಹಾರ ಅಥವಾ ಚಾಂಡಾಲನ ಸ್ಪರ್ಶದಿಂದ ಮೈಲಿಗೆಯಾದರೆ, ಸಂಕುಚಿತ ಮನೋಭಾವನೆಯಿಂದ ಮೈಲಿಗೆಯಾಗುತ್ತದೆ ಎನ್ನುವುದು ತುಕಾರಾಮನ ಅಂಬೋಣ. ಅವರವರ ವಿಚಾರದಿಂದ ಜಾತಿ ನಿರ್ಧಾರವಾಗುತ್ತದೆ ಎಂದು ತುಕಾರಾಮನ ಭಾವನೆ. ಸಮ ಬ್ರಹ್ಮನೆಂದರೆ ಮನುಷ್ಯ-ಮನುಷ್ಯನಲ್ಲಿ ಸಮತೆಯ ಸದಾಚಾರದ ವಿಚಾರ ಮನದೊಳಗೆ ಇದ್ದರೆ, ಅವನ ಜಾತಿಯು ಶ್ರೇಷ್ಠ ಮತ್ತು ಶುದ್ಧವಾಗಿರುತ್ತದೆ. ಅದರ ಬದಲು ಅನ್ಯರನ್ನು ಹಂಗಿಸುವ ವಿಷಮತೆಯ ಯೋಚನೆಯು ಮನದಲ್ಲಿದ್ದರೆ, ಅವನದು ಕೀಳು ಜಾತಿ ಎಂದು ಭಾವಿಸಬೇಕು.

**ಅವನ ಜಾತಿ-ಕುಲ ಏಕೆ ಬೇಕು?**

ಸಾಮಾಜಿಕ ವ್ಯವಹಾರದಲ್ಲಿಯ ಜಾತಿ ನಿರಪೇಕ್ಷವನ್ನು ಸ್ಪಷ್ಟಪಡಿಸುವಾಗ ತುಕಾರಾಮನು ಒಂದು ಅಭಂಗದಲ್ಲಿ ಮುಂದಿನ ವಿಚಾರವನ್ನು ಮಂಡಿಸಿದ್ದಾನೆ. ವಣಿಕನ ಅಂಗಡಿಯಲ್ಲಿದ್ದ ಬೆಲ್ಲ ಖರೀದಿಸುವಾಗ, ಅವನ ಜಾತಿ-ಕುಲ ಏಕೆ ಬೇಕು? ತಿಪ್ಪೆಯಲ್ಲಿ ಬೆಳೆದ ತುಳಸಿಯನ್ನು ಅಲ್ಲಿಯ ಹೊಲಸು ಕಂಡು ಚೆಲ್ಲುವುದು ಸರಿಯೇ? ಹಲಸಿನ ಕವಚಕ್ಕೂ ನಮಗೂ ಏನು ಸಂಬಂಧ? ಅದರಲ್ಲಿಯ ಕವಚ ಬೀಜ ತೆಗೆದೊಗೆದು ತಿಂದರಾಯಿತು.

ಅವನು ನೀಡಿದ ತುಳಸಿ ಮತ್ತು ಹಲಸಿನ ಉದಾಹರಣೆಯೂ ಲಕ್ಷಣೀಯವಾದುದು. ತುಳಸಿಯ ತುಳಸಿತನವು ಅದರ ಮಹಾತ್ಮೆ ಮತ್ತು ಗಿಡದಲ್ಲಿರುವ ಗುಣಧರ್ಮವನ್ನು ಅವಲಂಬಿಸಿದೆ. ಅದು ಎಲ್ಲಿ ಬೆಳೆಯಿತು ಎಂಬುದರ ಮೇಲಲ್ಲ. ಅದು ತಿಪ್ಪೆಯಲ್ಲಿ ಹುಟ್ಟಿದರೂ ಸ್ವೀಕಾರಾರ್ಹವಾಗಿರುತ್ತದೆ. ಅದೇ ರೀತಿಯಲ್ಲಿ ಗುಣವಂತನಾದವನು ಕೀಳು ಜಾತಿಯಲ್ಲಿ ಜನಿಸಿದರೂ, ಅವನನ್ನು ದೂರ ಸರಿಸುವಂತಿಲ್ಲ. ಅವನನ್ನು ಬಳಿಗೆ ಕರೆದುಕೊಳ್ಳಬೇಕು. ವರ್ಣ, ಜಾತಿ ಮುಂತಾದ ಸಂಗತಿಗಳು ಹಲಸಿನ ಮೇಲು ಸಿಪ್ಪೆಯಂತಿರುತ್ತದೆ. ಆಚಾರ ವಿಚಾರಗಳು ಅದರೊಳಗಿನ ಬೀಜದಂತಿರುತ್ತದೆ. ಸಿಪ್ಪೆಯನ್ನು ಕಂಡು ಹಲಸನ್ನು ಮನುಷ್ಯ ಮೂರ್ಖನಾಗಿರುತ್ತಾನೆ. ಅವನಿಗ ಹಲಸಿನ ತೊಳೆಯಲ್ಲಿರುವ ರಸ ಮತ್ತು ಸವಿಯು ನೆಕ್ಕಲು ಸಿಗುವುದಿಲ್ಲ. ಅದೇ ರೀತಿ ಜಾತಿಯಂತಹ ಬಾಹ್ಯ ವಿಷಯದ ಕಡೆಗೆ ಗಮನ ಹರಿಸುವ ಮನುಷ್ಯನ ಸದ್ಗುಣ ವ್ಯಕ್ತಿಯ ಸಹವಾಸದಿಂದ ವಂಚಿತನಾಗದೇ ಇರಲಾರ. ಅವನೊಂದಿಗೆ ಸಾಗಿಸುವ ವ್ಯವಹಾರಿಕ ಸಂತೋಷವನ್ನು ಕಳೆದುಕೊಳ್ಳದೇ ಇರಲಾರ.

**ಸಕಲರಿಗೂ ಅಧಿಕಾರವಿದೆ.**

ಅಧಿಕಾರದ ವಿಷಯದಲ್ಲಿ ತುಕಾರಾಮನು ಮುಂದಿನ ವಿಚಾರ ಮಂಡಿಸಿದ್ದಾನೆ. ಸ್ವರ್ಗ ಅಥವಾ ವೈಕುಂಠದಲ್ಲೂ ಸ್ವರ್ಗದ ಸುಖವು ಈ ಇಹಲೋಕದಲ್ಲಿ ಹರಿನಾಮದಿಂದ ಸಿಗುತ್ತದೆ. ಆ ಅಧಿಕಾರ ಸಕಲರಿಗೂ ಇದೆ. ನಾಮಸ್ಮರಣೆಯ ಅಧಿಕಾರವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ, ಚಂಡಾಲರಿಗೂ, ಸ್ತ್ರೀ–ಪುರುಷರಿಗೂ–ಮಕ್ಕಳಿಗೂ ಅಲ್ಲದೆ ವೇಶ್ಯೆಯರಿಗೂ ಇದೆ. ಎಲ್ಲ ವರ್ಣದ ಜನರಿಗೆ ತೃಪ್ತಿ ಸಿಗಬೇಕು. ವೇದದ ಅಧಿಕಾರ ಸಿಗದ ಹಲವರಿಗೆ ನಾರಾಯಣನು ತನ್ನ ಪಾದದ ಬಳಿಯಲ್ಲಿ ಸ್ಥಳ ನೀಡಿದ್ದಾನೆ. ಪಂಢರಿಯ ವಾರಕರಿ ಮೂಢ ಅಥವಾ ಪಾಪಿಯಾಗಿರಬಹುದು. ಆದರೂ ಅವರಿಗೆ ಮೋಕ್ಷದ ಅಧಿಕಾರವಿದೆ. ಕಬ್ಬಿಣದ ಗುಣದೋಷ ಗಮನಿಸದೆ ಉದ್ಧರಿಸುವಂತೆ ದೇವರು ಎಲ್ಲರನ್ನೂ ಉದ್ಧರಿಸುತ್ತಾನೆ. ಗಣಿಕೆಯರ ಜಾತಿಗೂ ಅಧಿಕಾರವಿರಲಿಲ್ಲ. ಆದರೂ ವಿಠ್ಠಲನು ಆಕೆಗೆ ಅಧಿಕಾರ ನೀಡಿದ.

ತುಕಾರಾಮನ ಈ ನಿಲುವು ಸಾಮಾಜಿಕವಾಗಿ ಅತ್ಯಂತ ಮಹತ್ವದ್ದು. ವೈದಿಕ ಪರಂಪರೆಯ ಹಲವು ರೀತಿಯಲ್ಲಿ ಶೂದ್ರರನ್ನು ಹತ್ತಿಕ್ಕಿತ್ತು. ನಾನಾ ರೀತಿಯಲ್ಲಿ ಹಂಗಿಸಿತ್ತು. ಪ್ರತಿಷ್ಠೆಯ, ಸುಖೀ ಜೀವನದ ಎಲ್ಲ ಬಾಗಿಲುಗಳನ್ನು ಮುಚ್ಚಿದ್ದರು. ಈ ಹಿನ್ನೆಲೆಯಲ್ಲಿ ತುಕಾರಾಮನು ಹೇಳಿದ ಭಕ್ತಿಯ ವಿಶ್ವದ ನಿಯಮವು ಎಷ್ಟು ಉಜ್ವಲವಾಗಿತ್ತು ಎನ್ನುವುದು ಗಮನಿಸಬೇಕಾದ ಸಂಗತಿ.

**ಜಾತಿಯ ಆಧಾರದ ಭೇದ-ಭಾವವಿಲ್ಲ**

ತುಕಾರಾಮನಿಗೆ ಸಕಲ ಜಾತಿ ಧರ್ಮದ ಸಂತರ ಬಗೆಗೆ ಗೌರವವಿತ್ತು. ಆತ್ಮೀಯತೆ ಇತ್ತು. ಈ ಹಿನ್ನೆಲೆಯಲ್ಲಿ ಅವನ ಕೆಲವು ಅಭಂಗ ಗಮನಾರ್ಹವಾದುದು. ಪಂಡರಪುರವು ತನ್ನ ತವರು. ರಾಹಿ ರಖುಮಾಯಿ ಮತ್ತು ಸತ್ಯಭಾಮಾ ತನ್ನ ಮಾತೆಯರು, ಪಾಂಡುರಂಗ ತನ್ನ ಪಿತ ಎಂದು ತುಕಾರಾಮನು

ತನ್ನದೊಂದು ಅಭಂಗದಲ್ಲಿ ಹೇಳಿದ್ದಾನೆ. ಅನಂತರ ಹಲವು ಸಂತರ ಬಗೆಗೆ ಆತ್ಮೀಯತೆಯನ್ನು ವ್ಯಕ್ತಪಡಿಸಿದ್ದಾನೆ. ಉದ್ಧವ, ಅಕ್ರೂರ, ವ್ಯಾಸ, ಅಂಬರೀಷ ಮತ್ತು ನಾರದರು ನನ್ನ ಸೋದರರಾಗಿದ್ದು ನಾನವರನ್ನು ಗೌರವಿಸುತ್ತೇನೆ. ಗರುಡ ನನ್ನ ಬಂಧು, ಪುಂಡಲೀಕನು ಆತ್ಮೀಯ ವ್ಯಕ್ತಿ. ನನಗೆ ಅವರ ಬಗೆಗೆ ಮೆಚ್ಚುಗೆಯಿದೆ. ನನ್ನ ಬಳಿ ಸಂತ ಮಹಂತರ ಅತೀ ದೊಡ್ಡ ಬಳಗವಿದೆ. ನಾನು ನಿತ್ಯ ಓವ್ವಿಗಳ ಮೂಲಕ ಅವರನ್ನು ಸ್ಮರಿಸುತ್ತೇನೆ., ನಿವೃತ್ತಿ, ಜ್ಞಾನದೇವ, ಸೋಪಾನ, ಚಾಂಗದೇವ ಮತ್ತು ನಾಮದೇವ ಇವರೆಲ್ಲ ನನ್ನ ಆತ್ಮೀಯರು. ನಾಗೋಜನ ಮಿತ್ರಾ, ನರಹರಿ ಸೋನಾರ, ರೋಹಿದಾಸ ಮತ್ತು ಕಬೀರರು ನನ್ನ ಸಂಬಂಧಿಗಳು ಪರಸೋ ಭಾಗವತ, ಸೂರದಾಸ, ಸಾವತಾ ಮಾಳಿ ಇವರೆಲ್ಲರಿಗಾಗಿ ನಾನು ಹಾಡುತ್ತೇನೆ. ಚೋಖಾಮೇಳಾನಂತಹ ಸಂತರು ನನ್ನ ಜೀವ ಬಂಧುಗಳಾಗಿದ್ದು, ನಾನು ಒಂದು ಕ್ಷಣವೂ ಅವರನ್ನು ಮರೆಯಲಾರೆ. ಏಕನಾಥ, ಜನಾರ್ಧನ, ಕಾನ್ಹಾಪಾತ್ರಾ ಮತ್ತು ಮೀರಾಬಾಯಿ ಇವರೆಲ್ಲ ಸಂತರು ನನ್ನ ಜೀವದ ಜೀವನವಾದವರು. ಮತ್ತೆ ಕೆಲವು ಸಂತರಿದ್ದಾರೆ. ಮಹಾನುಭಾವ ಮುನಿಗಳಿದ್ದಾರೆ. ಅವರ ಪಾದದಲ್ಲಿ ನನ್ನ ಜೀವವಿದೆ. ನಾನು ಇವರೆಲ್ಲರಿಗಾಗಿ ಸಂತೋಷದಿಂದ ಓವ್ವಿಯನ್ನು ಹಾಡುತ್ತೇನೆ. ಇವರೆಲ್ಲರ ಸಹವಾಸದಲ್ಲಿ ನನ್ನ ಬಲವಾನ ತಾಯ್ತಂದೆಗಳು ಸುಖದಿಂದ ಬದುಕಲಿ.

ಇದೇ ಸ್ವರೂಪದ ಮತ್ತೂ ಒಂದು ಅಭಂಗವನ್ನು ನಾವು ಗಮನಿಸಲೇಬೇಕು ಎಂದು ನನಗೆ ಅನಿಸುತ್ತದೆ. ಅದರ ಆಶಯ ಹೀಗಿದೆ. ಹರಿದಾಸರು ಜನಿಸಿದ ಕುಲವೇ ಶ್ರೇಷ್ಠ, ಹರಿದಾಸರು ಜನಿಸಿದ ದೇಶ ಪಾವನ... ವರ್ಣದ ಅಭಿಮಾನದಿಂದ ಯಾರು ಪಾವನರಾಗಿದ್ದಾರೆ ಹೇಳಿ? ಹರಿಭಜನೆಯಿಂದ ಅಂತ್ಯಜ ಯೋನಿಯ ಜನರೂ ತೇಲಿ ಪಾರಾಗಿದ್ದು, ಪುರಾಣ ಸಹ ಸ್ತುತಿ ಪಾಠಕವಾಯಿತು. ಅವರಲ್ಲಿ ತುಳಾಧಾರನು ವೈಶ್ಯ, ಗೋರಾ ಇವನು ಕುಂಬಾರನು. ರೋಹಿದಾಸನು ಸಮಗಾರನು. ಕಬೀರನು ನೇಕಾರ. ಲತೀಫ ಮುಸಲ್ಮಾನನು. ವಿಷ್ಣುದಾಸ ಸೇನಾ ನಾಭಿಕನು. ಕಾನ್ಹೋಪಾತ್ರಾ, ಖೋದು ಇವರು ಹಿಜಡಾ. ದಾದೂ ಪಿಂಜಾರ ಇವರೆಲ್ಲಾ ಭಜನೆಯಲ್ಲಿ ತಲ್ಲೀನರಾಗಿ ದೇವರಲ್ಲಿ ಏಕರೂಪ ಹೊಂದಿದ್ದಾರೆ. ಚೋಖಾಮೇಳಾ. ಬಂಕಾ ಮಹಾರ ಜಾತಿಯವರಾಗಿದ್ದೂ ದೇವರಲ್ಲಿ ಐಕ್ಯರಾಗಿದ್ದಾರೆ. ಆನಾಬಾಯಿಯು ನಾಮದೇವನ ದಾಸಿಯಾಗಿದ್ದು. ಪಂಢರಿರಾಯ ಅವಳ ಜತೆ ಊಟ ಮಾಡುವುದರಿಂದ ಆಕೆಯ ಗೌರವ ಬೆಳೆಯಿತು. ಮೈರಾಳ ಜನಕನ ಜಾತಿ ಯಾವುದು ಎನ್ನುವುದೂ ಗೊತ್ತಿಲ್ಲ. ಆದರೆ ಅವನ ಮಹಿಮೆಯನ್ನು ಎಷ್ಟೆಂದು ಬಣ್ಣಿಸಲಿ? ತಾತ್ಪರ್ಯ ವಿಷ್ಣುದಾಸನಿಗೆ ಜಾತಿ ಧರ್ಮ ಮುಖ್ಯವಲ್ಲ. ಅಂಥ ಭೇದ ಭಾವ ಅವನಿಗಿಲ್ಲ. ಮೊದಲನೇ ಅಭಂಗದಲ್ಲಿ ತುಕಾರಾಮನು ಶ್ರೇಷ್ಠ ಮತ್ತು ಹೀನ ಜಾತಿಯ ಸಂತರ ಪಾದಕ್ಕೆರಗುವ ಸಿದ್ಧತೆಯನ್ನು ತೋರಿಸಿದ್ದಾನೆ. ಈ ಸಂತರು ತನ್ನ ಸೋದರರು, ಗಣ ಗೋತ್ರದವರು, ಆತ್ಮೀಯರೂ ಆಗಿದ್ದು, ಅವರನ್ನು ಗೌರವಿಸುವ, ಹೊಗಳುವ, ಹಾಡುವ ಭಾವನೆಯನ್ನು ವ್ಯಕ್ತ ಮಾಡಿದ್ದಾನೆ. ವರ್ಣದ ಅಭಿಮಾನದಿಂದ ಕುಲ ಮತ್ತು ದೇಶ ಪವಿತ್ರವಾಗುವುದಿಲ್ಲ. ಅದರೆ ಸಂತರು ನೆಲೆಸುವದರಿಂದ ಅದಕ್ಕೆ ಪಾವಿತ್ರ್ಯತೆ ಬರುತ್ತದೆ ಎಂದವನು

ಎರಡನೇ ಅಭಂಗವನ್ನು ಆರಂಭಿಸಿದ್ದಾನೆ. ವಿಷ್ಣುದಾಸರಿಗೆ ಹರಿದಾಸರಿಗೆ ಜಾತಿ ಧರ್ಮದ ಭೇದ ಭಾವವಿಲ್ಲ. ಜಾತಿಯ ಭೇದವನ್ನು ಅವರು ನಿರಾಕರಿಸುತ್ತಾರೆ ಎಂದು ಹೇಳಿ ತುಕಾರಾಮನು ಆ ಅಭಂಗವನ್ನು ಮುಗಿಸುತ್ತಾನೆ.

**ಭಗವಂತನಿಗೆ ಮೇಲು ಕೀಳೆಂಬ ಭೇದವಿಲ್ಲ**

ತುಕಾರಾಮನು ಸ್ವತಃ ಸಂತರ ಜಾತಿ ಕುಲದ ಬಗೆಗೆ ಯೋಚಿಸದೆ, ಅವರ ಬಗೆಗೆ ಆತ್ಮೀಯತೆಯನ್ನು ಬೆಳೆಸಿಕೊಂಡಂತೆ ದೇವರೂ ಭಕ್ತರ ಜಾತಿ ಕುಲದ ಕುರಿತು ಯೋಚಿಸದೆ ಅವರನ್ನು ಉದ್ಧರಿಸುತ್ತಾನೆ ಎಂಬ ಶ್ರದ್ಧೆ ತುಕಾರಾಮನದು. ದೇವರ ಸ್ವರೂಪದಲ್ಲಿ ಕುಲ, ಜಾತಿ, ವರ್ಣಕ್ಕೆ ಅವಕಾಶವಿರುವುದಿಲ್ಲ. ದೇವರು ಜಾತಿಯ ಕ್ರಿಯಾ ಕರ್ಮದಿಂದ ಭ್ರಷ್ಟನಾದ ಎಂಬರ್ಥವನ್ನು ಅವನು ನೀಡಿದ್ದಾನೆ.

ದೇವರು ಜಾತಿಯ ಕುರಿತು ಯೋಚಿಸುವುದಿಲ್ಲ. ಈ ಬಗೆಗೆ ಅವನು ಮಂಡಿಸಿದ ಕೆಲ ವಿಚಾರಗಳು ಹೀಗಿವೆ; ದೇವರಂಥ ಸಮರ್ಥರ ಮನದಲ್ಲಿ ವರ್ಣಾವರ್ಣ ಭೇದವಿರುವುದಿಲ್ಲ. ಅವನು ಭಕ್ತರ ಬುತ್ತಿ ಬಯಸುವುದಿಲ್ಲ. ಅವರ ಜಾತಿ ಕುಲವನ್ನು ಕೇಳುವುದಿಲ್ಲ. ಶುದ್ಧ ಕುಲವೇ ಹೀನಕುಲವೇ ಎಂದೂ ನೋಡುವುದಿಲ್ಲ. ನಿರ್ಮಲ ಆಚರಣೆ ಇದ್ದವರ ಬಳಿ ನೆಲೆಸುತ್ತಾನೆ. ಭಕ್ತರನ್ನು ಉದ್ಧರಿಸಲು ಹಾತೊರೆಯುತ್ತಾನೆ. ಅವನು ಎಲ್ಲರ ಉದ್ಧಾರ ಮಾಡಿದ್ದಾನೆ. ಸಂತರ ಜಾತಿ ನೋಡದೇ ಅವನಿಗೆ ಪಾದದ ಬಳಿ ಆಸರೆ ನೀಡಿದ್ದಾನೆ. ಹರಿಯು ಭಕ್ತರ ವರ್ಣ ಧರ್ಮದ ಬಗೆಗೆ ಯೋಚಿಸುವುದಿಲ್ಲ. ಎದುರಿಗೆ ಬಂದವರನ್ನೆಲ್ಲ ಆಲಂಗಿಸಿಕೊಳ್ಳುತ್ತಾನೆ. ತನ್ನವನನ್ನಾಗಿ ಮಾಡುತ್ತಾನೆ. ಪಂಢರಪುರದಲ್ಲಿ ನೂರೆಂಟು ಜಾತಿ, ಅವರೆಲ್ಲರೂ ವೈಷ್ಣವರಾಗಿರುತ್ತಾರೆ. ಅಲ್ಲಿ ಭೇದ ಬಾವವಿಲ್ಲ. ಚಂದ್ರಭಾಗದಲ್ಲಿ ಹೀನ ಜಾತಿಯವರೂ ಸ್ನಾನ ಮಾಡುತ್ತಾರೆ. ದೇವರು ಅಪರಾಧ, ಜಾತಿಕುಲ ನೋಡದೆ, ಕುರುಬರನ್ನು, ಗಣಿಕೆಯರನ್ನೂ, ಭಿಲ್ಲರನ್ನೂ ಉದ್ಧರಿಸಿದ್ದಾನೆ. ಭಕ್ತರ ಜಾತಿ ನೋಡದೆ, ಅವರ ಭಾವನೆ ಕಂಡು ಬಳಿಗೆ ಬರುತ್ತಾನೆ. ದಾಸಿಪುತ್ರ ವಿದೂರರನ್ನು , ಸಜ್ಜನ ಕಟುಕರನ್ನೂ ಉದ್ಧರಿಸಿದ್ದಾನೆ. ಕೃಷ್ಣನು ಶ್ರೇಷ್ಠ-ಕನಿಷ್ಠ ರನ್ನು ಒಂದುಗೂಡಿಸಿದ. ಅವರಲ್ಲಿ ವಿಶಿಷ್ಟರೆಂದು ಯಾರನ್ನೂ ಆಯ್ಕೆ ಮಾಡಲಿಲ್ಲ. ಎಂಥ ಹೀನ ಜಾತಿಯ ಸ್ತ್ರೀ ಪುರಷರೇ ಇರಲಿ, ನಾರಾಯಣ ಅವರ ಭಾವನೆಗೆ ಮಹತ್ವ ನೀಡಿ ಪ್ರೀತಿಸುತ್ತಾನೆ. ವೇದ ಆಲಿಸಬಾರದು ಎಂಬ ಜಾತಿ ಹೀನರಿಗೂ ಅವನು ವೈಕುಂಠದಲ್ಲಿ ಪದವಿನೀಡಿದ್ದು, ದೇವರ ಸಾನಿಧ್ಯವು ಒಂದು ಮುಕ್ತವಾದ ಸಂತೆಯಾಗಿದ್ದು, ಅಲ್ಲಿ ಎಲ್ಲ ಜಾತಿಯವರಿಗೂ ಅವಕಾಶವಿದೆ. ಅಲ್ಲಿ ಯಾರೂ ಶ್ರೇಷ್ಠರು ಕನಿಷ್ಠರಿಲ್ಲ. ಯಾವ ಪಂಕ್ತಿ ಭೇದವೂ ಇಲ್ಲ. ಈ ಸಂತೆಗೆ ಬರುವಂತೆ ನಾನು ಎಲ್ಲರನ್ನೂ ಸಮಾನವಾಗಿ ಕರೆದೆ. ಅಲ್ಲಿ ಅವರವರ ಪ್ರಿಯವಸ್ತು ಸಿಗುತ್ತದೆ. ಅಲ್ಲಿ ಪಂಕ್ತಿಬೇಧವೂ ಇಲ್ಲ. ಎಲ್ಲವೂ ಅಲ್ಲಿ ತೆರೆದಿಡಲಾಗಿದೆ. ಯಾರಿಗೂ ಕೇಳಬೇಕಾಗಿಲ್ಲ. ಈ ವ್ಯವಹಾರ ಮುಕ್ತವಾಗಿದೆ.

## ಇದೆಂಥ ಮಡಿ–ಮೈಲಿಗೆಯೋ?

ಮಡಿ ಮೈಲಿಗೆಯ ಪರಿಕಲ್ಪನೆಯು ಒಂದು ಕಾಲಕ್ಕೆ ನಮ್ಮ ಸಾಂಸ್ಕೃತಿಕ ಬದುಕನ್ನು ಆವರಿಸಿಕೊಂಡ ಒಂದು ಮಹತ್ವದ ಘಟಕವಾಗಿತ್ತು. ಭಾರತದಲ್ಲಿಯ ಪುರೋಹಿತರು ವಿಶೇಷವಾಗಿ ಬ್ರಾಹ್ಮಣರು ತಮ್ಮನ್ನು ಪವಿತ್ರವೆಂದು ಭಾವಿಸಿ ಈ ಮಡಿಯ ಕೋಶದಲ್ಲಿ ಸಿಕ್ಕಿಸಿಕೊಂಡರು ಮತ್ತು ಮಡಿ ಮೈಲಿಗೆ ಪರಿಕಲ್ಪನೆಯನ್ನು ಇತರರನ್ನು ತುಚ್ಛವಾಗಿ ಪರಿಗಣಿಸಲು ಬಳಸಿಕೊಂಡರು. ಇದು ಮಡಿ, ಇದು ಮೈಲಿಗೆ ಎಂಬ ವರ್ಗೀಕರಣವು ಸದಾ ಅವರ ತಲೆಯೊಳಗಿರುತ್ತಿತ್ತು. ಇದರಿಂದ ಉಳಿದವರು ತುಂಬ ಚಿತ್ರ ಹಿಂಸೆಗೊಳಗಾಗುತ್ತಿದ್ದರು. ನಿಮ್ಮಿಂದ ಮೈಲಿಗೆಯಾಗುತ್ತದೆ. ನಮ್ಮನ್ನು ಮುಟ್ಟಬೇಡಿ, ನಮ್ಮ ಮೇಲೆ ನಿಮ್ಮ ನೆರಳೂ ಬೀಳಬಾರದು, ನೀವು ಕೂತ ಜಾಗ, ಉಂಡ ಜಾಗವನ್ನು ಗೋಮಯದಿಂದ ಸಾರಿಸಿ ಶುದ್ಧಗೊಳಿಸಿ, ಗೋಮೂತ್ರದಿಂದ ಶುದ್ಧಗೊಳಿಸಿ ಮುಂತಾದ ಮಾತಿನಿಂದ ಅವರು ಇತರರನ್ನು ದೂರ ಸರಿಸುತ್ತಿದ್ದರು. ತಮ್ಮ ಶ್ರೇಷ್ಠತ್ವವನ್ನು ಉಳಿದವರ ಮೇಲೆ ಹೇರುತ್ತಿದ್ದರು. ಲೌಕಿಕ ಅವಸ್ಥೆಯಿಂದ ಮೈಲಿಗೆಯ ಅವಸ್ಥೆಯವರೆಗೆ ಹೋಗಲು, ಅದನ್ನು ಉಳಿಸಿಕೊಳ್ಳಲು ಸ್ನಾನ, ವಿಶಿಷ್ಟ ಮಂತ್ರದ ಉಚ್ಚಾರ ಮಡಿ ಎಂಬ ಬಟ್ಟೆಯ ಬಳಕೆ, ದೀಕ್ಷಾಗ್ರಹಣ ಮುಂತಾದ ಹಲವು ಸಂಗತಿಗಳನ್ನು ಬಳಸುತ್ತಿದ್ದರು.

ತುಕಾರಾಮನು ಈ ಸಂದರ್ಭದಲ್ಲಿ ಮಂಡಿಸಿದ ವಿಚಾರವು ಅತ್ಯಂತ ಮೂಲಭೂತ ಸ್ವರೂಪದ್ದು, ಅದನ್ನು ಧಾರ್ಮಿಕ ಚಿಂತನೆಯ ಬುನಾದಿಯಾಗೇ ನೋಡಬೇಕು. ಈ ಪರಿಕಲ್ಪನೆಯ ಮೇಲೆ ಅವನು ನಾನಾ ಮಗ್ಗಲಿನಿಂದ ಪ್ರಹಾರ ಮಾಡಿದ್ದಾನೆ. ಸಕಲ ರೀತಿಯ ಮಡಿ ಮೈಲಿಗೆಯಿಂದ ನಾನು ಭಿನ್ನವಾಗಿದ್ದೇನೆ, ದೂರವಾಗಿದ್ದೇನೆ ಎಂಬ ಮಾತಿನಿಂದ ಅವನು ತನ್ನ ವಿಚಾರವನ್ನು ವ್ಯಕ್ತ ಮಾಡಿದ್ದಾನೆ. ಭಾವನೆ ಮತ್ತು ಆಚರಣೆಯು ಶುದ್ಧವಾಗಿರದಿದ್ದರೆ ಮಡಿಬಟ್ಟೆ, ಸ್ನಾನದಂತಹ ಬಾಹ್ಯ ಉಪಚಾರವು ನಿರುಪಯೋಗಿಯಾದುದು. ಬದಲು, ಭಾವನೆ ಆಚರಣೆಯು ಶುದ್ಧವಾಗಿದ್ದರೆ, ಈ ಉಪಚಾರದ ಅಗತ್ಯವಿಲ್ಲ, ಎಂಬೆರಡು ಬಗೆಯ ಯುಕ್ತಿವಾದವನ್ನು ಮಾಡಿ ಅವನು ಎರಡೂ ಸ್ಥಿತಿಯಲ್ಲಿ ಬಾಹ್ಯ ಉಪಚಾರದ ವ್ಯರ್ಥತೆಯನ್ನು ಸ್ಪಷ್ಟ ಮಾಡಿದ್ದಾನೆ. ಇದೆಂಥ ಮಡಿ ಮೈಲಿಗೆಯೋ? ಎಲ್ಲಿಯವರೆಗೆ ಮನಸ್ಸು ನಿರ್ಮಲವಾಗಿರುವುದಿಲ್ಲವೋ, ಅಲ್ಲಿಯವರೆಗೆ ಇದೆಲ್ಲವೂ ವ್ಯರ್ಥ ಎಂದವನು ಒಂದು ಅಭಂಗದಲ್ಲಿ ಹೇಳಿದ್ದಾನೆ.

## ಪರನಾರಿ ಪರದ್ರವ್ಯವೇ ನಿಜವಾದ ಮೈಲಿಗೆ

ತುಕಾರಾಮನು ಈ ರೀತಿಯಲ್ಲಿ ಮಡಿ ಮೈಲಿಗೆಯ ಭೇದ ಭಾವದ ಪರಿಕಲ್ಪನೆಯನ್ನೇ ಧಿಕ್ಕರಿಸಿದನು. ಮಡಿ ಮೈಲಿಗೆಯನ್ನು ಸ್ವೀಕರಿಸುವುದೇ ಆಗಿದ್ದರೆ ಬೇರೊಂದು ರೀತಿಯಲ್ಲಿ ಸ್ವೀಕರಿಸಬಹುದೆಂದು ಸೂಚಿಸಿದ್ದಾನೆ. ಪರದ್ರವ್ಯ ಮತ್ತು ಪರನಾರಿಯರನ್ನು ಸಂಪರ್ಕಿಸುವುದೇ ನಿಜವಾದ ಮೈಲಿಗೆಯಾಗಿದ್ದು, ಯಾರು ಇದರಿಂದ ದೂರ ಸರಿಯುತ್ತಾನೋ, ಅದೇ ನಿಜವಾದ ಮಡಿ ಎಂದಿದ್ದಾನೆ.

ಇಂಥದೇ ಘನವಾದ ಆಶಯವನ್ನು ಹೊಂದಿದ ಮತ್ತೆರಡು ಅಭಂಗಗಳಲ್ಲಿ ತುಕಾರಾಮನು ಮಡಿ ಮೈಲಿಗೆಯ ಬಗೆಗೆ ಸ್ಪಷ್ಟವಾದ ನಿಲುವನ್ನು ಮಂಡಿಸಿದ್ದಾನೆ. ಅದರ ತಾತ್ಪರ್ಯ ಓೀಗಿದೆ ; ಬಾಹ್ಯ ದೇಹಕ್ಕೇನು ಮಹತ್ವವಿದೆ, ಅಂತರಂಗವೇ ಮಲೀನವಾಗಿರುವಾಗ? ಅದು ಅಸತ್ಯದಿಂದ ವ್ಯಾಪಿಸಿಕೊಂಡಿದೆ. ಮೊದಲು ನೀನು ಡಾಂಭಿಕ ವ್ಯವಹಾರವನ್ನು ತೊರೆ, ನುಡಿ, ಮನಸ್ಸು ಶುದ್ಧವಾಗಿರಲಿ. ಚಿತ್ರದ ಶುದ್ಧಿಯ ಕಡೆಗೆ ಗಮನ ಹರಿಸು, ಪಾಪ ಪುಣ್ಯದ ಮೈಲಿಗೆಯ ಯೋಚನೆಯಲ್ಲೇ ಸದಾನೀನು ಮುಳುಗಿರುತ್ತಿ, ಏನೂ ಯೋಚಿಸುವುದಿಲ್ಲ. ಇಡೀ ಭೂಮಂಡಲವೇ ಮಡಿಯಾಗಿದೆ. ಅದರ ಕೆಲಭಾಗ ಶುದ್ಧ, ಕೆಲಭಾಗ ಅಶುದ್ಧ ಎಂದೇಕೆ ಒದ್ದಾಡುತ್ತಿ! ಕಾಮಕ್ರೋಧದಿಂದ ದೂರ ಸರಿ, ಈ ಅರ್ಥದಲ್ಲಿ ಮಡಿಯನ್ನು ಆಚರಿಸು, ಮಡಿ ಮೈಲಿಗೆಯ ಬಾಹ್ಯ ಅಲಂಕಾರವನ್ನು ಸುತ್ತಿಡು... ಯಾರು ಪರದ್ರವ್ಯ ಮತ್ತು ಪರನಾರಿಯ ಅಭಿಲಾಷೆ ಮಾಡುತ್ತಾನೋ, ಮೂಗು ಓಡಿದು ಸಾಧನೆ ಮಾಡಿದ ನಾಟಕ ಮಾಡುತ್ತಾನೋ, ಅವನ ಆಚಾರ ಸುಡಲಿ, ಈ ಕತ್ತೆಯು ಬರೇ ಒಜ್ಜೆಯನ್ನು ಹೊರುತ್ತಿದೆ. ಇವನು 'ಕ್ರೋಧದಿಂದ ಮನಸ್ಸು ಮೈಲಿಗೆ ಮಾಡಿಕೊಂಡಿದ್ದಾನೆ. ಹೊರಗೆ ಮಡಿಯ ಆಡಂಬರ ಮೆರೆಯುತ್ತಾನೆ. ಹೊರಗೆ ಮುಖವಾಡ ಧರಿಸಿ, ಬೂಟಾಟಿಕೆಯನ್ನು ಮೆರೆಯುತ್ತಿದ್ದಾನೆ'.

**ಮುಂಡನ, ಜಟಾ, ಜುಟ್ಟ,**

ನಮ್ಮ ಧಾರ್ಮಿಕ ಕ್ಷೇತ್ರಗಳಲ್ಲಿ ಕೂದಲಿಗೆ ಸಂಬಂಧಪಟ್ಟಂತೆ ಜನರು ಮುಂಡನ, ಜಟಾ ಮತ್ತು ಜುಟ್ಟಗಳಲ್ಲಿ ಯಾವುದಾದರೂ ಒಂದನ್ನು ಸ್ವೀಕರಿಸುತ್ತಾರೆ. ಇದನ್ನು ಸ್ವೀಕರಿಸುವುದು ತನ್ನ ಶುದ್ಧತನದ, ಶ್ರೇಷ್ಠತನದ, ಧಾರ್ಮಿಕತೆಯ ಚಿಹ್ನೆ ಎಂದು ಜನರ ಮನದೊಳಗೆ ಬಿಂಬಿಸುವ ಪ್ರಯತ್ನ ನಡೆದಿರುತ್ತದೆ. ತುಕಾರಾಮನ ಪ್ರಕಾರ ಇದೊಂದು ಕೇವಲ ಬಾಹ್ಯ ಚಿಹ್ನೆಯಾಗಿದ್ದು, ಅಂತರಂಗ ಶುದ್ಧಿಯೇ ಮಹತ್ವದ್ದು.

ಕೂದಲಲ್ಲಿ ಪಾಪ ನೆಲೆಸಿರುತ್ತದೆ ಎಂದು ಭಾವಿಸುವ ಜನರು ಕೂದಲು ಮುಂಡನ ಮಾಡುತ್ತಾರೆ. ಕೇಶವನ್ನು ತೊರೆದು, ಕಿತ್ತೊಗೆದು ಪಾಪದಿಂದ ತಮ್ಮ ಮುಕ್ತಿಯಾಯಿತು ಎಂದು ಭಾವಿಸುತ್ತಾರೆ. ಬದಲಿಗೆ ಪಾಪದ ನಿಜವಾದ ವಾಸ್ತವ್ಯ ಮನದೊಳಗಿನ ವಿಕಾರದಲ್ಲಿರುತ್ತದೆ, ವಾಸನೆಯಲ್ಲಿರುತ್ತದೆ ಅದನ್ನು ತ್ಯಾಗ ಮಾಡದೆ, ಬರೇ ಮುಂಡನ ಮಾಡಿ ಏನು ಉಪಯೋಗ ಎಂದು ತುಕಾರಾಮನಿಗೆ ಅನಿಸುತ್ತದೆ.

ಈ ವಿಷಯದ ಬಗೆಗಿನ ಅವನ ಒಂದು ಅಭಂಗ ಅತ್ಯಂತ ಅರ್ಥಪೂರ್ಣವಾಗಿದೆ. ಸಿಂಹಸ್ತ ಕಾಲದಲ್ಲಿ ತೀರ್ಥಕ್ಷೇತ್ರದಲ್ಲಿ ಸೇರಿದ ಅಸಂಖ್ಯ ಜನರು ಮುಂಡನ ಮಾಡಿಕೊಳ್ಳುತ್ತಾರೆ. ಆಗ ಭಿಕ್ಷುಕರಿಗೆ ದಾನ ಮಾಡುತ್ತಾರೆ. ಅವರ ಈ ಕೃತಿಯಿಂದ ನಾಭಿಕ ಮತ್ತು ಭಟ್ಟರಿಗೆ ಲಾಭವಾಗುತ್ತದೆ. ಆದರೆ ಮುಂಡನ ಮಾಡಿಕೊಂಡವನು ಮಾತ್ರ ಪಾಪದಿಂದ ಮುಕ್ತನಾಗುವುದಿಲ್ಲ. ಈ ಜನರು ಅಂತರಂಗದಲ್ಲಿ

ಪಾಪ ಹುದುಗಿದ್ದಾಗ ತಲೆಗೂದಲು ಗಡ್ಡ ಬೋಳಿಸುತ್ತಾರೆ. ಈ ಕೃತಿಯಿಂದ ಕೂದಲು ಹೋದರೂ, ಅಂತರಂಗ ಮಾತ್ರ ಶುದ್ಧಗೊಳ್ಳುವುದಿಲ್ಲ ಎಂದವನ ಅಭಿಪ್ರಾಯ.

**ಸರ್ವಕಾಲ ಮತ್ತು ದಿಕ್ಕು ಶುಭ**

ತುಕಾರಾಮನು ಬಹಿರಂಗ ಮಡಿ ಮೈಲಿಗೆ (ಶುದ್ಧಿ) ಗಿಂತ ಅಂತರಂಗ ಶುದ್ಧಿಗೆ ಹೆಚ್ಚು ಮಹತ್ವ ನೀಡಿದ್ದಾನೆ. ಶುಭ ಅಶುಭದ ಬಗೆಗೂ ಅವನು ಅದೇ ಅಭಿಪ್ರಾಯವನ್ನು ತಾಳಿದ್ದನು. ಸ್ತ್ರೀ ಪುರುಷರನ್ನು ಸೇರಿಸಿ, ಅವರಿಗೆ ನಾನಾ ಬಗೆಯ ಶಕುನ ಹೇಳುವ ಢಾಂಜಿಕ ಜನರ ಹತ್ತಿರ ಗೋವಿಂದನಿರುವುದಿಲ್ಲ ಎಂದವನು ಹೇಳುತ್ತಾನೆ. 'ದೇವರ ಭಕ್ತನಿಗೆ ಸಕಲ ಕಾಲ ಶುಭವೇ, ಸಕಲ ದಿಶೆಯೂ ಶುಭ' ಎಂದು ಅಭಂಗದಲ್ಲಿ ಹೇಳಿದ್ದಾನೆ.

**ಕ್ಷೇತ್ರದಲ್ಲಿರುವುದು ಬರೇ ಕಲ್ಲು ನೀರು ಹಣಕೊಟ್ಟರೆ ದೇವರು**

ಭೂಮಂಡಲದ ವಿಶಿಷ್ಟ ತಾಣಗಳಲ್ಲಿ ದೇವರ ಸಾನಿಧ್ಯ, ಸಂತರ ವಾಸ್ತವ್ಯ, ಅಲೌಕಿಕ ನದಿಗಳ ಸಂಗಮವಿರುವುದರಿಂದ ಅವು ಪವಿತ್ರ ತಾಣಗಳೆನಿಸಿದವು. ಅದನ್ನು ತೀರ್ಥಕ್ಷೇತವೆಂದು ಕರೆದರು. ಕ್ಷೇತ್ರ ದರುಶನದಿಂದ ಪಾಪಕ್ಷಯ, ಕಲ್ಯಾಣ, ಸತ್ಫಲ ಪ್ರಾಪ್ತಿಯಾಗುತ್ತದೆ ಎಂಬ ಭಾವನೆಯಿಂದ ಜನರು ತೀರ್ಥಯಾತ್ರೆ ಕೈಕೊಳ್ಳುತ್ತಾರೆ. ಸ್ಥಳ ಕಾಲದ ಹೊಂದಾಣಿಕೆ ಮಾಡಿಕೊಂಡು ತೀರ್ಥಯಾತ್ರೆ ಕೈಕೊಳ್ಳುವ ಒಂದು ಪದ್ಧತಿಯೇ ಈಗ ರೂಢಿಗೊಂಡಿದೆ.

ಔಪಚಾರಿಕತೆ ಪೂರೈಸಲು ಕ್ಷೇತ್ರಯಾತ್ರೆ ಕೈಕೊಳ್ಳುವುದರಿಂದ ಯಾವ ಲಾಭವೂ ಇಲ್ಲ. ನಿಜವಾದ ಮಹತ್ವ ಮಾನಸಿಕ ಶುದ್ಧಿಯಲ್ಲಿದೆ ಎಂಬುದು ತುಕಾರಾಮನ ನಿಲುವು. ಮನದಲ್ಲಿ ಆಸೆಯಿಟ್ಟುಕೊಂಡು ತೀರ್ಥಯಾತ್ರೆ ಮಾಡುವುದರಿಂದ ಮುಕ್ತಿ ಸಿಗುವುದಿಲ್ಲ ಎಂದವನ ಅಂಬೋಣ. ಅಂತರಂಗವೇ ಶುದ್ಧವಾಗಿರದಿದ್ದರೆ, ಕಾಶಿ ಗಂಗೆಯಿಂದ ಏನು ಲಾಭ? ಎಂದು ಪ್ರಶ್ನಿಸುತ್ತಾನೆ. ತುಕಾರಾಮನು ನೀಡಿದ ಉದಾಹರಣೆ ಮಾರ್ಮಿಕವಾಗಿದೆ; ಕಠಿಣವಾದ ಕಾಳನ್ನು ನೀರಲ್ಲಿ ಹಾಕಿ ಕುದಿಸಿದರೂ ಉಪಯೋಗವಿಲ್ಲ. ಅದು ಕುದಿಯುವುದೂ ಇಲ್ಲ, ರುಚಿಕರವೂ ಆಗುವುದಿಲ್ಲ. ಮನಃಶುದ್ಧಿಯಿಲ್ಲದ ಮನುಷ್ಯ ತೀರ್ಥಕ್ಷೇತ್ರಕ್ಕೆ ಹೋದರೂ, ಏನು ಬದಲಾವಣೆಯಾಗುವುದಿಲ್ಲ. ನೀನು ತೀರ್ಥಕ್ಷೇತ್ರಕ್ಕೆ ಹೋಗಿ ಏನು ಮಾಡಿದೆ? ಎಂದು ತುಕರಾಮನು ಒಂದು ಅಭಂಗದಲ್ಲಿ ಕೇಳಿದ್ದಾನೆ. ನೀನು ಕೇವಲ ದೇಹದ ತೊಗಲು ತೊಳೆದೆ ಎಂದು ಉತ್ತರವನ್ನು ತಾನೇ ನೀಡಿದ್ದಾನೆ. ವೃಂದಾವನದ ಕಹಿ ಫಲವನ್ನು ಸಕ್ಕರೆಯಲ್ಲಿ ಕರಗಿಸಿದರೂ ಅದರ ಕಹಿತನ ಹೋಗುವುದಿಲ್ಲ. ಮನುಷ್ಯನ ಸ್ಥಿತಿಯೂ ಹಾಗೆ. ಎಲ್ಲಿಯವರೆಗೆ ಮನದಲ್ಲಿ ಶಾಂತಿ, ಕ್ಷಮೆ, ದಯೆ ನೆಲೆಸುವುದಿಲ್ಲವೋ, ಅಲ್ಲಿಯವರೆಗೆ ನಾವು ತೀರ್ಥಯಾತ್ರೆಗೆ ಹೋಗಿ ಬಂದೆವು ಎಂದು ಅಭಿಮಾನದಿಂದ ಬೀಗುವುದು ಸರಿಯಲ್ಲ ಎಂಬ ಎಚ್ಚರಿಕೆಯನ್ನು ನೀಡಿದ್ದಾನೆ. ತೀರ್ಥಕ್ಷೇತ್ರಕ್ಕೆ ಹೋಗಿಯೂ ಅಂತಃಕರಣ ಶುದ್ಧವಾಗಿಲ್ಲ, ಆದರೆ ಜನರೆದುರಿಗೆ ಮಾತ್ರ ತೀರ್ಥಯಾತ್ರೆಗೆ ಹೋಗಿ

ಬಂದಿರುವುದಾಗಿ ಹೇಳುವ ಅವಕಾಶ ಸಿಕ್ಕತು, ಎಂದವನು ಹೇಳುತ್ತಾನೆ. ಕೆಲವರಂತೂ ತಾವು ತೀರ್ಥಯಾತ್ರೆ ಮಾಡಿ ಬಂದಿದ್ದೇವೆ ಎಂದು ಅಹಂಕಾರದಿಂದ ಹೂಂಕರಿಸುತ್ತಾರೆ, ಗುರುಗುಡುತ್ತಾರೆ, ಹುಸಿ ಅಭಿಮಾನ ಬೆಳೆಸಿಕೊಳ್ಳುತ್ತಾರೆ ಎಂದು ಮತ್ತೂ ಒಂದು ಅಭಂಗದಲ್ಲಿ ಹೇಳಿದ.

**ಏನು ತೊಳೆದಿರಿ ತೊಗಲೇ?**

ಸ್ನಾನದ ಕುರಿತು ತುಕಾರಾಮನ ಹೇಳಿಕೆ ಹೀಗಿದೆ : ಹೊರಗಿನ ದೇಹ ತೊಳೆದು ಏನು ಉಪಯೋಗ? ಮನವಂತೂ ಒಳಗೆ ಹೊಲಸಾಗಿಸಿ ಜೀವನದಲ್ಲಿ ನಡೆಸಿದ ಅಸತ್ಯ ವ್ಯವಹಾರದಿಂದಾಗಿ ಅದು ದೋಷಪೂರಿತವಾಗಿದೆ. ಸ್ನಾನದ ಮೂಲಕ ತೊಗಲು ತೊಳೆದು ಏನು ಪ್ರಯೋಜನ? ಒಳಗೆ ಕರಿಜಟ್ಟಾದ ವಿಷಯದಂತಹ ಕೆಡುಕು ವಿಚಾರ ಹುದುಗಿದೆ. ಮೊಸಳೆ ಮತ್ತು ಕಾಗೆ ನೀರಿನಲ್ಲಿ ಸ್ನಾನ ಮಾಡುವುದಿಲ್ಲವೇ? ದುಷ್ಟನಿಗೆ ಉಪದೇಶ ಮಾಡಿ ಏನು ಲಾಭ? ಕಾಗೆಗೆ ಸ್ನಾನ ಮಾಡಿಸಿದರೂ, ಅದು ಗಾಯವನ್ನು ಹುಡುಕುತ್ತ ಹೋಗುತ್ತದೆ. ಅಹಂಕಾರಿಯ ಸಂಪೂರ್ಣ ಜೀವನವೇ ಮೈಲಿಗೆಯಿಂದ ತುಂಬಿಕೊಂಡಿರುತ್ತದೆ. ಅವನು ತೊಗಲನ್ನು ಅಥವಾ ಅವಯವವನ್ನು ಮೈಲಿಗೆಯಿಂದ ಕೂಡಿದೆ ಎಂದು ಭಾವಿಸಿ, ಅದನ್ನು ತೊಳೆದಾಕ್ಷಣ ನಿರ್ಮಲವಾಗುತ್ತದೆ ಎಂದವನ ತಿಳುವಳಿಕೆ, ಜೀವನವು ನಿರ್ಮಲವಾಗದಿದ್ದರೆ ಸಾಬೂನು ಏನು ಮಾಡಬಲ್ಲದು?

**ಭೂತಗಳ ಪಾಲನೆಯೆಂದರೆ ದೇವರ ಪೂಜೆ**

ಪೂಜೆಗೆ ಸಂಬಂಧಿಸಿದಂತೆ ತುಕಾರಾಮ ಹೇಳುತ್ತಾನೆ : 'ಹಲವು ದೇವರನ್ನೇಕೆ ಪೂಜಿಸುತ್ತೀರಿ? ಅದರಿಂದ ಹೊಟ್ಟೆಯೇನೋ ತುಂಬುತ್ತದೆ. ಆದರೆ ಖರೆಖರೆ ಲಾಭವಾಗುವುದಿಲ್ಲ. ಲೋಭದಿಂದ ಕಲ್ಲು ದೇವರನ್ನು ಪೂಜಿಸುವ ಈ ಮನುಷ್ಯನು ಸ್ವತಃ ತಾನೂ ಕಲ್ಲಾಗಿರುತ್ತಾನೆ. ಈ ದುಷ್ಟಜನರು ಭಾವನಾ ರಹಿತವಾಗಿ ಕಲ್ಲಿನ ಮತ್ತು ಹಿತ್ತಾಳೆಯಂತಹ ಅಷ್ಟಧಾತುವಿನ ಪೂಜೆಯನ್ನು ಏಕೆ ಕೈಕೊಳ್ಳುತ್ತಾರೋ? ಕರ ಎಂದರೆ, ಭಾವನೆಯೇ ಕಾರಣ, ಮೋಕ್ಷದ ಸಾಧನ. ಅಜ್ಞಾನಿ ಜನರು ಏನಾದರೂ ಪಡೆವ ಇಚ್ಛೆಯಿಂದ ಪೂಜೆ ಮಾಡುತ್ತಾರೆ. ಅವರ ಧ್ಯಾನದಿಂದ ದೇವರ ಪ್ರಾಪ್ತಿಯಗುವುದು ಹೇಗೆ ಸಾಧ್ಯ? ಶುಷ್ಕಪೂಜೆ ಮಾಡುವ ಮನುಷ್ಯನು ಕಲ್ಲಿನ ರಾಶಿಯನ್ನು ಸಂಗ್ರಹಿಸುತ್ತಾನೆ. ಯಾವುದೇ ದೇವತೆಯನ್ನು ಪೂಜಿಸಬೇಡ, ಪೂಜೆಯನ್ನು ಮಾಡಲೇ ಬೇಕೆಂದಿದ್ದರೆ ದೇವರ ಬ್ರಹ್ಮಾಂಡ ಸ್ವರೂಪದ ಕಲ್ಪನೆಯನ್ನು ಮಾಡಿ ಅದನ್ನು ಪೂಜಿಸಬೇಕು. ತುಣುಕು ತುಣುಕಿನ ಒಮ್ಮುಖದ ಪೂಜೆ ವ್ಯರ್ಥವೇ ಸರಿ'.

**ಪೂಜ್ಯ ವಿಚಾರ**

ಕಲ್ಲು ಅಥವಾ ದೇವರ ಮೂರ್ತಿಪೂಜೆಯನ್ನು ಸಂಪೂರ್ಣ ನಿರಾಕರಿಸಿದ್ದಾನೆ. ಅದನ್ನು ತುಕಾರಾಮನು ಭಾವಶೂನ್ಯವೆನ್ನುತ್ತಾನೆ. ಲೋಭದಿಂದ ಪೂಜಿಸುವ ಭಕ್ತನೂ ಕಲ್ಲಿಗೆ ಸಮಾನ ಎಂದು

ಕಠೋರವಾಗಿ ಟೀಕಿಸಿದ್ದಾನೆ. ಅಂಥ ಪ್ರಜೆ ಮಾಡಬೇಡ ಎಂದು ಉಪದೇಶ ಮಾಡಿದ್ದಾನೆ. ಪೂಜೆಯನ್ನು ಮಾಡಲೇ ಬೇಕಿದ್ದರೆ, ಬ್ರಹ್ಮಾಂಡ ಸ್ವರೂಪಿ, ವಿಶ್ವಸ್ವರೂಪವಾದ ದೇವರನ್ನು ಪೂಜಿಸಿ ಎನ್ನುತ್ತಾನೆ. ಜಗತ್ತಿನ ಎಲ್ಲ ವಸ್ತುಗಳಲ್ಲಿ ದೇವರು ಇರುವುದರಿಂದ ಅವನಿಗೆ ಅರ್ಪಿಸಲು ಬೇರೆ ಪ್ರಜಾ ದ್ರವ್ಯವಿರುವುದಿಲ್ಲ. ಆದ್ದರಿಂದ ವಿಧಿಪೂರ್ವಕ ಪೂಜೆ ಮಾಡುವ ಗೋಜಿಗೆ ಹೋಗಬೇಡ. ಅದರ ಬದಲು ಮನಸಿನ ಪ್ರಜೆ ಮಾಡಬೇಕು. ನಾಮ ಸ್ಮರಣೆಯ ಪೂಜೆ ಮಾಡಬೇಕು. ಮನಸ್ಸು ಸಮಾಧಾನಿಯಾಗಿರುವ ಸ್ವರೂಪದ ಪೂಜೆ ಮಾಡಬೇಕು ಎಂದು ಬೋಧಿಸಿದ್ದಾನೆ. ಸಕಲ ಪ್ರಾಣಿಗಳನ್ನು ಸಮಾನವಾಗಿ ಕಾಣುವುದೇ ನಿಜವಾದ ಪೂಜೆ. ಅದೇ ನಿಜವಾದ ನೀತಿ. ತುಕಾರಾಮನ ಈ ನಿಲುವು ಧಾರ್ಮಿಕ ಕ್ಷೇತ್ರದಲ್ಲಿಯ ಪೂಜ್ಯ ವಿಚಾರ, ಪವಿತ್ರ ವಿಚಾರ ಎನ್ನಲಡ್ಡಿಯಿಲ್ಲ.

### ಉಪವಾಸ ಮಾಡಬೇಕಿಲ್ಲ

ತುಕಾರಾಮನು ಹಲವು ಯುಕ್ತಿವಾದ ಮಾಡಿ ಉಪವಾಸ ಮಾಡಬೇಕಾದ ಅಗತ್ಯವಿಲ್ಲ ಎಂದು ತೋರಿಸಿಕೊಟ್ಟನು. ಅವನು ಅನ್ನುತ್ತಾನೆ  ನೀನು ಅನ್ನವನ್ನು ತೊರೆಯಬೇಕಿಲ್ಲ, ಎಲ್ಲ ಬಗೆಯ ಭೋಗ ಪಡೆಯುತ್ತಲೇ ನಾರಾಯಣನ ಚಿಂತನೆಯನ್ನು ಮಾಡು. ಸುಖದ ಅನ್ನ ತಿಂದು, ಅವನ ಚಿಂತೆ ಮಾಡು, ಅಂದರೆ ಅವನ ಅನ್ನ ಅವನಿಗೇ ನೀಡಿದಂತಾಗುತ್ತದೆ. ಫಲ ನಮಗೆ ಸಿಗಬಹುದು. ಅವರ ಹೆಸರು ವಿಶ್ವಂಬರ. ಅವನೇ ಆಧಾರ. ಅವನಿಲ್ಲದ ತಾಣವಿಲ್ಲ, ಭಾವನೆಯ ಪ್ರಸಾದ ಕೈಕೊಳ್ಳುವುದೇ ಮಹತ್ವದ ಕಾರ್ಯ. ಪಂಢರಿಯಲ್ಲಿ ಯಾರಾದರೂ ಉಪವಾಸ ಕೈಗೊಂಡರೆ ದೇವರಿಗೆ ಸಹಿಸುವುದಾಗುವುದಿಲ್ಲ. ದೇವರೆ, ನಾನು ನಿನ್ನ ಬಳಿ ಏನು ಬೇಡಲಿ? ಕೆಲವು ಜನ ಹಠದಿಂದ ಉಪವಾಸ ಮಾಡುತ್ತಾರೆ. ಆ ಹಠ ನನ್ನ  ಬಳಿಯಿಲ್ಲ. ಅವರು ಅಪಮಾನ ಮಾಡಿದಂತಾಗುತ್ತದೆ. ನಾರಾಯಣ, ನನಗೆ ಏನು ಕೊರತೆಯಿದೆ? ಉಪವಾಸ ಮಾಡುವ ಬಡಪಾಯಿಗಳು ಮಾಡಲಿ. ನಾನಂತೂ ವಿಠ್ಠಲನ ದಾಸ. ಆಸೆ, ಚಿಂತೆಯನ್ನು ಧಿಕ್ಕರಿಸಿದ್ದೇನೆ. ಹಾವು ಎಲ್ಲಿ ಅನ್ನ ತಿನ್ನುತ್ತದೆ ಅಂದರೆ ಅದು ಉಪವಾಸ ಮಾಡಿದಂತೆ. ಆದರೆ ಅಂತರಂಗದ ಬುದ್ಧಿ ಖೊಟ್ಟಿಯಾಗಿರುತ್ತದೆ. ಅದರ ಹೊಟ್ಟೆಯಲ್ಲಿ ಕೆಡುಕು ಯೋಚನೆ ತುಂಬಿರುತ್ತದೆ. ನಾನು ಅನ್ನ ಬಿಡಲಾರೆ. ನಾನು ನಿರಾಹಾರ ವ್ರತ. ಪಾರಾಯಣ ಮುಂತಾದವುಗಳನ್ನು ಮಾಡುವುದಿಲ್ಲ. ಕೇವಲ ರಾಮಕೃಷ್ಣ, ನಾರಾಯಣ ಎನ್ನುತ್ತೇವೆ. ನಿರಾಹಾರದ ಅಗತ್ಯವಿಲ್ಲ. ನನಗೆ ಹಸಿವು, ನೀರಡಿಕೆ ಸಹಿಸುವುದಾಗುವುದಿಲ್ಲ. ಅಲ್ಪೋಪಹಾರದ ಅಗತ್ಯವೂ ಇಲ್ಲ.

### ಸಂತರೇ ದೇವರು

ತುಕಾರಾಮನು ಸಾಧು ಮತ್ತು ದೇವರಲ್ಲಿಯ ತಾದಾತ್ಮ್ಯದ ಕುರಿತು ಹಲವು ಬಾರಿ ಹೇಳಿದ್ದಾನೆ. "ಭಕ್ತರು ದೇವರಂತೆ ದಯಾವಂತರಾಗಿರುತ್ತಾರೆ. ತನ್ನವರು ಪರಕೀಯರು ಎಂಬ ಭೇದ ಅವರು ಅರಿಯರು. ಇಂಥ ಭಕ್ತರ ಜೀವವೇ ದೇವರು. ಅವರು ನೆಲೆಸಿದ ತಾಣವೇ ವೈಕುಂಠ. ದೇವನೇ ಭಕ್ತ,

ಭಕ್ತನೇ ದೇವರು, ಇವರಿಬ್ಬರಲ್ಲಿ ಭಿನ್ನಭಾವವಿಲ್ಲ". ಎಂದೂ ತುಕಾರಾಮನು ಮತ್ತೂ ಒಂದು ಅಭಂಗದಲ್ಲಿ ಹೇಳಿದ್ದಾನೆ. ದೇವಭಕ್ತರಲ್ಲೂ ಭಿನ್ನತೆಯಿಲ್ಲ ಎಂದೂ ಮತ್ತೊಂದು ಕಡೆ ಉಲ್ಲೇಖಿಸಿದ್ದಾನೆ. ಸಂತರೇ ದೇವರು, ಪ್ರತಿಮೆ ಕೇವಲ ನಿಮಿತ್ತ ಎಂದು ಭಾವಪೂರ್ಣವಾಗಿ ಹೇಳಿದ ಮಾತು ಎಲ್ಲರೂ ಅರಿತಿರಲಿ ಎನ್ನುತ್ತಾನೆ. ನೀವು ದೇವರ ಪೂಜೆ ಮಾಡುವಾಗ ಸಂತರು ಮನೆ ಬಾಗಿಲಿಗೆ ಬಂದರೆ, ಪ್ರಜೆಯನ್ನು ಬದಿಗೆ ಸರಿಸಿ, ಅವರು ಕೆಳ ಜಾತಿಯವರಾಗಿದ್ದರೂ ಸಂತರ ಪೂಜೆ ಕೈಕೊಳ್ಳಬೇಕು ಎಂದು ತುಕಾರಾಮ ಹೇಳುತ್ತಾನೆ.

**ಆಕಸ್ಮಿಕವಾಗಿ ಅದೃಶ್ಯನಾದನು**

ತುಕಾರಾಮನು ಆಕಸ್ಮಿಕವಾಗಿ ಅದೃಶ್ಯನಾದನು, ಮಾಯವಾದನು ಎನ್ನುವುದು ಅವನ ಸಾವಿನ ಬಗೆಗೆ ಸರ್ವ ಸಾಮಾನ್ಯ ತಿಳುವಳಿಕೆ. ಉದಾ, ಅಜಗಾವಕರ ಹೇಳುವುದು ಹೀಗೆ; "ಆದಿನ ಇಂದ್ರಾಣಿ ತೀರದಲ್ಲಿ ಕೀರ್ತನೆ ಮಾಡುತ್ತಿರುವಾಗ ತುಕಾರಾಮ ಆಕಸ್ಮಿಕವಾಗಿ ಅದೃಶ್ಯರಾದರು. ಅದೃಶ್ಯರಾದರು ಎಂದರೆ ಅವರು ಏನಾದರು ಎನ್ನುವುದು ಯಾರಿಗೂ ಗೊತ್ತಾಗಲಿಲ್ಲ. ತುಕಾರಾಮನ ಈ ಸಾವು ಒಂದು ಚಾರಿತ್ರಿಕ ನಿಗೂಢವಾಗಿದೆ (mystery) ಅದಕ್ಕೆ ಸಮಾಧಾನಕರ ಉತ್ತರ ನೀಡುವುದು ತುಂಬ ಕಠಿಣ". ತುಕಾರಾಮ ದೇಹ ಸಹಿತ ಗುಪ್ತವಾದ ಎಂದು ತಿಳಿಸುವ ಅಭಂಗವೂ ಉಪಲಬ್ಧವಿದೆ. ಅದು ತುಕಾರಾಮನ ಹೆಸರಿನಲ್ಲೇ ಇದೆ. ಹರಿಕಥೆ ನಡೆದಾಗ ತುಕಾರಾಮನು ತಟ್ಟನೆ ಮಾಯವಾದನು. ಕ್ಷಣಕಾಲ ಜನ ಗಲಿಬಿಲಿಗೊಂಡರು. ಏನಾಯಿತು ಎಂಬುದೂ ಹೊಳೆಯಲಿಲ್ಲ ಎಂದು ಹೇಳುವ ಅವನದ್ದೇ ಒಂದು ಅಭಂಗವಿದೆ. ಕೀರ್ತನೆ ಮಾಡುತ್ತಿರುವಾಗ ತುಕಾರಾಮ ಅದೃಶ್ಯನಾದನೆಂದು ಹೇಳುತ್ತಾರೆ. ಅವರ ಮಗ ನಾರಾಯಣ ಬುವಾ, ವೈಷ್ಣವ ಭಕ್ತನು ಗುಪ್ತನಾದ ಎಂದು ಮಹೀಪತಿಯ ಅಂಬೋಣ.

ತುಕಾರಾಮನ ಸಾವಿನ ಅತ್ಯಂತ ಮಹತ್ವದ ಸಂದರ್ಭವೆಂದರೆ, ಅವನ ಪಾರ್ಥಿವ ದೇಹವೇನಾಯಿತು? ಎನ್ನುವುದು. ಅದರ ಬಗೆಗೆ ಯಾವ ಮಾಹಿತಿಯೂ ಉಪಲಬ್ಧವಿಲ್ಲ. ಹೀಗಾಗಿ ಜನರು ಸಾವಿನ ಕುರಿತು ಹಲವು ಬಗೆಯ ತರ್ಕವನ್ನು ಮಾಡುತ್ತಿದ್ದಾರೆ. ತುಕಾರಾಮನು ಇಂದ್ರಾಣಿ ತೀರದಲ್ಲಿ ಸಮಾಧಿ ತೆಗೆದುಕೊಂಡ, ತೀರ್ಥಯಾತ್ರೆಗೆ ತೆರಳಿದ, ಜಲಸಮಾಧಿ ತೆಗೆದುಕೊಂಡ, ಮೊಸಳೆ ಎಳೆದುಕೊಂಡು ಹೋಯಿತು. ಕಣಿವೆಯಲ್ಲಿ ಏಕಾಂತ ವಾಸಿಸಿ ಪ್ರಾಣ ತ್ಯಾಗ ಮಾಡಿದ, ಇಂದ್ರಾಣಿಯಲ್ಲಿ ಜಾರಿಬಿದ್ದ, ಮುಳುಗಿದ, ಕಾಡಿನಲ್ಲಿ ಅಲೆದಾಡುವಾಗ ಪ್ರಾಣಿ ತಿಂದಿತು. ಯೋಗದಿಂದ ದೇಹತ್ಯಾಗ ಮಾಡಿದ, ಅವನ ಮೃತದೇಹವನ್ನು ಕಟ್ಟಿಗೆ ವಿಮಾನದಲ್ಲಿ ಹೇರಿ ಸ್ಮಶಾನಕ್ಕೆ ಒಯ್ಯಲಾಯಿತು. ವಗೈರೆ ತರ್ಕ ಮಾಡಲಾಗಿದೆ. ಈ ತರ್ಕವನ್ನು ಹಲವು ಕಾರಣದಿಂದ ತಳ್ಳಿಹಾಕಬೇಕಾಗುತ್ತದೆ. ಅದನ್ನೆಲ್ಲಾ ವಿವರವಾಗಿ ಚರ್ಚಿಸುವುದು ಇಲ್ಲಿ ಅಸಾಧ್ಯ. ಉದಾಹರಣೆಗಾಗಿ ಯೋಗದಿಂದ ದೇಹತ್ಯಾಗ ಮಾಡಿದ್ದನ್ನು ಗಮನಿಸೋಣ. ಯೋಗ ನಮ್ಮಪ್ಪನಿಗಾದರೂ ಗೊತ್ತಿತ್ತೆ? ಎಂದು ಪ್ರಶ್ನಿಸುವ ತುಕಾರಾಮನು ಯೋಗದಿಂದ ದೇಹತ್ಯಾಗ ಮಾಡಿದ್ದನ್ನು ಹೇಗೆ ಒಪ್ಪುವುದು?

**ವೈಕುಂಠಕ್ಕೆ ಹೋದನೆ?**

ಶ್ರದ್ಧಾವಂತರು ತುಕಾರಾಮನು ಸದೇಹಿಯಾಗಿ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ನಿಜಧಾಮಕ್ಕೆ ಅಥವಾ ವೈಕುಂಠಕ್ಕೆ ಹೋದನೆಂದು ನಂಬುತ್ತಾರೆ.

ಸಂತಾಜಿ ಜಗನಾಡೆಯವರ ಪುತ್ರನಾದ ಬಾಳಾಜಿಯ ವಹಿಯಲ್ಲಿ ತುಕಾರಾಮ ಗೋಸಾವಿಯು ಸದೇಹಿಯಾಗಿ ವೈಕುಂಠಕ್ಕೆ ಹೋದನೆಂಬ ಉಲ್ಲೇಖವಿದೆ. ತುಕಾರಾಮನು ಸದೇಹಿಯಾಗಿ ವಿಮಾನದಲ್ಲಿ ಕೂತು ವೈಕುಂಠಕ್ಕೆ ಹೋಗಿದ್ದರಿಂದ, ಅವನ ಕ್ರಿಯಾಕರ್ಮ ಮಾಡಬೇಕಾದ ಅಗತ್ಯವಿಲ್ಲ ಎಂಬ ನಿರ್ಣಯವನ್ನು ರಾಮೇಶ್ವರ ಭಟ್ಟನು ಕಾನ್ಹೋಬಾ ಮುಂತಾದವರಿಗೆ ನೀಡಿದನೆಂದು ಹೇಳಲಾಗುತ್ತದೆ. ತುಕಾರಾಮನು ವಿಮಾನದಲ್ಲಿ ಕೂತು ವೈಕುಂಠಕ್ಕೆ ತೆರಳಿರುವುದಾಗಿ ಮಹೀಪತಿಯೂ ಹೇಳಿದ್ದಾನೆ.

ಲ.ರಾ. ಪಾಂಗಾರಕರ ನೀಡುವ ವಿವರಣೆ ಹೀಗಿದೆ : "ಪ್ರತ್ಯಕ್ಷ ಪ್ರಮಾಣದ ಕೊರತೆಯಿದ್ದಾಗ ಶಬ್ದ ಪ್ರಮಾಣವನ್ನು ಒಪ್ಪುತ್ತಾರೆ. ಅದು ಸಾಕಾಗುತ್ತದೆ. ಅದನ್ನು ನಾನು ಕೊಡಬಲ್ಲೆ ...... ಆದಿ ಭೌತಿಕ ಶಾಸ್ತ್ರಗಳ ಹಲವು ಸಂಗತಿಗೆ ಉತ್ತರ ನೀಡಲು ಬರದೇ ಇರುವುದನ್ನು ನಾನು ಸಚಿತರ ಸಹವಾಸದಲ್ಲಿ ಕಂಡಿದ್ದೇನೆ. ಹಲವರೂ ನೋಡಿರಬೇಕು". ಹಲವು ಸಂಗತಿಗಳಿಗೆ ವಿಜ್ಞಾನದಲ್ಲೂ ಉತ್ತರವಿಲ್ಲ ಎಂದವರ ಹೇಳಿಕೆ. ಪಾಶ್ಚಾತ್ಯರು ಆಧ್ಯಾತ್ಮದ ಓನಾಮಗಳನ್ನು ಈಗ ಕಲಿಯುತ್ತಿದ್ದಾರೆ. ಬದಲು ಭಾರತ ಭೂಮಿಯು ಆಧ್ಯಾತ್ಮದ ಗಣಿಯಾಗಿದೆ ಎಂದವರ ಅಂಬೋಣ.

ಸತ್ಯವತಿ, ತ್ರಿಶಂಕು, ಸಪ್ತಮುನಿ, ಲಕ್ಷ್ಮಣ, ರಾಮ ಮತ್ತು ಯುಧಿಷ್ಠರನು ಸದೇಹಿಯಾಗಿ ಸ್ವರ್ಗಾರೋಹಣ ಹೋದ ಕಥೆಗಳ ಸಹಾಯದಿಂದ ತುಕಾರಾಮನು ಸದೇಹಿಯಾಗಿ ವೈಕುಂಠಕ್ಕೆ ಹೋಗಿರುವುದನ್ನು ಸಿದ್ಧ ಮಾಡುವ ಪ್ರಯತ್ನ ಅವರದ್ದು. ಕೆಲವು ಸಂತರ ಚರಿತ್ರೆಯ ಆಧಾರವನ್ನೂ ಅವರು ನೀಡಿದ್ದಾರೆ. ಮುಕ್ತಾಬಾಯಿ ನೋಡನೋಡುತ್ತ ಲುಪ್ತರಾಗಿರುವುದನ್ನು ಅವರು ಹೇಳುತ್ತಾರೆ. ಕಬೀರ, ಗುರು ನಾನಕ, ದ್ರವಿಡ, ಸಾಧು ತಿರುಪನ್ನ (ಅಝುವರ) ಮತ್ತು ಶೈವ ಸಾಧು ಮಾಣಿಕ್ಯ ವಾಚಕರ ಇವರು ಸದೇಹಿಯಾಗಿ ದೇವರ ರೂಪ ಹೊಂದಿದರೆಂದು ಹೇಳುತ್ತಾರೆ. 'ಸರ್ವ ಸಾಧೂ ಸಂತರು, ರಾಮಾಯಣ ಮಹಾಭಾರತದಂತಹ ಗ್ರಂಥಗಳೂ ಕಾಳಿದಾಸನಜಿತಹ ಕವೀಶ್ವರ ಮತ್ತು ಇನ್ನುಳಿದ ಧಾರ್ಮಿಕ ಗ್ರಂಥಗಳೂ ಒಮ್ಮುಖದಿಂದ ಸದೇಹ ವೈಕುಂಠಕ್ಕೆ ತೆರಳುವ ಮತ್ತು ಕೀರ್ತನ ನಡೆವಾಗಲೇ ಅದೃಶ್ಯವಾಗುವುದಕ್ಕೆ ಪ್ರಮಾಣ ನೀಡುತ್ತಿರುವಾಗ ... ...' ಎಂದೂ ಹೇಳುತ್ತಾರೆ.

# ಅಧ್ಯಾಯ ೭

## ಬಾಹುಸಾರ ಕ್ಷತ್ರಿಯ ಸಮುದಾಯದ ಶೈಕ್ಷಣಿಕ, ರಾಜಕೀಯ ಹಾಗೂ ಆರ್ಥಿಕ ಸ್ಥಿತಿಗತಿ

೭.೧ ಶೈಕ್ಷಣಿಕ ಸ್ಥಿತಿಗತಿ

೭.೨ ರಾಜಕೀಯ ಸ್ಥಿತಿಗತಿ

೭.೩ ಆರ್ಥಿಕ ಸ್ಥಿತಿಗತಿ

# ಅಧ್ಯಾಯ ೭

## ಬಾಹುಸಾರ ಕ್ಷತ್ರಿಯ ಸಮುದಾಯದ ಶೈಕ್ಷಣಿಕ, ರಾಜಕೀಯ ಹಾಗೂ ಆರ್ಥಿಕ ಸ್ಥಿತಿಗತಿ

### ೭.೧ ಶೈಕ್ಷಣಿಕ ಸ್ಥಿತಿಗತಿ :

ಒಂದು ಪರಿಸರದ ಸಮುದಾಯವನ್ನು ಕುರಿತು ಅಧ್ಯಯನಕ್ಕೆ ತೊಡಗಿದಾಗ ಆ ಪ್ರದೇಶದ ಒಟ್ಟು ಅಭಿವೃದ್ಧಿ ಹಾಗೂ ಅಲ್ಲಿನ ವೈಶಿಷ್ಟ್ಯತೆಗಳೊಂದಿಗೆ ಇಂದಿನ ಅಧುನಿಕತೆಗೆ ಅನುಗುಣವಾಗಿ ಆ ಪರಿಸರದ, ಆ ಸಮುದಾಯದ ಶೈಕ್ಷಣಿಕ ವ್ಯವಸ್ಥೆ ಹೇಗೆ ಬೆಳವಣಿಗೆ ಹೊಂದುತ್ತಾ ಬಂದಿದೆ ಎಂಬುದನ್ನು ಅವಲೋಕಿಸಬೇಕಾದುದು ಬಹುಮಹತ್ವದ ಅಂಶ. ಶಿವಮೊಗ್ಗ ಜಿಲ್ಲೆ ಪರಿಸರದ ಒಟ್ಟು ಶೈಕ್ಷಣಿಕ ಅಭಿವೃದ್ಧಿಯನ್ನು ಪರಿಗಣಿಸಿದಾಗ ಇಲ್ಲಿ ಪ್ರಾಚೀನ ಕಾಲದಿಂದಲೂ ಇಂದಿನತನಕ ಶಿಕ್ಷಣ ಮಹತ್ವದ ಪಾತ್ರವಹಿಸಿಕೊಂಡು ಬಂದಿದೆ. ಅದರಲ್ಲಿಯೂ ಇಂದು ಸರಕಾರ ಮತ್ತು ಸಂಘಸಂಸ್ಥೆಗಳು ಶಿಕ್ಷಣ ಪ್ರಸಾರದಲ್ಲಿ ಮಹತ್ವದ ಪಾತ್ರವಹಿಸುತ್ತಿದ್ದು, ಈ ಭಾಗದಲ್ಲಿ ಮೊದಲಿಗೆ ಮರಾಠಿ ಶಾಲೆಗಳಿದ್ದವು, ತದನಂತರ ೧೮೫೭ ರಿಂದ ಕನ್ನಡ ಶಾಲೆಗಳು ಇಲ್ಲಿ ಪ್ರಾರಂಭವಾದವು. ಆದಾದ ಬಳಿಕ ಇಂದು ನಾಯಿಕೊಡೆಗಳಂತೆ ಶಿಕ್ಷಣ ಸಂಸ್ಥೆಗಳು ಹುಟ್ಟಿಕೊಂಡು ಎಲ್ಲಾ ಸಮುದಾಯದ ಜನರು ವಿದ್ಯಾವಂತರಾಗಿ ಹೊರಬಂದಿದ್ದಾರೆ. ಸರ್ಕಾರಿ ನೌಕರಿಯನ್ನು ಹಿಡಿದಿದ್ದಾರೆ.

ಕೆಲವಾರು ಹಳ್ಳಿಗಳಲ್ಲಿ ಕ್ಷೇತ್ರ ಕಾರ್ಯಕ್ಕೆ ಹೋದಾಗ ಹಿರಿಯ ಪುರಷ ಮಹಿಳೆಯರು ನಮ್ಮ ಬಗ್ಗೆ ಯಾರು ಇಷ್ಟೊಂದು ಕಾಳಜಿ ವಹಿಸಿರಲಿಲ್ಲ. ನೀವಾದರೂ ನಮಗೆ ಮತ್ತು ನಮ್ಮ ಮಕ್ಕಳಿಗೆ ತಿಳುವಳಿಕೆ ಹೇಳಲು ಬಂದಿರುವಿರೆಲ್ಲಾ. ಇನ್ನು ಮುಂದಾದರೂ ಶಾಲೆಗೆ ನಮ್ಮ ಮಕ್ಕಳನ್ನು ಕಳುಹಿಸುತ್ತೇವೆ ಎಂದು ದುಃಖದಿಂದ ನುಡಿದರು.

ಸಮುದಾಯದ ಸಮಾಜ ಸಂಘಟನೆಯ ಕೆಲಸವು ಇಂದು ಪ್ರಗತಿಯ ಪಥದತ್ತ ಸಾಗುತ್ತಿರುವುದರಿಂದ, ವಿದ್ಯಾವಂತ ಯುವಕರು ಕೆಲವು ಆಸಕ್ತಿಯುಳ್ಳ ಯುವಕರು, ಸಮಾಜವು ಮುಂದುವರೆದು ಪ್ರಗತಿ ಸಾಧಿಸಲು ಶಿಕ್ಷಣವಂತರಾಗಿ ಮುಂದೆ ಬರುವಲ್ಲಿ ಪ್ರಯತ್ನಿಸುತ್ತಿದ್ದಾರೆ.

ಇಂದು ಈ ಸಮುದಾಯದವರು ಶಿಕ್ಷಣದ ಬಗ್ಗೆ ಬಹಳಷ್ಟು ಒಲವು ತೋರುತ್ತಿದ್ದಾರೆ. ತಮ್ಮಂತೆ ತಮ್ಮ ತಮ್ಮ ಮಕ್ಕಳು ಪಡಬಾರದ ಕಷ್ಟವನ್ನು ಪಡಬಾರದು ಎನ್ನುವ ತಿಳುವಳಿಕೆ ಬಂದು ಶಿಕ್ಷಣ ಸಂಸ್ಥೆಗಳ ಕದ ತಟ್ಟುತ್ತಿದ್ದಾರೆ. ನಮ್ಮಂತೆ ನಮ್ಮ ಮಕ್ಕಳು ಅವಿದ್ಯಾವಂತರಾಗಬಾರದೆಂದು ಶಾಲಾ ಕಾಲೇಜುಗಳ ಮೆಟ್ಟಿಲು ಹತ್ತಿಸುತ್ತಿದ್ದಾರೆ.

ವ್ಯಕ್ತಿತ್ವ ವಿಕಾಸಕ್ಕೆ ಮಾನವ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಗೌರವಿಸುದಕ್ಕೆ ಶಿಕ್ಷಣ ಅಗತ್ಯವಾದುದು ಎನ್ನುವ ಅರಿವು ವಿದ್ಯಾವಂತ ಯುವಕರಿಗೆ ಬಂದು ತಮ್ಮ ಸಮುದಾಯದ ಮಕ್ಕಳ ವಿದ್ಯಾಭ್ಯಾಸದ ಕಡೆಗೆ

ಹೆಚ್ಚಿನ ಗಮನ ಹರಿಸುತ್ತಿದ್ದಾರೆ. ನಾವು ನಮ್ಮನ್ನು ಗೌರವಿಸುವುದಕ್ಕೆ, ಹಾಗೆಯೇ ಇತರರು ನಮ್ಮನ್ನು ಗೌರವಿಸುವುದಕ್ಕೆ, ನಮ್ಮ ಸಮಾಜದ ಏಳ್ಗೆಗೆ ಇರುವ ಸಾಧನ ಶಿಕ್ಷಣ ಎನ್ನುವುದನ್ನು ಮನಗಂಡಿದ್ದಾರೆ.

**ವಿಸ್ತೀರ್ಣ ಮತ್ತು ಜನ ಸಂಖ್ಯೆ / Area and Population**

**೨೦೧೧ ರ ಜನಗನತಿಯ ಪಕ್ಷಿನೋಟ ತಾತ್ಕಾಲಿಕ (2011 Census at a glance)(Provisional)**

| ಕ್ರಸಂ. Sl. No | ತಾಲ್ಲೂಕುಗಳು Taluks | ಭೌಗೋಳಿಕ ವಿಸ್ತೀರ್ಣ (ಚ.ಕಿಮಿ) Geographical Area (sq.kms) 2011 census | ಗಂಡು Male | ಹೆಣ್ಣು Female | ಒಟ್ಟು Total | ದ ಶಕದ ಬೆಳವಣಿಗೆ ಪ್ರಮಾಣ (%) Decinial Growth rate (%) |
|---|---|---|---|---|---|---|
| 1 | 2 | 81 | 82 | 83 | 84 | 85 |
| 1 | ಭದ್ರಾವತಿ Bhadravathi | 690 | 170294 | 169636 | 339930 | 0.28 |
| 2 | ಹೊಸನಗರ Hosanagara | 1423 | 58503 | 59645 | 118148 | 2.74 |
| 3 | ಸಾಗರ Sagara | 1940 | 102278 | 103834 | 206112 | 2.55 |
| 4 | ಶಿಕಾರಿಪುರ Shikaripura | 909 | 122530 | 119413 | 241943 | 13.27 |
| 5 | ಶಿವಮೊಗ್ಗ Shimoga | 1113 | 255322 | 251761 | 507083 | 13.90 |
| 6 | ಸೊರಬ Soraba | 1148 | 101297 | 99546 | 200843 | 8.23 |
| 7 | ತೀರ್ಥಹಳ್ಳಿ Thirthalli | 1254 | 69593 | 71860 | 141453 | -1.22 |
| ಜಿಲ್ಲಾ ಮೊತ್ತ District Total | | 8477 | 879817 | 875695 | 1755512 | *6.88 |

ಮಾಹಿತಿ : ನಿರ್ದೇಶಕರು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು

| ಜನಸಂಖ್ಯೆಯ ಅಂದಾಜು (೨೦೧೧ ರಿಂದ ೨೦೨೧ ರ ವರೆಗೆ) | | | | | | | |
|---|---|---|---|---|---|---|---|
| **Projected Population 2011 – 2021 (in Nos.)** | | | | | | | |
| ಕ್ರ.ಸಂ<br>**Sl. No** | ತಾಲ್ಲೂಕುಗಳು<br>**Taluk** | **2011** | **2012** | **2013** | **2014** | **2015** | **2016** |
| **1** | **2** | **226** | **227** | **228** | **229** | **230** | **231** |
| **1** | ಭದ್ರಾವತಿ<br>**Bhadravathi** | 339930 | 342305 | 344697 | 347108 | 349537 | 351984 |
| **2** | ಹೊಸನಗರ<br>**Hosanagara** | 118148 | 118821 | 119499 | 120180 | 120867 | 121555 |
| **3** | ಸಾಗರ<br>**Sagara** | 206112 | 207467 | 208833 | 210206 | 211591 | 212986 |
| **4** | ಶಿಕಾರಿಪುರ<br>**Shikaripura** | 241943 | 243452 | 244973 | 246503 | 248042 | 249593 |
| **5** | ಶಿವಮೊಗ್ಗ<br>**Shimoga** | 507083 | 510940 | 514828 | 518748 | 522701 | 526685 |
| **6** | ಸೊರಬ<br>**Soraba** | 200843 | 201990 | 203145 | 204306 | 205475 | 206649 |
| **7** | ತೀರ್ಥಹಳ್ಳಿ<br>**Thirthalli** | 141453 | 142285 | 143121 | 143964 | 144812 | 145663 |
| | ಜಿಲ್ಲಾ ಮೊತ್ತ<br>**District Total** | **1755512** | **1767260** | **1779096** | **1791015** | **1803025** | **1815115** |

**ಮಾಹಿತಿ : ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು**

| ಸಾಕ್ಷರತಾ ಪ್ರಮಾಣ (%) ೨೦೧೧ ರ ಜನಗಣತಿಯ ಮೇರೆಗೆ (ತಾತ್ಕಾಲಿಕ)<br>Literacy Rate (%) as per 2011 Census (Provisonal) | | | | | | | | | | |
|---|---|---|---|---|---|---|---|---|---|---|
| ಕ್ರ.ಸಂ.<br>Sl. No | ತಾಲ್ಲೂಕುಗಳು<br>Taluks | ಗ್ರಾಮೀಣ<br>Rural | | | ನಗರ<br>Urban | | | ಒಟ್ಟು<br>Total | | |
| | | ಗಂಡು<br>Male | ಹೆಣ್ಣು<br>Female | ಒಟ್ಟು<br>Total | ಗಂಡು<br>Male | ಹೆಣ್ಣು<br>Female | ಒಟ್ಟು<br>Total | ಗಂಡು<br>Male | ಹೆಣ್ಣು<br>Female | ಒಟ್ಟು<br>Total |
| **1** | **2** | **136** | **137** | **138** | **139** | **140** | **141** | **142** | **143** | **144** |
| 1 | ಭದ್ರಾವತಿ<br>Bhadravathi | 81.02 | 68019 | 74.63 | 91.55 | 81.70 | 86.60 | 85.7 | 74.26 | 79.98 |
| 2 | ಹೊಸನಗರ<br>Hosanagara | 86.59 | 73.48 | 79.96 | 94.42 | 87.84 | 91.01 | 86.97 | 78.20 | 80.51 |
| 3 | ಸಾಗರ<br>Sagara | 85.57 | 69.29 | 77.38 | 93.97 | 87.22 | 90.58 | 88.32 | 74.98 | 81.59 |
| 4 | ಶಿಕಾರಿಪುರ<br>Shikaripura | 79.45 | 65.27 | 72.45 | 90.97 | 84.39 | 87.69 | 81.96 | 69.51 | 75.81 |
| 5 | ಶಿವಮೊಗ್ಗ<br>Shimoga | 81.52 | 68.84 | 75.24 | 91.32 | 84.70 | 88.02 | 87.76 | 78.98 | 83.39 |
| 6 | ಸೊರಬ<br>Soraba | 81.64 | 68.97 | 75.36 | 92.87 | 86.40 | 89.58 | 82.26 | 69.98 | 76.16 |
| 7 | ತೀರ್ಥಹಳ್ಳಿ<br>Thirthalli | 88.57 | 76.72 | 82.55 | 95.62 | 89.20 | 92.32 | 89.78 | 77.99 | 83.77 |
| ಜಿಲ್ಲಾ ಸರಾಸರಿ<br>District Average | | **82.92** | **69.92** | **76.28** | **91.78** | **84.38** | **88.07** | **86.11** | **74.89** | **80.50** |

ಮಾಹಿತಿ : ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

| ಅಕ್ಷರಸ್ಥರು ೨೦೧೧ ರ ಜನಗಣತಿಯ ಮೇರೆಗೆ (ತಾತ್ಕಾಲಿಕ)<br>Literates as per 2011 Census (Provisonal) | | | | | | | | | | |
|---|---|---|---|---|---|---|---|---|---|---|
| | | ಗ್ರಾಮೀಣ<br>Rural | | | ನಗರ<br>Urban | | | ಒಟ್ಟು<br>Total | | |
| ಕ್ರ.ಸಂ.<br>Sl. No | ತಾಲ್ಲೂಕುಗಳು<br>Taluks | ಗಂಡು<br>Male | ಹೆಣ್ಣು<br>Female | ಒಟ್ಟು<br>Total | ಗಂಡು<br>Male | ಹೆಣ್ಣು<br>Female | ಒಟ್ಟು<br>Total | ಗಂಡು<br>Male | ಹೆಣ್ಣು<br>Female | ಒಟ್ಟು<br>Total |
| **1** | **2** | **127** | **128** | **129** | **130** | **131** | **132** | **133** | **134** | **135** |
| 1 | ಭದ್ರಾವತಿ<br>Bhadravathi | 68982 | 57587 | 126569 | 62199 | 56247 | 118446 | 131181 | 113834 | 245015 |
| 2 | ಹೊಸನಗರ<br>Hosanagara | 43444 | 37681 | 81125 | 2420 | 2392 | 4812 | 45864 | 40073 | 85937 |
| 3 | ಸಾಗರ<br>Sagara | 53704 | 44463 | 98167 | 27677 | 25995 | 53672 | 81381 | 70458 | 151839 |
| 4 | ಶಿಕಾರಿಪುರ<br>Shikaripura | 67452 | 53801 | 121253 | 21492 | 19796 | 41288 | 88944 | 73597 | 162541 |
| 5 | ಶಿವಮೊಗ್ಗ<br>Shimoga | 67894 | 86269 | 124163 | 133191 | 122780 | 255971 | 201085 | 179049 | 380134 |
| 6 | ಸೊರಬ<br>Soraba | 69580 | 57748 | 127328 | 4612 | 4428 | 9040 | 74192 | 62176 | 136368 |
| 7 | ತೀರ್ಥಹಳ್ಳಿ<br>Thirthalli | 51114 | 45709 | 96823 | 6134 | 6054 | 12188 | 57248 | 51763 | 109011 |
| ಜಿಲ್ಲಾ ಮೊತ್ತ<br>District Total | | **422170** | **383258** | **775428** | **257725** | **237692** | **495417** | **679895** | **590950** | **1270845** |

ಮಾಹಿತಿ : ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

| ಶಿಕ್ಷಣ / Education | | | | | | | | |
|---|---|---|---|---|---|---|---|---|
| ಪ್ರಾಥಮಿಕ ಶಾಲೆಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ | | | | | | | | |
| Number of Primary Schools and Students As on 31.03.2012 | | | | | | | | |
| ಕ್ರ.ಸಂ. Sl. No | ತಾಲ್ಲೂಕುಗಳು Taluks | ಶಾಲೆಗಳ ಸಂಖ್ಯೆ No. of Schools | ಒಟ್ಟು ದಾಖಲಾತಿ / Total Enrolment | | | | | |
| | | | ಹುಡುಗರು / Boy | | ಹುಡುಗಿಯರು / Girls | | ಒಟ್ಟು / Total | |
| | | | ದಾಖಲಾತಿ Enrolment | ಹಾಜರಾತಿ Attendence | ದಾಖಲಾತಿ Enrolment | ಹಾಜರಾತಿ Attendence | ದಾಖಲಾತಿ Enrolment | ಹಾಜರಾತಿ Attendence |
| 1 | 2 | 1184 | 1185 | 1186 | 1187 | 1188 | 1189 | 1190 |
| 1 | ಭದ್ರಾವತಿ Bhadravathi | 128 | 2024 | 2004 | 1988 | 1968 | 4012 | 3972 |
| 2 | ಹೊಸನಗರ Hosanagara | 126 | 1146 | 1135 | 1143 | 1132 | 2289 | 2267 |
| 3 | ಸಾಗರ Sagara | 206 | 2634 | 2608 | 2412 | 2388 | 5046 | 4996 |
| 4 | ಶಿಕಾರಿಪುರ Shikaripura | 115 | 2133 | 2112 | 2181 | 2159 | 4314 | 4271 |
| 5 | ಶಿವಮೊಗ್ಗ Shimoga | 167 | 3460 | 3425 | 3161 | 3129 | 6621 | 6554 |
| 6 | ಸೊರಬ Soraba | 184 | 2554 | 2528 | 2574 | 2548 | 5128 | 5076 |
| 7 | ತೀರ್ಥಹಳ್ಳಿ Thirthalli | 118 | 1246 | 1234 | 1149 | 1138 | 2395 | 2372 |
| ಜಿಲ್ಲಾ ಮೊತ್ತ District Total | | 1044 | 15197 | 15046 | 14608 | 14462 | 29805 | 29508 |

ಮಾಹಿತಿ : ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ

| ದಂತ ವೈದ್ಯ ಕಾಲೇಜುಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ | | | | | | | | | |
|---|---|---|---|---|---|---|---|---|---|
| **Number of Dental Colleges and Students As on 31.03.2012** | | | | | | | | | |
| ಕ್ರಸಂ Sl. No | ತಾಲ್ಲೂಕುಗಳು Taluks | ದಂತ ವೈದ್ಯ ಕಾಲೇಜುಗಳು – ಸರ್ಕಾರಿ Dental Colleges - Government | | | | ದಂತ ವೈದ್ಯ ಕಾಲೇಜುಗಳು – ಸರ್ಕಾರಿ Dental Colleges - Private | | | |
| | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ 1st year to Final Year | | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ (ಅನುದಾನಿತ + ಅನುದಾನರಹಿತ) 1st year to Final Year (Aided + Unaided) | | |
| | | | ಹುಡುಗರು Boys | ಹುಡುಗಿಯರು Girls | ಒಟ್ಟು Total | | ಹುಡುಗರು Boys | ಹುಡುಗಿಯರು Girls | ಒಟ್ಟು Total |
| **1** | **2** | **1282** | **1283** | **1284** | **1285** | **1285** | **1287** | **1288** | **1289** |
| **1** | ಭದ್ರಾವತಿ **Bhadravathi** | 0 | 0 | 0 | 0 | 0 | 0 | 0 | 0 |
| **2** | ಹೊಸನಗರ **Hosanagara** | 0 | 0 | 0 | 0 | 0 | 0 | 0 | 0 |
| **3** | ಸಾಗರ **Sagara** | 0 | 0 | 0 | 0 | 0 | 0 | 0 | 0 |
| **4** | ಶಿಕಾರಿಪುರ **Shikaripura** | 0 | 0 | 0 | 0 | 0 | 0 | 0 | 0 |
| **5** | ಶಿವಮೊಗ್ಗ **Shimoga** | 0 | 0 | 0 | 0 | 1 | 60 | 93 | 153 |
| **6** | ಸೊರಬ **Soraba** | 0 | 0 | 0 | 0 | 0 | 0 | 0 | 0 |
| **7** | ತೀರ್ಥಹಳ್ಳಿ **Thirthalli** | 0 | 0 | 0 | 0 | 0 | 0 | 0 | 0 |
| ಜಿಲ್ಲಾ ಮೊತ್ತ **District Total** | | **0** | **0** | **0** | **0** | **1** | **60** | **93** | **153** |

ಮಾಹಿತಿ :ಪ್ರಾಂಶುಪಾಲರು ಶರಾವತಿ ದಂತ ವೈದ್ಯಕೀಯ ಕಾಲೇಜು

| ಪಾಲಿಟೆಕ್ನಿಕ್ ಕಾಲೇಜುಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ<br>Number of Polytechnic Colleges and Students As on 31.03.2012 | | | | | | | | | |
|---|---|---|---|---|---|---|---|---|---|
| ಕ್ರ.ಸಂ<br>Sl. No | ತಾಲ್ಲೂಕುಗಳು<br>Taluks | ಪಾಲಿಟೆಕ್ನಿಕ್ ಕಾಲೇಜುಗಳು – ಸರ್ಕಾರಿ<br>Polytechnic Colleges - Government | | | | ಪಾಲಿಟೆಕ್ನಿಕ್ ಕಾಲೇಜುಗಳು – ಸರ್ಕಾರಿ<br>Polytechnic Colleges - Private | | | |
| | | ಕಾಲೇಜುಗಳ ಸಂಖ್ಯೆ<br>No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ<br>1st year to Final Year | | | ಕಾಲೇಜುಗಳ ಸಂಖ್ಯೆ<br>No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ (ಅನುದಾನಿತ + ಅನುದಾನರಹಿತ)<br>1st year to Final Year (Aided + Unaided) | | |
| | | | ಹುಡುಗರು<br>Boys | ಹುಡುಗಿಯರು<br>Girls | ಒಟ್ಟು<br>Total | | ಹುಡುಗರು<br>Boys | ಹುಡುಗಿಯರು<br>Girls | ಒಟ್ಟು<br>Total |
| 1 | 2 | 1290 | 1291 | 1292 | 1293 | 1294 | 1295 | 1296 | 1297 |
| 1 | ಭದ್ರಾವತಿ<br>Bhadravathi | 1 | 447 | 249 | 696 | 0 | 0 | 0 | 0 |
| 2 | ಹೊಸನಗರ<br>Hosanagara | 0 | 0 | 0 | 0 | 0 | 0 | 0 | 0 |
| 3 | ಸಾಗರ<br>Sagara | 0 | 0 | 0 | 0 | 1 | 563 | 156 | 719 |
| 4 | ಶಿಕಾರಿಪುರ<br>Shikaripura | 1 | 0 | 450 | 450 | 0 | 0 | 0 | 0 |
| 5 | ಶಿವಮೊಗ್ಗ<br>Shimoga | 1 | 0 | 509 | 509 | 3 | 1079 | 303 | 1382 |
| 6 | ಸೊರಬ<br>Soraba | 1 | 416 | 134 | 550 | 0 | 0 | 0 | 0 |
| 7 | ತೀರ್ಥಹಳ್ಳಿ<br>Thirthalli | 0 | 0 | 0 | 0 | 1 | 554 | 128 | 682 |
| ಜಿಲ್ಲಾ ಮೊತ್ತ<br>District Total | | 4 | 863 | 1342 | 2205 | 5 | 2196 | 587 | 2783 |

ಮಾಹಿತಿ : ಪ್ರಾಂಶುಪಾಲರು ಪಿ.ಜಿ.ಎಸ್.ಎಸ್.ಜಿ. ಸರ್ಕಾರಿ ಪಾಲಿಟೆಕ್ನಿಕ್. ಭದ್ರಾವತಿ. ಪ್ರಾಂಶುಪಾಲರು. ಸಂಜಯ್ ಮೆಮೋರಿಯಲ್ ಪಾಲಿಟೆಕ್ನಿಕ್, ಶಿರಾಳಕೊಪ್ಪ, ಪ್ರಾಂಶುಪಾಲರು. ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್. ಶಿವಮೊಗ್ಗ. ಪ್ರಾಂಶುಪಾಲರು. ಡಿ.ವಿ.ಎಸ್. ಪಾಲಿಟೆಕ್ನಿಕ್. ಶಿವಮೊಗ್ಗ. ಪ್ರಾಂಶುಪಾಲರು ಡಿ.ಎಸ್.ದಿನಕರ್ ನ್ಯಾಷನಲ್ ಪಾಲಿಟೆಕ್ನಿಕ್. ಶಿವಮೊಗ್ಗ, ಪ್ರಾಂಶುಪಾಲರು, ಪಿ.ಇ.ಎಸ್. ಪಾಲಿಟೆಕ್ನಿಕ್. ಶಿವಮೊಗ್ಗ. ಪ್ರಾಂಶುಪಾಲರು. ಗ್ರೇಡ್–೧ ಸಹ್ಯಾದ್ರಿ ಪಾಲಿಟೆಕ್ನಿಕ್, ತೀರ್ಥಹಳ್ಳಿ.

## ಭಾರತೀಯ ವೈದ್ಯ ಪದ್ಧತಿ (ಆಯುಷ್) ಕಾಲೇಜುಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ

## Number of Indian System of Medicine Colleges and Students As on 31.03.2012

| ಕ್ರಸಂ Sl. No | ತಾಲ್ಲೂಕುಗಳು Taluks | ಭಾರತೀಯ ವೈದ್ಯ ಪದ್ಧತಿ (ಆಯುಷ್) ಕಾಲೇಜುಗಳು – ಸರ್ಕಾರಿ Indian System of Medicine Colleges - Government | | | | ಭಾರತೀಯ ವೈದ್ಯ ಪದ್ಧತಿ (ಆಯುಷ್) ಕಾಲೇಜುಗಳು – ಸರ್ಕಾರಿ Indian System of Medicine Colleges - Private | | | |
|---|---|---|---|---|---|---|---|---|---|
| | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ 1st year to Final Year | | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ (ಅನುದಾನಿತ + ಅನುದಾನರಹಿತ) 1st year to Final Year (Aided + Unaided) | | |
| | | | ಹುಡುಗರು Boys | ಹುಡುಗಿಯರು Girls | ಒಟ್ಟು Total | | ಹುಡುಗರು Boys | ಹುಡುಗಿಯರು Girls | ಒಟ್ಟು Total |
| 1 | 2 | 1274 | 1275 | 1276 | 1277 | 1278 | 1279 | 1280 | 1281 |
| 1 | ಭದ್ರಾವತಿ Bhadravathi | 0 | 0 | 0 | 0 | 0 | 0 | 0 | 0 |
| 2 | ಹೊಸನಗರ Hosanagara | 0 | 0 | 0 | 0 | 0 | 0 | 0 | 0 |
| 3 | ಸಾಗರ Sagara | 0 | 0 | 0 | 0 | 0 | 0 | 0 | 0 |
| 4 | ಶಿಕಾರಿಪುರ Shikaripura | 0 | 0 | 0 | 0 | 0 | 0 | 0 | 0 |
| 5 | ಶಿವಮೊಗ್ಗ Shimoga | 0 | 0 | 0 | 0 | 2 | 118 | 108 | 226 |
| 6 | ಸೊರಬ Soraba | 0 | 0 | 0 | 0 | 0 | 0 | 0 | 0 |
| 7 | ತೀರ್ಥಹಳ್ಳಿ Thirthalli | 0 | 0 | 0 | 0 | 0 | 0 | 0 | 0 |
| ಜಿಲ್ಲಾ ಮೊತ್ತ District Total | | 0 | 0 | 0 | 0 | 2 | 118 | 108 | 226 |

| ಇಂಜಿನಿಯರಿಂಗ್ ಕಾಲೇಜುಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ | | | | | | | | | |
|---|---|---|---|---|---|---|---|---|---|
| **Number of Engineering Colleges and Students As on 31.03.2012** | | | | | | | | | |
| ಕ್ರ.ಸಂ Sl. No | ತಾಲ್ಲೂಕುಗಳು Taluks | ಇಂಜಿನಿಯರಿಂಗ್ ಕಾಲೇಜುಗಳು – ಸರ್ಕಾರಿ Engineering Colleges - Government | | | | ಇಂಜಿನಿಯರಿಂಗ್ ಕಾಲೇಜುಗಳು – ಸರ್ಕಾರಿ Engineering Colleges - Private | | | |
| | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ 1st year to Final Year | | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ (ಅನುದಾನಿತ + ಅನುದಾನರಹಿತ) 1st year to Final Year (Aided + Unaided) | | |
| | | | ಹುಡುಗರು Boys | ಹುಡುಗಿಯರು Girls | ಒಟ್ಟು Total | | ಹುಡುಗರು Boys | ಹುಡುಗಿಯರು Girls | ಒಟ್ಟು Total |
| 1 | 2 | 1298 | 1299 | 1300 | 1301 | 1302 | 1303 | 1304 | 1305 |
| 1 | ಭದ್ರಾವತಿ Bhadravathi | 0 | 0 | 0 | 0 | 0 | 0 | 0 | 0 |
| 2 | ಹೊಸನಗರ Hosanagara | 0 | 0 | 0 | 0 | 0 | 0 | 0 | 0 |
| 3 | ಸಾಗರ Sagara | 0 | 0 | 0 | 0 | 0 | 0 | 0 | 0 |
| 4 | ಶಿಕಾರಿಪುರ Shikaripura | 0 | 0 | 0 | 0 | 0 | 0 | 0 | 0 |
| 5 | ಶಿವಮೊಗ್ಗ Shimoga | 0 | 0 | 0 | 0 | 2 | 1715 | 1818 | 3593 |
| 6 | ಸೊರಬ Soraba | 0 | 0 | 0 | 0 | 0 | 0 | 0 | 0 |
| 7 | ತೀರ್ಥಹಳ್ಳಿ Thirthalli | 0 | 0 | 0 | 0 | 0 | 0 | 0 | 0 |
| ಜಿಲ್ಲಾ ಮೊತ್ತ District Total | | 0 | 0 | 0 | 0 | 2 | 1715 | 1818 | 3593 |

ಮಾಹಿತಿ : ಪ್ರಾಂಶುಪಾಲರು, ಪಿ.ಇ.ಎಸ್.ಟಿ.ಎಂ. ಶಿವಮೊಗ್ಗ, ಪ್ರಾಂಶುಪಾಲರು, ಜೆ.ಎನ್.ಎನ್.ಸಿ.ಇ. ಶಿವಮೊಗ್ಗ

## ವೈದ್ಯಕೀಯ ಕಾಲೇಜುಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ

## Number of Medical Colleges and Students As on 31.03.2012

| ಕ್ರಸಂ Sl. No | ತಾಲ್ಲೂಕುಗಳು Taluks | ವೈದ್ಯಕೀಯ ಕಾಲೇಜುಗಳು – ಸರ್ಕಾರಿ Medical Colleges - Government | | | | ವೈದ್ಯಕೀಯ ಕಾಲೇಜುಗಳು – ಸರ್ಕಾರಿ ಒಜಜುಭಿಚಟ ಅಂಟಟಜಂಭ – ಕಡಿತಚಣಜ | | | |
|---|---|---|---|---|---|---|---|---|---|
| | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ 1st year to Final Year | | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ (ಅನುದಾನಿತ + ಅನುದಾನರಹಿತ) 1st year to Final Year (Aided + Unaided) | | |
| | | | ಹುಡುಗರು Boys | ಹುಡುಗಿಯರು Girls | ಒಟ್ಟು Total | | ಹುಡುಗರು Boys | ಹುಡುಗಿಯರು Girls | ಒಟ್ಟು Total |
| 1 | 2 | 1266 | 1267 | 1268 | 1269 | 1270 | 1271 | 1272 | 1273 |
| 1 | ಭದ್ರಾವತಿ Bhadravathi | 0 | 0 | 0 | 0 | 0 | 0 | 0 | 0 |
| 2 | ಹೊಸನಗರ Hosanagara | 0 | 0 | 0 | 0 | 0 | 0 | 0 | 0 |
| 3 | ಸಾಗರ Sagara | 0 | 0 | 0 | 0 | 0 | 0 | 0 | 0 |
| 4 | ಶಿಕಾರಿಪುರ Shikaripura | 0 | 0 | 0 | 0 | 0 | 0 | 0 | 0 |
| 5 | ಶಿವಮೊಗ್ಗ Shimoga | 1 | 249 | 250 | 499 | 0 | 0 | 0 | 0 |
| 6 | ಸೊರಬ Soraba | 0 | 0 | 0 | 0 | 0 | 0 | 0 | 0 |
| 7 | ತೀರ್ಥಹಳ್ಳಿ Thirthalli | 0 | 0 | 0 | 0 | 0 | 0 | 0 | 0 |
| ಜಿಲ್ಲಾ ಮೊತ್ತ District Total | | **1** | **249** | **250** | **499** | **0** | **0** | **0** | **0** |

ಮಾಹಿತಿ : ನಿರ್ದೇಶಕರು ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ. ಪ್ರಾಂಶುಪಾಲರು ಬಾಪೂಜಿ ಆಯುರ್ವೇದಿಕ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ನವುಲೆ. ಆಡಳಿತಾಧಿಕಾರಿಗಳು ಟಿ.ಎಂ.ಎ.ಇ.ಎಸ್. ಆಯುರ್ವೇದಿಕ್ ಕಾಲೇಜು ಮತ್ತು ಆಸ್ಪತ್ರೆ. ಮಾಚೇನಹಳ್ಳಿ.

## ಸಾಮಾನ್ಯ ಪದವಿ ಕಾಲೇಜುಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ

## Number of General Degree Colleges and Students As on 31.03.2012

| ಕ್ರಸಂ Sl. No | ತಾಲ್ಲೂಕುಗಳು Taluks | ಸಾಮಾನ್ಯ ಪದವಿ ಕಾಲೇಜುಗಳು – ಸರ್ಕಾರಿ General Degree Colleges - Government | | | | ಸಾಮಾನ್ಯ ಪದವಿ ಕಾಲೇಜುಗಳು – ಸರ್ಕಾರಿ General Degree Colleges - Private | | | |
|---|---|---|---|---|---|---|---|---|---|
| | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ 1st year to Final Year | | | ಕಾಲೇಜುಗಳ ಸಂಖ್ಯೆ No. of Colleges | ಮೊದಲ ವರ್ಷದಿಂದ ಅಂತಿಮ ವರ್ಷದವರೆಗೆ (ಅನುದಾನಿತ + ಅನುದಾನರಹಿತ) 1st year to Final Year (Aided + Unaided) | | |
| | | | ಹುಡುಗರು Boys | ಹುಡುಗಿಯರು Girls | ಒಟ್ಟು Total | | ಹುಡುಗರು Boys | ಹುಡುಗಿಯರು Girls | ಒಟ್ಟು Total |
| 1 | 2 | | | | | | | | |
| 1 | ಭದ್ರಾವತಿ Bhadravathi | 4 | 780 | 1019 | 1799 | 2 | 92 | 145 | 237 |
| 2 | ಹೊಸನಗರ Hosanagara | 1 | 642 | 465 | 1107 | 1 | 201 | 225 | 426 |
| 3 | ಸಾಗರ Sagara | 1 | 0 | 1843 | 1843 | 3 | 251 | 96 | 347 |
| 4 | ಶಿಕಾರಿಪುರ Shikaripura | 1 | 567 | 536 | 1103 | 3 | 297 | 498 | 795 |
| 5 | ಶಿವಮೊಗ್ಗ Shimoga | 5 | 2679 | 3383 | 6062 | 8 | 923 | 613 | 1536 |
| 6 | ಸೊರಬ Soraba | 1 | 312 | 393 | 705 | 1 | 151 | 192 | 343 |
| 7 | ತೀರ್ಥಹಳ್ಳಿ Thirthalli | 2 | 423 | 554 | 977 | 1 | 485 | 809 | 1294 |
| ಜಿಲ್ಲಾ ಮೊತ್ತ District Total | | 15 | 5403 | 8193 | 13596 | 19 | 2400 | 2578 | 4978 |

ಮಾಹಿತಿ: ಉಪಕುಲಸಚಿವರು. ಕುವೆಂಪು ವಿಶ್ವವಿದ್ಯಾಲಯ. ಶಂಕರಘಟ್ಟ. ಪ್ರಾದೇಶಿಕ ನಿರ್ದೇಶಕರು. ಕಾಲೇಜು ಶಿಕ್ಷಣ ಇಲಾಖೆ.

| ಪದವಿ ಪೂರ್ವ ಕಾಲೇಜುಗಳ, ವಿದ್ಯಾರ್ಥಿಗಳ ಮತ್ತು ಉಪನ್ಯಾಸಕರ ಸಂಖ್ಯೆ | | | | | | | | | | | |
|---|---|---|---|---|---|---|---|---|---|---|---|
| Number of P.U. Colleges Students and LecturersAs on 31.03.2012 | | | | | | | | | | | |
| ಪದವಿ ಪೂರ್ವ ಕಾಲೇಜುಗಳು / Pre – University Colleges | | | | | | | | | | | |
| ಕ್ರ.ಸಂ. Sl. No | ತಾಲ್ಲೂಕುಗಳು Taluks | ಕಾಲೇಜುಗಳ ಸಂಖ್ಯೆ No. of Colleges | ಉಪನ್ಯಾಸಕರ ಸಂಖ್ಯೆ No. of Lecturers | | ಪದವಿಪೂರ್ವ ಕಾಲೇಜುಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆ (೧ ಮತ್ತು ೨ ನೇ ವರ್ಷ) No. of Students in PU Colleges (1st & 2nd Year) | | | | | | |
| | | | ಪುರುಷರು Men | ಮಹಿಳೆಯರು Women | ಸರ್ಕಾರಿ Government | | ಖಾಸಗಿ Private | | | | |
| | | | | | | | ಅನುದಾನಿತ Aided | | ಅನುದಾನರಹಿತ Unaided | | |
| | | | | | ಹುಡುಗರು Boys | ಹುಡುಗಿಯರು Girl | ಹುಡುಗರು Boys | ಹುಡುಗಿಯರು Girls | ಹುಡುಗರು Boys | ಹುಡುಗಿಯರು Girl | ಒಟ್ಟು Total |
| | | | | | | | | | | | |
| 1 | ಭದ್ರಾವತಿ Bhadravathi | 21 | 140 | 66 | 963 | 1961 | 180 | 192 | 715 | 788 | 4799 |
| 2 | ಹೊಸನಗರ Hosanagara | 8 | 53 | 19 | 717 | 1046 | 0 | 0 | 106 | 175 | 2044 |
| 3 | ಸಾಗರ Sagara | 14 | 127 | 40 | 1700 | 2283 | 273 | 262 | 325 | 300 | 5143 |
| 4 | ಶಿಕಾರಿಪುರ Shikaripura | 19 | 122 | 27 | 1130 | 1783 | 0 | 0 | 310 | 389 | 3612 |
| 5 | ಶಿವಮೊಗ್ಗ Shimoga | 34 | 253 | 124 | 1135 | 1374 | 2394 | 3028 | 1861 | 2176 | 11968 |
| 6 | ಸೊರಬ Soraba | 5 | 45 | 13 | 918 | 1274 | 37 | 81 | 16 | 86 | 2412 |
| 7 | ತೀರ್ಥಹಳ್ಳಿ Thirthalli | 11 | 79 | 21 | 807 | 1133 | 296 | 314 | 161 | 114 | 2825 |
| ಜಿಲ್ಲಾ ಮೊತ್ತ District Total | | 112 | 819 | 310 | 7370 | 10854 | 3180 | 3877 | 3494 | 4028 | 32803 |

ಮಾಹಿತಿ : ಉಪನಿರ್ದೇಶಕರು, ಪದವಿ ಪೂರ್ವ ಮತ್ತು ವೃತ್ತಿ ಶಿಕ್ಷಣ ಇಲಾಖೆ

ಸಮುದಾಯದ ಜನಸಂಖ್ಯೆಯು ಕಡಿಮೆ ಇದ್ದು, ಆರ್ಥಿಕ ಪರಿಸ್ಥಿತಿಯು ಹೀನಾಯ ಪರಿಸ್ಥಿತಿಯಲ್ಲಿದೆ. ಇಂದಿನ ಪರಿಸ್ಥಿತಿಯಲ್ಲಿ ಯಾವುದೇ ಒಂದು ಸಮುದಾಯಕ್ಕೆ ಸೌಲಭ್ಯ ಸವಲತ್ತುಗಳು ಸಿಗಬೇಕಾದರೆ ಇವರು ತಮ್ಮ ಮತಗಳನ್ನು ಬಲಿಷ್ಠ ಜಾತಿಗಳಿಗೆ ಮಾರಬೇಕು. ಇಲ್ಲವೇ ಸರಕಾರವೇ ಇವರಿಗೆ ಕರುಣೆ ತೋರಬೇಕು. ಹಾಗಾದಾಗ ಮಾತ್ರ ಅಲ್ಪಸ್ವಲ್ಪ ಸೌಲಭ್ಯ ಸಿಗಲು ಸಾಧ್ಯವಾದೀತು.

ಖಡ್ಗ ಹಿಡಿದ ಕೈಗಳು ಪೆನ್ನು ಹಿಡಿಯಬೇಕು ಎನ್ನುವ ಸಮಷ್ಟಿ ಪ್ರಜ್ಞೆಯನ್ನು ಇವರಲ್ಲಿ ಮೂಡಿಸಬೇಕಾಗಿದೆ. ಸಹಸ್ರಾರು ವರ್ಷಗಳಿಂದಲೂ ಅತ್ಯಂತ ಉತ್ಸಾಹಿ ಸಮುದಾಯವೆಂದು ಪ್ರಖ್ಯಾತಿಯನ್ನು ಹೊಂದಿದ್ದು, ವೀರಜೀವನ ನಡೆಯಿಸಿ ಹುಲಿಯಾಗಿ ಚರಿತ್ರೆಯಲ್ಲಿ ಹೆಸರು ಮಾಡಿರುವ ನಮ್ಮ ಪೂರ್ವಜರು, ಶಿವಾಜಿ ಮಹಾರಾಜರ ಈ ನೆಲದಲ್ಲಿ ಬ್ರಿಟೀಷರಿಗೆ ಸಿಂಹ ಸ್ವಪ್ನವಾಗಿರುವುದನ್ನು ನೆನಪಿಸಿಕೊಳ್ಳುವ ಈ ಸಮುದಾಯ ಅಂತಹ ಧವಳ ಕೀರ್ತಿಗೆ ಕಳಂಕ ತರುವ ಕೆಲಸಕ್ಕೆ ಇಂದು ಕಾರಣರಾಗಿ ಸಿಂಹದ ಮರಿಗಳಾಗಿ ಹೊರಬರಲು ಪ್ರಯತ್ನಿಸುವುದಿಲ್ಲ ಎನ್ನುವ ಯೋಚನೆಯಲ್ಲಿ ಇವರಿಗೆ ಅಪಾರವಾದ ಬಡತನ ಕಾರಣವಾಗಿ ಕಾಡುತ್ತಿದೆ.

ನಾಗರೀಕತೆಯ ಪ್ರಭಾವದಿಂದಾಗಿ ಸ್ವಲ್ಪ ಸುಧಾರಿಸಿಕೊಳ್ಳುತ್ತಿರುವ ಸಮುದಾಯ ತನ್ನ ಮೂಲ ವೃತ್ತಿಯನ್ನು ಬದುಕಿನ ಅವಿಭಾಜ್ಯ ಅಂಗವೆಂದು ತಿಳಿದು ಕಾಲಕಳೆಯುತ್ತವೆ. ಇಂದು ತಮ್ಮ ಮಕ್ಕಳ ಮುಂದಿನ ಭವಿಷ್ಯಕ್ಕಾಗಿ ಸರ್ಕಾರದಿಂದ ಸೌಲಭ್ಯಗಳನ್ನು ಪಡೆಯಲು ಮುಂದೆ ಬರಬೇಕಾಗಿದೆ. ವಿದ್ಯಾಭ್ಯಾಸಕ್ಕಾಗಿ ಮೀಸಲಾತಿಹಾಗೂ ವೃತ್ತಿಯಲ್ಲಿ ಪಾಲು ಪಡೆಯುವಲ್ಲಿ ಈ ಸಮುದಾಯಗಳು ಜಾಗೃತರಾಗಬೇಕು.

ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಸುಮಾರು ೫೦ ವರ್ಷಗಳ ಹಿಂದೆಯೇ ಭದ್ರಾವತಿಯ ವಾಸಿ ಡಿ.ಟಿ. ಸೀತಾರಾಮ್ ಎಂಬುವವರು ಎಂ.ಎಲ್.ಎ. ಆಗಿದ್ದರಂತೆ. ಪ್ರಭಾಕರ ತೇಲ್ಕರ್ ಎಂಬುವವರೂ ಎಂ.ಎಲ್.ಎ. ಆಗಿದ್ದರಂತೆ. ಯು.ಪಿ. ಶಂಕರರಾವ್ ಮುನಿಸಿಪಲ್ ಅಧ್ಯಕ್ಷರು ಹಾಗೂ ವಿಧಾನ ಪರಿಷತ್ತಿನ ಸದಸ್ಯರಾಗಿದ್ದರು. ಯು.ಎಸ್. ನಾರಾಯಣರಾವ್ ಎಂಬುವವರು ಮುನಿಸಿಪಲ್ ಉಪಾಧ್ಯಕ್ಷರಾಗಿದ್ದರಂತೆ.

ಕನ್ಗೋಕರ್ ತಿಪ್ಪೋಜಿರಾವ್, ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಪ್ರಥಮ ಐ.ಎ.ಎಸ್. ಆಗಿದ್ದರಂತೆ. ಇವರು ಸಂತೆಬೆನ್ನೂರಿನವರು. ೧೯೭೭ ರಲ್ಲಿ ಟಿ.ಜಿ. ಶ್ರೀಧರರಾವ್, ನಗರಸಭೆ, ಸದಸ್ಯರಾಗಿದ್ದರಂತೆ. ಈಗ ಇವರು ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದಾರೆ. ಡಾ. ಗೋಪಾಲಕೃಷ್ಣರಾವ್. ಡಿ.ಎನ್. ಇವರು ಸುಮಾರು ೬೦ ವರ್ಷಗಳ ಹಿಂದೆಯೇ ವೈದ್ಯರಾಗಿ ಸೇರಿ

ಅಮೇರಿಕಾದಲ್ಲಿ ಸೇವೆ ಸಲ್ಲಸಿ, ಶಿವಮೊಗ್ಗಕ್ಕೆ ಬಂದು ಸೇವೆಯನ್ನು ಸಲ್ಲಿಸಿದ್ದಾರಂತೆ. ಇನ್ನು ನಗರಸಭೆ ಕೌನ್ಸಿಲರ್‌ಗಳಾಗಿಯೂ ಈ ಸಮುದಾಯದವರು ಮುಂದುವರೆದಿದ್ದಾರೆ. ಅವರುಗಳೆಂದರೆ, ಆರ್.ಟಿ. ತುಳಜಪ್ಪ, ಆರ್.ಕೆ. ಉಮೇಶ್, ಓಂ ಪ್ರಕಾಶ್ ತೇಲ್ಕರ್. ಶ್ಯಾಂಸುಂದರ್ ನಾಜರೆ ನಗರಾಭಿವೃದ್ಧಿ ಪ್ರಾಧಿಕಾರದ ಸದಸ್ಯರು, ಹುಬ್ಬಳ್ಳಿಯಲ್ಲಿ ಡಿ.ಎಸ್.ಪಿ. ಯಾಗಿದ್ದ ಎಲ್.ಆರ್. ಕೂಳೇಕರ್, ಬಾಹುಸಾರ ಕ್ಷತ್ರಿಯ ಸಮುದಾಯದ ಇಂಡಿಯವರು. ಇಷ್ಟೇ ಅಲ್ಲದೇ ಸ್ವಾತಂತ್ರ್ಯ ಹೋರಾಟಗಾರರಾಗಿಯು ಬಾಹುಸಾರ ಕ್ಷತ್ರಿಯ ಸಮುದಾಯದವರ ಸೇವೆ ಅಜರಾಮರವಾದುದಾಗಿದೆ.

ವೆಂಕಟರಾವ್ ಲಕ್ಷ್ಮೀ ದೇವಿಯವರ ಮಗನಾಗಿದ್ದ ಟಿ.ವಿ. ಶ್ರೀನಿವಾಸ್ ತಾಂದಳೆ, ಭದ್ರಾವತಿ ಮೂಲದವರು. ಬಂದು ನೆಲೆಗೊಂಡಿರುವುದು ಶಿವಮೊಗ್ಗ ನಗರದ ತುಳಜಾ ಭವಾನಿ ರಸ್ತೆಯ ೬ ನೇ ತಿರುವಿನಲ್ಲಿ. ಸ್ವಭಾವತಃ ಸರಳ ಜೀವಿ. ನಿಷ್ಠಾವಂತರೂ ಹಾಗೂ ದೇಶ ಪ್ರೇಮವುಳ್ಳ ಯುವಕರಾಗಿದ್ದ, ಟಿ.ವಿ. ಶ್ರೀನಿವಾಸ್ ರವರು ಮೂಲತಃ ಒಬ್ಬ ದರ್ಜಿಯಾಗಿ ಜೀವನ ನಿರ್ವಹಿಸುತ್ತಿದ್ದರು. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಕೆಚ್ಚೆದೆಯಿಂದ ದೇಶಕ್ಕಾಗಿ ಹೋರಾಡಿ ಸುಮಾರು ೨ ತಿಂಗಳುಗಳ ಕಾಲ ಸೆರೆಮನೆ ವಾಸ ಅನುಭವಿಸಿ ಸ್ವಾತಂತ್ರ್ಯ ಸಿಕ್ಕ ಬಳಿಕ ಬಿಡುಗಡೆಗೊಂಡರು. ಶ್ರೀಯುತರು ಈಗಿಲ್ಲ. ಇವರು ದೈವಾಧೀನರಾಗಿರುತ್ತಾರೆ. ಆದರೆ ಇವರ ಕುಟುಂಬ ಮಾತ್ರ ಅದೇ ಸ್ಥಳದಲ್ಲಿ ನೆಲೆಗೊಂಡಿರುತ್ತಾರೆ. ಶ್ರೀಯುತರ ಪತ್ನಿ ಕಲ್ಯಾಣಮ್ಮ ಇವರಿಗೆ ಹೆಣ್ಣುಮಕ್ಕಳಿಬ್ಬರು ಚಂದ್ರಮ್ಮ ರಂಗಧೋಳ್, ವಿಮಲ ರಂಗಧೋಳ್, ಗಂಡುಮಕ್ಕಳು ವಿನಾಯಕರಾವ್ ತಾಂದಳೆ. ಟಿ.ಎಸ್.ಗಂಗಾಧರ್.

ಹೀಗೆ ಸ್ವಾತಂತ್ರ್ಯ ಹೋರಾಟಗಾರರಾಗಿಯೂ ದೇಶಕ್ಕೆ ಬಾಹುಸಾರ ಕ್ಷತ್ರಿಯ ಸಮುದಾಯದವರ ಸೇವೆ ಅಜರಾಮರವಾಗಿದೆ.

ಕೇವಲ ಬಾಹುಸಾರ ಕ್ಷತ್ರಿಯ ಜಯಂತಿ, ಸಭೆ, ಸಮಾರಂಭಗಳಷ್ಟೇ ಸಂಘಟನೆಯಲ್ಲಿ ಪ್ರಯೋಜನಕಾರಿಯಲ್ಲ ಎನ್ನುವ ತಿಳುವಳಿಕೆ ಇಂದು ಬರಬೇಕಾಗಿದೆ. ಆವೇಶಭರಿತವಾದ ಮಾತುಗಳಿಂದ ನ್ಯಾಯ ಸಿಗುವುದಿಲ್ಲ. ಸಮಾಜದ ಹಿರಿಯರು, ಮುಖಂಡರು ಈ ಕುರಿತು ಚಿಂತಿಸುವುದು ಅನಿವಾರ್ಯವಾಗಿದೆ.

ಇಡೀ ಪರಿಸರದ ಸಮುದಾಯವನ್ನು ಕುರಿತು ಅಧ್ಯಯನಕ್ಕೆ ತೊಡಗಿದ ನಮಗೆ ಕ್ಷೇತ್ರಕಾರ್ಯದಿಂದ ತಿಳಿದು ಬರುವುದೇನೆಂದರೆ ರಾಜಕೀಯದಲ್ಲಿ ಇವರ ಪಾತ್ರ ಕೇವಲ ಹಣವಂತ ಮೇಲ್ಜಾತಿಯವರು ಹೇಳುವ ಪಕ್ಷ ಅಥವಾ ವ್ಯಕ್ತಿಗೆ ಮತಚಲಾಯಿಸುವ ಮಟ್ಟಕ್ಕೆ ಸೀಮಿತಗೊಂಡಿರುವುದಿಲ್ಲ. ಆಲೋಚಿಸಿ ಮತ ಚಲಾಯಿಸುವ ಶಕ್ತಿ ಇವರಲ್ಲಿದೆ. ಇನ್ನು ಈ

ಸಮುದಾಯದಲ್ಲಿ ಹೆಚ್ಚಾಗಿ ಬಡತನ ತಲೆದೋರಿದ್ದು ಇವರ ಆರ್ಥಿಕ ಸ್ಥಿತಿಯು ಕೆಳಮಟ್ಟದಲ್ಲಿದೆ. ಇವರು ಸಮಾಜದಲ್ಲಿ ಮುಂದುವರೆಯಬೇಕಾದರೆ ಪ್ರಜ್ಞಾವಂತ ಮಾರ್ಗದರ್ಶಕರು, ರಾಜ್ಯ ಸರಕಾರದ ಅಧಿಕಾರದಲ್ಲಿರುವ ಇದೇ ಸಮುದಾಯದ ನಾಯಕರು ತಮ್ಮ ಕ್ಷೇತ್ರದ ಕಾರ್ಯವನ್ನಷ್ಟೇ ಅಲ್ಲದೆ ಅದರಾಚೆಯ ಸಮುದಾಯದವರ ಕುರಿತ ಚಿಂತನ-ಮಂಥನ ಮಾಡಿದಾಗ ಕೇಂದ್ರ ಸರಕಾರ ಮತ್ತು ಸ್ವಯಂ ಸೇವಾ ಸಂಘಗಳು ನಿಸ್ವಾರ್ಥವಾಗಿ ಕೆಲಸ ನಿರ್ವಹಿಸಿದಾಗ ಹಿಂದುಳಿದ ಸಮುದಾಯದೊಳಗೆ ಶಿಕ್ಷಣ ಪಡೆದವರು, ಹಿರಿಯರು, ಮುಖಂಡರು ತಿಳುವಳಿಕೆಯನ್ನು ನೀಡಬೇಕು. ಹಾಗಾದಾಗ ಅಭಿವೃದ್ಧಿ ಸಾಧ್ಯ

## ನಗರಸಭೆಯ ಚುನಾಯಿತ ಸದಸ್ಯರುಗಳು

## City Municipal Elected Members

| ಕ್ರ.ಸಂ. Sl. No | ತಾಲ್ಲೂಕುಗಳು Taluks | ಒಟ್ಟು Total | | | ಚುನಾಯಿತ ಸದಸ್ಯರು (Elected Members) | | | | | | | | | | | |
|---|---|---|---|---|---|---|---|---|---|---|---|---|---|---|---|---|
| | | | | | ಪರಿಶಿಷ್ಟ ಜಾತಿ Scheduled Caste | | | ಪರಿಶಿಷ್ಟ ಪಂಗಡ Scheduled Tribe | | | ಹಿಂದುಳಿದ ವರ್ಗ Backward Class | | | ಸಾಮಾನ್ಯ General | | |
| | | ಗಂಡು Male | ಹೆಣ್ಣು Female | ಒಟ್ಟು Total | ಗಂಡು Male | ಹೆಣ್ಣು Female | ಒಟ್ಟು Total | ಗಂಡು Male | ಹೆಣ್ಣು Female | ಒಟ್ಟು Total | ಗಂಡು Male | ಹೆಣ್ಣು Female | ಒಟ್ಟು Total | ಗಂಡು Male | ಹೆಣ್ಣು Female | ಒಟ್ಟು Total |
| 1 | 2 | | | | | | | | | | | | | | | |
| 1 | ಭದ್ರಾವತಿ Bhadravathi | 23 | 12 | 32 | 5 | 2 | 7 | 0 | 1 | 1 | 5 | 4 | 12 | 10 | 5 | 15 |
| 2 | ಹೊಸನಗರ Hosanagara | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| 3 | ಸಾಗರ Sagara | 19 | 12 | 31 | 1 | 1 | 2 | 0 | 1 | 1 | 6 | 4 | 10 | 12 | 6 | 18 |
| 4 | ಶಿಕಾರಿಪುರ Shikaripura | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| 5 | ಶಿವಮೊಗ್ಗ Shimoga | 23 | 12 | 35 | 3 | 1 | 4 | 0 | 1 | 1 | 8 | 4 | 12 | 12 | 6 | 18 |
| 6 | ಸೊರಬ Soraba | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| 7 | ತೀರ್ಥಹಳ್ಳಿ Thirthalli | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| | ಜಿಲ್ಲಾ ಮೊತ್ತ District Total | 65 | 36 | 101 | 9 | 4 | 13 | 0 | 3 | 3 | 22 | 12 | 34 | 34 | 17 | 51 |

ಮಾಹಿತಿ: ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಶಿವಮೊಗ್ಗ.

**೭.೩ ಆರ್ಥಿಕ ಸ್ಥಿತಿಗತಿ**

ಈ ಸಮುದಾಯದವರ ಮೂಲ ವೃತ್ತಿ ಬಟ್ಟೆ ಹೊಲಿಯುವುದು, ಬಟ್ಟೆಗೆ ಬಣ್ಣ ಹಾಕುವುದು ಹಾಗೂ ಜವುಳಿ ವ್ಯಾಪಾರ. ಇದೇ ವೃತ್ತಿಯನ್ನು ಈ ಸಮುದಾಯದವರು ಇಂದಿಗೂ ಮುಂದುವರಿಸಿಕೊಂಡು ಬಂದಿರುತ್ತಾರೆ. ಈ ಸಮುದಾಯದ ಜನರು ಕರ್ನಾಟಕದಲ್ಲಿ ಬಹು ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಇವರುಗಳು ಗಡಿಭಾಗಗಳಲ್ಲಿ ಸ್ಥಾಪಿಸಿರುವ ಸಾಹಸ ಸಿದ್ಧಿಗಳೆಲ್ಲವೂ ಪುರಾಣ-ಇತಿಹಾಸಕ್ಕೆ ಸಂಬಂಧಿಸಿದ್ದು, ಆಧುನಿಕ ಜೀವನಸದ ಸವಾಲುಗಳನ್ನು ಎದುರಿಸಿ ಬದುಕಿದ್ದು, ಆಧುನಿಕ ಜೀವನದ ಸವಾಲುಗಳನ್ನು ಎದುರಿಸಿ ಬದುಕಲು ಬೇಕಾಗಿರುವ ಆರ್ಥಿಕ ಸ್ಥಿತಿಗತಿಯಲ್ಲಿ ತುಂಬಾ ದುರ್ಬಲರೆಂದೇ ಹೇಳಬಹುದು.

ಇವರು ತಮ್ಮದೇ ಆದ ಜೀವನ ಮೌಲ್ಯಗಳ ನೆಲೆಯಲ್ಲಿ ಸ್ವಾವಲಂಬಿ ಬದುಕನ್ನು ಸಾಗಿಸಿದ ಇವರು ಶಿಕ್ಷಣ, ಬಂಡವಾಳ, ವ್ಯವಹಾರ ಜ್ಞಾನ ಮುಂತಾದವುಗಳಲ್ಲಿ ಹಿಂದುಳಿದುದರಿಂದ ನಾಡಿನಲ್ಲಿ ಪರಾವಲಂಬಿ ಬದುಕನ್ನು ಸಾಗಿಸಬೇಕಾಯಿತು.

ಆರ್ಥಿಕತೆಯ ಅಭಿವೃದ್ಧಿಗೆ ಪೂರಕವಾದ ಕೃಷಿ, ಶಿಕ್ಷಣ, ವಾಣಿಜ್ಯ, ವ್ಯಾಪಾರ, ಉದ್ಯೋಗ ಮುಂತಾದವುಗಳಲ್ಲಿ ಈ ಸಮುದಾಯವು ತುಂಬಾ ಹಿಂದುಳಿದಿದೆ. ಪರಿಣಾಮ ಆಹಾರ, ವಸತಿ, ಶಿಕ್ಷಣ, ಆರೋಗ್ಯ ಮುಂತಾದ ಮೂಲಭೂತ ಸೌಲಭ್ಯಗಳನ್ನು ಹೊಂದಿರದೇ ಕಡುಬಡತನವನ್ನು ಅನುಭವಿಸುತ್ತದೆ. ಇವರ ಜೀವನ ಕ್ರಮ ಮತ್ತು ಜೀವನಾಧಾರಕ್ಕೆ ಅವಲಂಬಿಸಿರುವ ವೃತ್ತಿಗಳನ್ನು ಸಾಮಾಜಿಕ, ರಾಜಕೀಯ, ಶೈಕ್ಷಣಿಕವಾಗಿ ಆದಂತಹ ಏಳು-ಬೀಳುಗಳನ್ನು ಅವಲೋಕಿಸಿದಾಗ ಆರ್ಥಿಕ ಸ್ಥಿತಿಗತಿಯನ್ನು ತಿಳಿಯಲು ಸಾಧ್ಯವಾಗುತ್ತದೆ.

ಯಾವುದೇ ಒಬ್ಬ ವ್ಯಕ್ತಿಯು ಅಥವಾ ಒಂದು ಸಮುದಾಯದ ಜೀವನ ಮೌಲ್ಯವನ್ನು ನಿರ್ಧರಿಸುವಲ್ಲಿ ಅವನು ನಿರ್ವಹಿಸುವ ವೃತ್ತಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಸಮುದಾಯವು ಅನುಸರಿಸುತ್ತಿರುವ ಆರ್ಥಿಕ ಚಟುವಟಿಕೆಗಳು ಮಾನವನ ಶ್ರಮ ಸಂಪತ್ತಿನ ಬಳಕೆ ಸಂಪನ್ಮೂಲಗಳ ಪಾತ್ರ, ಜನಸಂಖ್ಯೆ, ಶಿಕ್ಷಣದ ಪಾತ್ರ, ಪ್ರಭಾವ, ಕೌಟುಂಬಿಕ ಜೀವನದ ಆಚರಣೆಗಳು, ಉದ್ಯೋಗಗಳ ಹಂಚಿಕೆಯಿಂದ ಬದಲಾಗುತ್ತಿರುವ ಸಮಾಜದಲ್ಲಿ ನಿರ್ಮಿಸಿಕೊಂಡಿರುವ ರೀತಿ-ನೀತಿ ತಿಳಿಯುವುದು ಅವಶ್ಯಕವಾಗಿದೆ. ಹೀಗೆ ಸಮುದಾಯದ ಜೀವನ ವಿಧಾನದಲ್ಲಿ ಆರ್ಥಿಕತೆ ಎಂಬುದು ತುಂಬಾ ಮಹತ್ವದ ಪಾತ್ರ ವಹಿಸುತ್ತದೆ. ಈ ಎಲ್ಲಾ ಬದಲಾವಣೆಗಳಿಂದ ಸಾಂಸ್ಕೃತಿಕ ಅಂಶಗಳಾದ ಸಾಮಾಜಿಕ, ರಾಜಕೀಯ, ಧಾರ್ಮಿಕ ರೀತಿ-ನೀತಿಗಳಲ್ಲಿನ ಬದಲಾವಣೆಗಳು ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ನಿರ್ಧಾರವಾಗುತ್ತದೆ.

ಯಾವುದೇ ಒಂದು ಸಮುದಾಯದ ಸರ್ವಾಂಗಣೀಯ ಆಶಯಗಳು ರೂಪುಗೊಳ್ಳುವುದು ಆರ್ಥಿಕವಾಗಿ ಆ ಸಮುದಾಯ ಯಾವ ಸ್ಥಿತಿಯಲ್ಲಿದೆ ಎಂಬುದರಿಂದ, ಹಾಗೂ ಬದುಕಿನ ಎಲ್ಲಾ ವಿವರಗಳು ರೂಪುಗೊಳ್ಳುವುದು ಯಾವ ಬಗೆಯ ಉತ್ಪಾದನಾ ಚಟುವಟಿಕೆಯಲ್ಲಿ ಪಾಲ್ಗೊಂಡಿದೆ ಎಂಬುದರಿಂದ ಕಾರಣ ಆರ್ಥಿಕ ಚಟುವಟಿಕೆಗಳು ಸಮುದಾಯವೊಂದರ ಬದುಕಿನ ಗಡಿಯನ್ನು ಅವಲಂಬಿಸಿದೆ. ಬಂಡವಾಳದ ಕೊರತೆಯಿಂದಾಗಿ ವ್ಯಾಪಾರ ವಹಿವಾಟಿನಲ್ಲಿಯೂ ಇವರು ಅಷ್ಟಾಗಿ ಪಾಲ್ಗೊಳ್ಳುವುದಿಲ್ಲ.

ಇಲ್ಲಿಯ ಬಾಹುಸಾರ ಕ್ಷತ್ರಿಯ ಸಮುದಾಯದವರ ಬಹುತೇಕ ಜೀವನ ಕಷ್ಟದಾಯಕವಾಗಿದೆ ಎಂತಲೇ ಹೇಳಬಹುದು. ಆದಾಗ್ಯೂ ಹಲಕೆಲವರು ವಿದ್ಯಾವಂತರಾಗಿದ್ದು ಅಥವಾ ವಿದ್ಯೆ ಕಲಿಯದಿದ್ದರೂ ಆಧುನಿಕತೆಯ ಪ್ರಭಾವ ಮತ್ತು ನಾವು ಕೂಡ ಇತರರಂತೆ ಮುಂದೆ ಬರಬೇಕು ಎನ್ನುವ ಕಾರಣದಿಂದ ಇತ್ತೀಚಿನ ದಿನಗಳಲ್ಲಿ ಬದಲಾವಣೆಯನ್ನು ಹೊಂದುತ್ತಲಿದ್ದಾರೆ. ತಮ್ಮ ಆರ್ಥಿಕ ಜೀವನ ಸುಧಾರಿಸಿಕೊಳ್ಳಲು ಇಂದು ವ್ಯವಸಾಯ ವೃತ್ತಿಯನ್ನು ನಿರ್ವಹಿಸುತ್ತಿದ್ದಾರೆ. ಹಲಕೆಲವರು ಕೂಲಿಕೆಲಸವನ್ನು ಮಾಡಿಕೊಂಡು ಕೈಗಾರಿಕೆಯಲ್ಲಿಯೂ ಕೂಡ ಕೂಲಿಕಾರ್ಮಿಕರಾಗಿ, ಜವಳಿ ವ್ಯಾಪಾರಿಗಳಾಗಿ, ಟೈಲರ್‌ಗಳಾಗಿ ದುಡಿದು ಆರ್ಥಿಕ ಪ್ರಬಲತೆಯನ್ನು ಹೊಂದುತ್ತಿದ್ದಾರೆ. ಸರಕಾರದ ಹಲವಾರು ಯೋಜನೆಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಉದ್ಯೋಗ ಪಡೆಯಲು ತರಬೇತಿ ಪಡೆಯುವುದು, ಬ್ಯಾಂಕುಗಳ ಮೂಲಕ ಸಾಲ ಸೌಲಭ್ಯಗಳನ್ನು ಪಡೆಯುವುದು ಸರಕಾರಿ ಆಶ್ರಯ ಯೋಜನೆಯಂತಹ ಮನೆಗಳನ್ನು ಕಟ್ಟಿಸಿಕೊಳ್ಳುವುದು ಇನ್ನಿತರೆ ಸೌಲಭ್ಯವನ್ನು ಪಡೆದುಕೊಂಡಿದ್ದಾರೆ.

ಇವರಲ್ಲಿ ಬಹಳಷ್ಟು ಜನರು ಸರ್ಕಾರಿ ಸರ್ಕಾರಿಯೇತರ ಸಂಸ್ಥೆಗಳಲ್ಲಿ ಉದ್ಯೋಗವನ್ನು ಪಡೆದುಕೊಂಡು ಆರ್ಥಿಕತೆಯನ್ನು ಅಭಿವೃದ್ಧಿಪಡಿಸಿಕೊಂಡಿದ್ದಾರೆ. ಇವರಲ್ಲಿ ಕೂಲಿ ಕಾರ್ಮಿಕರ ಸಂಖ್ಯೆಯು ಹೆಚ್ಚಾಗಿದ್ದು, ಪ್ರತಿನಿತ್ಯ ಹೊಲಗದ್ದೆಗಳಲ್ಲಿ, ಸರಕಾರಿ ಕಾಮಗಾರಿಗಳಲ್ಲಿ ಶ್ರಮಿಸುತ್ತಿದ್ದಾರೆ. ಇವರನ್ನು ಅಧಿಕಾರಿಗಳು, ಬಂಡವಾಳಗಾರರು ನಯವಾಗಿ ಶೋಷಣೆ ಮಾಡುವುದು ಕಂಡುಬರುತ್ತದೆ.

ಉದ್ಯೋಗ ಖಾತ್ರಿ ಯೋಜನೆಯಡಿ ಕೆಲಸ ಕೊಟ್ಟು ಪ್ರತಿಫಲ ಕಡಿಮೆ ಕೊಡುತ್ತಾರೆ. ಅಲ್ಲದೆ ಇವರು ಜೀವವಿಮೆ, ವಸತಿ, ಪೌಷ್ಠಿಕ ಆಹಾರ, ಔಷದೋಪಚಾರ ಮುಂತಾದ ಮೂಲ ಸೌಲಭ್ಯಗಳಿಂದಲೂ ವಂಚಿತರಾಗಿಯೂ ಹಗಲು-ರಾತ್ರಿ ದುಡಿದು ಬೆಂಡಾಗುತ್ತಿದ್ದಾರೆ. ಇವರಿಗೆ ಭದ್ರತೆಯನ್ನು ನೀಡಲು ಸರಕಾರ ಸಂಘ ಸಂಸ್ಥೆಗಳು ಸಹಕರಿಸುತ್ತಿವೆ.

| ಬ್ಯಾಂಕುಗಳು | | | | | | |
|---|---|---|---|---|---|---|
| ಕ್ರ.ಸಂ.<br>Sl. No | ತಾಲ್ಲೂಕುಗಳು<br>Taluks | ರಾಷ್ಟ್ರೀಕೃತ ಬ್ಯಾಂಕುಗಳು / Nationalized Banks As on 31.03.2012 Rs. In Lakhs | | | | |
| | | ಶಾಖೆಗಳ ಸಂಖ್ಯೆ<br>No. of Branches | ಕೃಷಿ ಸಾಲ<br>Agriculture Loan | ಇತರೆ ಸಾಲ<br>Other Loan | ಒಟ್ಟು ಸಾಲ<br>Total Loan | ಠೇವಣಿ<br>Deposits |
| 1 | 2 | 965 | 966 | 967 | 968 | 969 |
| 1 | ಭದ್ರಾವತಿ<br>Bhadravathi | 29 | 21827 | 23490 | 45317 | 83210 |
| 2 | ಹೊಸನಗರ<br>Hosanagara | 11 | 5708 | 2228 | 7936 | 20630 |
| 3 | ಸಾಗರ<br>Sagara | 20 | 11430 | 14815 | 26245 | 52699 |
| 4 | ಶಿಕಾರಿಪುರ<br>Shikaripura | 14 | 9781 | 7767 | 17548 | 20179 |
| 5 | ಶಿವಮೊಗ್ಗ<br>Shimoga | 66 | 73296 | 111873 | 185169 | 294933 |
| 6 | ಸೊರಬ<br>Soraba | 11 | 8713 | 3202 | 11915 | 14131 |
| 7 | ತೀರ್ಥಹಳ್ಳಿ<br>Thirthalli | 20 | 13212 | 17545 | 30757 | 45813 |
| ಜಿಲ್ಲಾ ಮೊತ್ತ<br>District Total | | 171 | 143967 | 180920 | 324887 | 531595 |

ಮಾಹಿತಿ : ಪ್ರಬಂಧಕಕರು, ಜಿಲ್ಲಾ ಮಾರ್ಗದರ್ಶಿ ಬ್ಯಾಂಕ್, ಶಿವಮೊಗ್ಗ

# ಅಧ್ಯಾಯ ೮
## ಸಮಕಾಲೀನ ಸಂದರ್ಭ ಮತ್ತು ಬಾಹುಸಾರ ಕ್ಷತ್ರಿಯ ಸಮುದಾಯ

ಶಿಷ್ಟ ಸಂಸ್ಕೃತಿಯೊಂದು ದಟ್ಟವಾಗಿ ಬೆಳೆದ ಮೇಲೂ ಜನಪದ ಸಂಸ್ಕೃತಿಯು ಯಾವುದೇ ರೀತಿಯಲ್ಲಿ ಸೊರಗಿಲ್ಲ. ಬದಲಾಗಿ ಶಿಷ್ಟ ಸಂಸ್ಕೃತಿಯನ್ನು ಪೋಷಿಸುತ್ತಾ ತನ್ನ ಪ್ರಭಾವವನ್ನು ಉಳಿಸಿಕೊಂಡು ಬರುವಲ್ಲಿ ಯಾವ ಜನಪದವೂ ಹಿಂದೆ ಬಿದ್ದಿಲ್ಲ. ಜೊತೆಗೆ ತಮ್ಮ ರೀತಿ ನೀತಿಗಳಲ್ಲಿ, ಆಚರಣೆಗಳಲ್ಲಿ, ಸಂಪ್ರದಾಯಗಳಲ್ಲಿ ಇಂದಿಗೂ ಆಳವಾಗಿ ಬೇರುಬಿಟ್ಟ ಬದುಕಿನೊಡನೆ ಅರ್ಥಪೂರ್ಣವಾದ ಸಂಬಂಧವನ್ನು ಇಟ್ಟುಕೊಂಡೇ ಯಾವುದೇ ಸಮುದಾಯವು ಮುಂದೆ ಸಾಗುತ್ತಿದೆ. ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಕುರಿತು ಅಧ್ಯಯನಕ್ಕೆ ತೊಡಗಿದಾಗ ತಮ್ಮ ಮೂಲ ಸಂಸ್ಕೃತಿಯನ್ನು ಇಂದಿಗೂ ಒಂದಲ್ಲಾ ಒಂದು ರೀತಿಯಲ್ಲಿ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು.

ಈ ಸಮುದಾಯದಲ್ಲಿ ಮೌಖಿಕ ಪರಂಪರೆ ಬಳಕೆಯಲ್ಲಿ ಇದ್ದರೂ ಆಚರಣೆಯ ಒಂದು ಭಾಗವಾಗಿ ಹಬ್ಬ-ಹರಿದಿನಗಳಲ್ಲಿ, ಧಾರ್ಮಿಕ ಸಂಘಟನೆಗಳಲ್ಲಿ, ರಾಜಕೀಯ ಸಂಘಟನೆಗಳಲ್ಲಿ ಇತ್ಯಾದಿ ಸಂದರ್ಭದಲ್ಲಿ ಬಳಸಬಹುದಾದಂತಹ ಪರಿಕರಗಳು, ಉಡುಗೆ-ತೊಡುಗೆಗಳು, ಆಹಾರ ಪದ್ಧತಿ, ಆಚರಣೆ, ನಂಬಿಕೆಗಳ ಮೂಲಕ ಸಮಗ್ರ ಸಂಸ್ಕೃತಿಯನ್ನು ರಚಿಸಲು ಸಾಧ್ಯ.

ಭಾರತ ಅನೇಕ ಸಮುದಾಯ, ಮತ, ಭಾಷೆ ಮತ್ತು ಪಂಥಗಳಿಂದ ಕೂಡಿದ ಒಂದು ದೇಶ. ಈ ದೇಶದಲ್ಲಿ ಪ್ರಾದೇಶಿಕತೆ, ಭಾಷೆ, ಕಲೆ, ಧರ್ಮ, ಸಮಾಜ, ಜೀವನಕ್ರಮದಂತಹ ವಿಷಯಗಳಲ್ಲಿ ವಿಭಿನ್ನತೆ ಕಂಡು ಬರುವುದು ಸ್ವಾಭಾವಿಕ. ಈ ದೇಶದಲ್ಲಿ ಶೇಕಡಾ ೬೦% ಕ್ಕಿಂತ ಹೆಚ್ಚು ಜನ ಹಳ್ಳಿಯಲ್ಲಿಯೇ ವಾಸಿಸಿದರೆ ಕೆಲವರು ಬಯಲು, ಗುಡ್ಡಗಾಡು, ನದಿ, ಸರೋವರದಂತಹ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಹೀಗಾಗಿ ಇಂತಹ ವಿಭಿನ್ನತೆ ಇರುವ ದೇಶದಲ್ಲಿ ವಿವಿಧ ಸಮುದಾಯ, ಧರ್ಮ, ಸಂಸ್ಕೃತಿ, ನಾಗರೀಕತೆಗಳಿಗೆ ಸೇರಿರುವ ಜನರನ್ನು ಕಂಡರೂ ಸಹ ಈ ಸಮುದಾಯಗಳ ಒಟ್ಟಾರೆ ಸಾಮಾಜಿಕ ಮೌಲ್ಯವನ್ನು ಕಂಡಾಗ ವಿಭಿನ್ನತೆ ಸಹಜವಾಗಿ ಕಂಡುಬರುತ್ತದೆ. ಈ ಸಮುದಾಯಗಳು ಮಾಟ, ಮಂತ್ರ, ಧರ್ಮ, ದೇವರು ಮತ್ತು ಪ್ರಕೃತಿಯಲ್ಲಿಯ ಅಚಲವಾದ ನಂಬಿಕೆ ಮುಂತಾದ ಲಕ್ಷಣಗಳನ್ನು ಮೈಗೂಡಿಸಿಕೊಂಡು ವಾಸಿಸಿದ್ದನ್ನು ಸಹ ಕಂಡಿದ್ದೇವೆ. ಇಂತಹ ವಿಭಿನ್ನ ಸಮುದಾಯಗಳಲ್ಲಿ ಕರ್ನಾಟಕದ ಬಾಹುಸಾರ ಕ್ಷತ್ರಿಯ ಸಮುದಾಯವೂ ಒಂದು.

ಪ್ರಸ್ತುತ ಕರ್ನಾಟಕದಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯವು ಶಿವಮೊಗ್ಗ, ದಾವಣಗೆರೆ, ಹರಿಹರ, ರಾಣಿಬೆನ್ನೂರು, ಕೋಲಾರ, ಧಾರವಾಡ, ಗದಗ, ಬೆಳಗಾವಿ, ಹುಬ್ಬಳ್ಳಿ, ಗುಲ್ಬರ್ಗಾ, ಬೆಂಗಳೂರು, ಮೈಸೂರು, ಬಾಗಲಕೋಟೆ ಜಿಲ್ಲೆಗಳಲ್ಲಿಯೂ ಸಾಕಷ್ಟು ಪ್ರಮಾಣದಲ್ಲಿ ಹರಡಿಕೊಂಡಿದೆ. ಅದೇ ರೀತಿ ಶಿವಮೊಗ್ಗ ಜಿಲ್ಲೆಯ ಸ್ಥಳೀಯ ಪ್ರದೇಶಗಳಾದ ಭದ್ರಾವತಿ, ತೀರ್ಥಹಳ್ಳಿ, ಹೊಸನಗರ,

ಶಿಕಾರಿಪುರ, ಸೊರಬ, ಮುಂತಾದ ತಾಲ್ಲೂಕು ಮತ್ತು ಇನ್ನಳಿದ ಸ್ಥಳಗಳಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದವರು ಕಂಡು ಬರುತ್ತಾರೆ.

ಕರ್ನಾಟಕದಲ್ಲಿ ಇವರನ್ನು ರಂಗಾರೆ, ದರ್ಜಿ, ಸಿಂಪಿಗ, ಚಿಪ್ಪಿಗ, ಎಂದು ಮುಂತಾದ ಪರ್ಯಾಯ ಹೆಸರುಗಳಿಂದ ಕರೆಯುತ್ತಾರೆ. ಪ್ರಸ್ತುತ ಇವರನ್ನು ಬಾಹುಸಾರ ಕ್ಷತ್ರಿಯರು ಎಂದು ಗುರುತಿಸುತ್ತಾರೆ. ಇದಕ್ಕೆ ಕಾರಣ ೧೯೯೧ ರ ಜನಗಣತಿಯಂತೆ ಕರ್ನಾಟಕದಲ್ಲಿ ಇವರನ್ನು ಹಿಂದುಳಿದ ಸಮುದಾಯ (ಬಿ.ಸಿ.ಎಂ. ೨ಎ) ಎಂದು ಭಾರತ ಸಂವಿಧಾನದ ೩೪೨ ನೇ ಕಲಂ ನ ಪ್ರಕಾರ ಗುರುತಿಸಲಾಗಿದೆ. ಅಂದಿನಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಎಲ್ಲಾ ರೀತಿಯಿಂದ ಇವರನ್ನು ಅಭಿವೃದ್ಧಿ ಕಾರ್ಯಗಳನ್ನು ಹೊತ್ತು, ಸರ್ಕಾರಿ ವಿಭಾಗಗಳಲ್ಲಿ ಒಂದು ಭಾಗವನ್ನು ಈ ಸಮುದಾಯದ ಕ್ಷೇಮಾಭ್ಯುದಯಕ್ಕಾಗಿ ನಿಗದಿ ಮಾಡಿತ್ತು. ಆದುದರಿಂದ ಅಂದಿನಿಂದ ಇಂದಿನವರೆಗೆ ಸ್ವಲ್ಪ ಎಲ್ಲಾ ರಂಗದಲ್ಲಿ ಅಭಿವೃದ್ಧಿಯನ್ನು ಸಾಧಿಸುತ್ತಿದ್ದಾರೆ.

ಮಾತೃ ಭಾಷೆ ಮರಾಠಿಯಾದರೂ ಅವರು ಪ್ರಾದೇಶಿಕತೆಯ ಪ್ರಭಾವದಿಂದ ಕನ್ನಡ, ತಮಿಳು, ಹಿಂದಿ, ತೆಲುಗು, ಉರ್ದು ಮತ್ತು ಕೊಂಕಣಿ ಭಾಷೆಯನ್ನೂ ಸಹ ಮಾತನಾಡುತ್ತಾರೆ. ಅಷ್ಟೇ ಅಲ್ಲದೇ ಇವರ ಉಡುಗೆ, ತೊಡುಗೆಗಳೂ ಸಹ ಆಯಾ ಪ್ರಾದೇಶಿಕತೆ ಮತ್ತು ಹವಾಗುಣಕ್ಕನುಗುಣವಾಗಿ ವೈಷ್ಯತೆಯಿಂದ ಕೂಡಿವೆ. ಇವರು ಅನುಸರಿಸಿದ ಜೀವನ ವಿಧಾನ, ಆಡುತ್ತಿರುವ ಭಾಷೆ, ಜನಪದ ಸಂಸ್ಕೃತಿಗೆ ಕೊಟ್ಟ ಕೊಡುಗೆ ಆಗಿದೆ.

ಇವರ ಸಮಾಜದ ಒಂದೊಂದು ಹೆಜ್ಜೆಗಳು ಬಹುದೂರದಿಂದ ನಡೆದು ಬಂದವುಗಳಾಗಿವೆ. ಇವರು ಇಟ್ಟ ಪ್ರತಿಯೊಂದು ಹೆಜ್ಜೆಗಳಿಗೂ ನೀಡಿದ ಶಕ್ತಿಗಳ ಸ್ಫೂರ್ತಿ, ಪ್ರೇರಣೆ, ಪರಿಸರಗಳನ್ನೆಲ್ಲ ಹುಡುಕುತ್ತಾ ಹೋದಾಗ ಮೈನವಿರೇಳಿಸುವ ವೃತ್ತಾಂತ ಕಂಡುಬಂದಿತು. ಅದನ್ನೇ "ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯ" ಎಂಬ ಶೀರ್ಷಿಕೆಯಡಿಯಲ್ಲಿ ಶೋಧಿಸಿದಾಗ ಬಾಹುಸಾರ ಕ್ಷತ್ರಿಯ ಸಮುದಾಯವು ಅಂದಿನಿಂದ ಇಂದಿನವರೆಗೆ ಒಗ್ಗಟ್ಟಿನಿಂದ ಬದುಕುತ್ತಾ ಬಂದು ಸಂಸ್ಕೃತಿಯ ಮುಖ್ಯವಾಹಿನಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ತಾವೂ ಕೂಡ ಈ ಸಂಸ್ಕೃತಿಯ ಅವಿಭಾಜ್ಯ ಅಂಗವೆಂದು ತಿಳಿದು ತಮ್ಮ ಜೀವನಕ್ರಮವನ್ನು ಸುಧಾರಿಸಿಕೊಂಡು ಈ ಮುಂದುವರೆದ ಸಮಾಜಲದಲ್ಲಿ ಒಂದೊಂದೇ ಮೆಟ್ಟಿಲನ್ನು ಏರಿ ಪ್ರಗತಿಯನ್ನು ಕಂಡುಕೊಂಡಿದ್ದಾರೆ. ಹಿಂದಿನಿಂದ ಹೊರಬಿದ್ದ ಈ ಬಾಹುಸಾರ ಕ್ಷತ್ರಿಯ ಸಮುದಾಯಗಳು ಇಂದಿನ ನಾನಾ ಭಾಗಗಳಲ್ಲಿ ಹಾಗೂ ಶಿವಮೊಗ್ಗ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಬೀಡುಬಿಟ್ಟವು. ಅಂದಿನ ಆ ಚಿಂತಾಜನಕ ದಿನಗಳ ತರುವಾಯ ರೋಮಾಂಚನತೆಗೆ ತಿರುಗಿದ್ದು ಆಶ್ಚರ್ಯವೆನಿಸುತ್ತದೆ.

ಮಾನವನು ಮೂಲತಃ ಸಂಘಜೀವಿ. ಆತ ಸಮಾಜದಲ್ಲಿ ವಿವಿಧ ಬಯಕೆಗಳನ್ನು ಈಡೇರಿಸಿಕೊಳ್ಳಲು 'ಸಾಮಾಜಿಕ ಸಂಘಟನೆ' ಯನ್ನು ಕಟ್ಟಿ ಜೀವನ ಸಾಗಿಸುವುದು ಅವನಿಗೆ ಅನಿವಾರ್ಯವಾಯಿತು. ಆದುದರಿಂದ ಮನುಷ್ಯನಿಗೆ ಒಂದು ಸಮಾಜ ಜೀವಿ ಎಂದು ಕರೆಯುವುದು ಸೂಕ್ತವೆನಿಸುತ್ತದೆ. ಆತನ ಆಸೆ, ಆಕಾಂಕ್ಷೆ ಹಾಗೂ ಅವನ ಮೂಲಭೂತ ಬೇಡಿಕೆಗಳ ಈಡೇರಿಕೆಗೆ ಸಾಮಾಜಿಕ ಸಂಘಟನೆಯು ಅತ್ಯಂತ ಸಹಕಾರಿಯಾಗಿ ಕೆಲಸ ಮಾಡುತ್ತದೆ. ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಸಂಘಟನೆಯೂ ಇದಕ್ಕೆ ಹೊರತಾಗಿಲ್ಲ. ಯಾವುದೇ ಸಮಾಜ ಸುವ್ಯವಸ್ಥಿತವಾಗಿರಬೇಕಾದರೆ ಅದರ ಸಾಮಾಜಿಕ ಸಂಘಟನೆ ಬಹಳ ಬಲಯುತವಾಗಿರಬೇಕಾಗುತ್ತದೆ. ಈ ಸಾಮಾಜಿಕ ಸಂಘಟನೆಗೆ ಬೇಕಾದ 'ವಿವಾಹ ಪದ್ಧತಿ'. 'ಬಂಧುತ್ವ ಪದ್ಧತಿ', ಮತ್ತು 'ಕುಟುಂಬ' ತನ್ನದೇ ಆದ ಕೊಡುಗೆಗಳನ್ನು ನೀಡುತ್ತವೆ. ಹಾಗಾಗಿ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ವಿವಾಹ ಪದ್ಧತಿ, ಕುಟುಂಬದ ಪ್ರಕಾರಗಳು ಮತ್ತು ಬಂಧುತ್ವ ಪದ್ಧತಿ, ಆಚಾರ ವಿಚಾರಗಳನ್ನು ಆದಷ್ಟು ತುಲನಾತ್ಮಕವಾಗಿ ಅಭ್ಯಾಸಿಸಲು ಪ್ರಯತ್ನಿಸಲಾಗಿದೆ. ಆದುದರಿಂದ ಮಾನವ ಶಾಸ್ತ್ರಜ್ಞರು ವಿವಾಹವನ್ನು ಸಂಘ-ಸಂಸ್ಥೆಗಳಿಗ ಹೋಲಿಸುತ್ತಾರೆ. ಇಂತಹವುಗಳಲ್ಲಿ ಕುಟುಂಬ, ಬಂಧುತ್ವ ಹಾಗೂ ವಿವಾಹದಂತಹ ಸಂಘ-ಸಂಸ್ಥೆಗಳು ಪ್ರಮುಖವಾಗಿವೆ ಎಂದು ಹೇಳುತ್ತಾರೆ. ಆದ್ದರಿಂದ ಇದನ್ನು ಗಮನದಲ್ಲಿಟುಕೊಂಡು ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ವಿವಾಹ ಪದ್ಧತಿಯನ್ನು ತಿಳಿಯಲು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗಿದೆ. ಕನ್ಯಾನ್ವೇಷಣೆಯಿಂದ ಹಿಡಿದು ಐದುನೀರಿನವರೆಗೆ ಇವರು ವೈಶಿಷ್ಟ್ಯಮಯವಾಗಿ ಆಚರಿಸುವುದು ಕಂಡುಬರುತ್ತದೆ.

ಇವರು 'ಒಳವಿವಾಹ ಪದ್ಧತಿ' (Endgamy) 'ಹೊರವಿವಾಹ ಪದ್ಧತಿ' (Exogamy) ಎರಡನ್ನು ಅನುಸರಿಸುತ್ತಾರೆ. ಈ ಸಮಯದಲ್ಲಿ ಸೋದರತ್ತೆ, ಸೋದರಮಾವ ಅಥವಾ ಅಕ್ಕನ ಮಗಳನ್ನು ವಿವಾಹವಾಗುವುದು ಸಾಮಾನ್ಯ ಇವರಲ್ಲಿ ರೂಢಿಯಲ್ಲಿದೆ. ಒಳ ಬಾಂಧವ್ಯ (Endogamy) ಸಮಯದಲ್ಲಿ 'ಕುಲ, ಗೋತ್ರ, ಬೆಡಗು' ಅಷ್ಟು ಕಟ್ಟುನಿಟ್ಟಾಗಿ ಇಂತಹ ಸಮಯದಲ್ಲಿ ನೋಡುವುದಿಲ್ಲ. ಆದರೆ ಅದೇ ಹೊರಬಾಂಧವ್ಯ (Exogamy) ಸಮಯದಲ್ಲಿ ಕಟ್ಟುನಿಟ್ಟಾಗಿ 'ಕುಲ, ಗೋತ್ರ, ಬೆಡಗು' ಇತ್ಯಾದಿ ನೋಡುತ್ತಾರೆ. ಇದೇ ಸಮಯದಲ್ಲಿ ಹೆಣ್ಣನ್ನು ಕೊಡತೆಗೆದುಕೊಳ್ಳುವ ಸಮಯದಲ್ಲಿ ಕುಲ, ಗೋತ್ರ, ಬೆಡಗು ಒಂದೇ ಎಂದು ಕಂಡು ಬಂದರೆ ಅದು ಅಣ್ಣ-ತಮ್ಮರು ಎಂದು ಭಾವಿಸಿ ತಮ್ಮ ನೆಂಟಸ್ತಿಕೆಯನ್ನು ಮುರಿದುಕೊಳ್ಳುತ್ತಾರೆ. ಹೆಚ್ಚಾಗಿ ಇವರಲ್ಲಿ ತಾಯಿಯ ಅಣ್ಣ-ತಮ್ಮನ ಮಗಳು, ತಂದೆಯ ಅಕ್ಕ-ತಂಗಿಯರ ಮಗಳು, ಅಥವಾ ಅಕ್ಕ-ತಂಗಿಯರ ಮಗಳು, ಮತ್ತು ಅಣ್ಣ-ತಮ್ಮಂದಿರ ಹೆಂಡತಿಯ ಅಕ್ಕ-ತಂಗಿಯರ ನೆಂಟಸ್ತಿಕೆಯನ್ನು ಮಾಡುತ್ತಾರೆ. ತೀರಾ ಹತ್ತಿರದ ಸಂಬಂಧಿಕರನ್ನು ಮದುವೆ ಮಾಡಿಕೊಂಡು ಬಂದರೆ ಮುಂದೆ ಅವರನ್ನು ಚೆನ್ನಾಗಿ ನೋಡಬಹುದು ಎಂಬ ವಿಶ್ವಾಸ ಈ ಜನರಲ್ಲಿದೆ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ನಗೆಚಾಟಿಯ ಸಂಬಂಧಗಳನ್ನು ನಡೆಸುತ್ತಾರೆ. ಕೆಲವೊಂದು ವಿವಾಹ ಸಮಯದಲ್ಲಿ, ಬೀಗರು ಬೀಗರಲ್ಲಿ ಹೆಣ್ಣು-ಗಂಡು ಕೊಡುಕೊಳ್ಳುವ ಸಮಯದಲ್ಲಿ ಮತ್ತು ಇನ್ನಿತರ ಕಾರ್ಯದಲ್ಲಿ ತಮ್ಮ ಮಗಳಿಗೆ ನಗೆಚಾಟಿಯ ಸಂಬಂಧಗಳನ್ನು ಉಪಯೋಗಿಸುವುದು ಕಂಡು ಬರುತ್ತದೆ. ಅದರಲ್ಲಿ ಅಕ್ಕ-ತಂಗಿಯರ ಮಕ್ಕಳಿಗೆ ಮತ್ತು ಮಗಳಿಗೆ ಕೆಲವೊಮ್ಮೆ ತಾಯಿಯ ಅಣ್ಣ-ತಮ್ಮರುಗಳ ಸಂಗಡ ಮತ್ತು ಮಗಳುಗಳ-ಮಕ್ಕಳ ಸಂಗಡ, ತಂದೆಯ ಅಕ್ಕ-ತಂಗಿಯರ ಸಂಗಡ ಕೆಲವೊಂದು ಸಮಯದಲ್ಲಿ ತಂದೆಯ ತಂಗಿ-ಅಕ್ಕರ ಸಂಗಡ, ತಮ್ಮ-ಅಣ್ಣಗಳ ಹೆಂಡತಿ ಅಣ್ಣ-ತಮ್ಮ-ತಂಗಿಯರ ಸಂಗಡ ಈ ರೀತಿಯಾಗಿ ಒಗ್ಗಟ್ಟಿನಲ್ಲಿ ಸೋದರ ಅತ್ತೆ ಮತ್ತು ಮಾವ, ಸೋದರ ಅಳಿಯ ಮತ್ತು ಸೊಸೆ ಮುಂತಾದವರ ನಗೆಚಾಟಿ ಸಂಬಂಧಗಳು ಕಂಡುಬರುತ್ತವೆ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಬೆಡಗು ಗೋತ್ರಗಳು ಕಂಡುಬರುತ್ತವೆ. ಅವು ಒಂದುಬಣದಿಂದ ಇನ್ನೊಂದು ಬಣದಲ್ಲಿ ಕೊಡುವುದಾಗಲಿ, ಕರೆಯುವುದಾಗಲಿ, ಅಥವಾ ಮದುವೆಯ ಸಮಯದಲ್ಲಿ ವಿಧುರರಿಗೆ ಉಡಿಕೆ ವಿವಾಹ ಪದ್ಧತಿಯ ಮೂಲಕ ಅವಕಾಶವಿದೆ. ಹಾಗೆ ವಿಧುರಯರನ್ನು ವಿವಾಹವಾಗಲು ಮಹಿಳೆಯರು ಮುಂದೆ ಬರುವುದಿಲ್ಲ. ಗಂಡನನ್ನು ಕಳೆದುಕೊಂಡು ಜೀವನಪರ್ಯಂತ ವಿಧವೆಯಾಗಿ ಇರುವುದು ಇಂದಿಗೂ ಈ ಸಮಾಜದಲ್ಲಿ ಕಂಡುಬರುತ್ತದೆ. ವಿಧವಾ ವಿವಾಹ ಈ ಸಮುದಾಯದಲ್ಲಿ ಜಾರಿಗೆ ಬರಬೇಕು.

ಅಂತರ್ಜಾತಿಯ ವಿವಾಹ ಸಂದರ್ಭದಲ್ಲಿಯೂ ಕೂಡಾ ಸ್ತ್ರೀ-ಪುರುಷರಿಗೆ ಈ ಸಮಾಜದವರು ಬಹಿಷ್ಕಾರ ಹಾಕುತ್ತಾರೆ. ಅದರಲ್ಲಿ ಹೆಣ್ಣಿಗೆ ಹೆಚ್ಚಿನ ಆದ್ಯತೆಯನ್ನು ಕೊಡುವುದಿಲ್ಲ. "ಕುಲಬಿಟ್ಟು ಹೊರಗೆ ಹೋದ ಹೆಣ್ಣು ಹೊಗೆಯೇ ಉಳಿಯಬೇಕು". ಆದರೆ ಪುರಷನಿಗೆ ಅಂತರ್ಜಾತಿಯ ವಿವಾಹದ ಕಟ್ಟುನಿಟ್ಟಿನ ಕ್ರಮ ಇಲ್ಲ. ಆದರೆ ಇಂತಹ ವಿವಾಹಗಳು ಇಂದು ಕಡಿಮೆಯಾಗಿ, ಇತ್ತೀಚಿನ ದಿನಗಳಲ್ಲಿ ಅಂತರ್ಜಾತೀಯ ವಿವಾಹಗಳು ಹೆಚ್ಚಿನ ಪ್ರಮಾಣದಲ್ಲಿ ಆಗತೊಡಗಿವೆ. ಆದುದರಿಂದ 'ಉಡಿಕೆ ವಿವಾಹ' ವನ್ನು ಸರಳವಾಗಿ ಮಾಡುತ್ತಾರೆ. ಯಾವುದೇ ಪೂಜೆ, ಪುನಸ್ಕಾರ ಮುಂತಾದ ಕಾರ್ಯಗಳನ್ನು ಮಾಡದೆ ಸರಳವಾಗಿ ಪುರುಷನಿಂದ ಸ್ತ್ರೀ ಕೊರಳಿಗೆ ಮಂಗಳಸೂತ್ರ (ತಾಳಿ)ವನ್ನು ಕಟ್ಟಿಸುತ್ತಾರೆ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರು ಹಿಂದೂ ಸಮಾಜದ ಅವಿಭಾಜ್ಯ ಅಂಗವಾಗಿರುವುದರಿಂದ ಇವರ ವಿವಾಹ ಪದ್ಧತಿ ಮತ್ತು ಆಚರಣೆ ಹಿಂದೂ ಸಮಾಜದ ನೀತಿ-ರೀತಿಯಂತೆ ನಡೆಯುವುದನ್ನು ಕಾಣುತ್ತೇವೆ. ಮದುವೆಯ ಕೆಲಸ ಕಾರ್ಯಗಳನ್ನು ಅತ್ಯಂತ ಶ್ರದ್ಧೆಯಿಂದ ಮತ್ತು ಜವಾಬ್ದಾರಿಯಿಂದ ಮಾಡುತ್ತಾರೆ. ಮದುವೆಗೆ ಪರಸ್ಪರ ವಧು-ವರರನ್ನು ಹುಡುಕುವುದರಿಂದ ಹಿಡಿದು ವಿವಾಹದ ಸಂಪೂರ್ಣ ಕಾರ್ಯಗಳಾಗುವ ತನಕ ಅತ್ಯಂತ ಸಾಂಪ್ರದಾಯಿಕವಾಗಿ ಮಾಡುತ್ತಾರೆ. ವಧು-ವರರ ಸ್ಥಳಾವಳಿಯನ್ನು ನೋಡಿ ಪರಸ್ಪರರಿಗೆ ಒಪ್ಪಿಗೆ ಆದಾಗ ಮಾತುಕತೆಯನ್ನು ಮಾಡಿ ಕೊಡ-ಕೊಳ್ಳುವಿಕೆಯ ವಿಷಯವನ್ನು ಕೂಲಂಕೂಷವಾಗಿ ಚರ್ಚಿಸಿ

ಮಾತುಕತೆಗೆ ಅಂತಿಮ ರೂಪವನ್ನು ಕೊಟ್ಟು ನಿಶ್ಚಿತಾರ್ಥದ ಕೆಲಸಕ್ಕೆ ಕೈಹಾಕುತ್ತಾರೆ., ನಿಶ್ಚಿತಾರ್ಥದ ವಿವಾಹಕ್ಕೆ ಕೊಡುವ ಪ್ರಾಮುಖ್ಯತೆಯನ್ನು ಕೊಡುತ್ತಾರೆ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಸ್ಥಿತಿ–ಗತಿಗಳನ್ನು ಅರಿತಾಗ ಜಿಲ್ಲೆಯ ವ್ಯವಸ್ಥೆಯು ಸಂಕೀರ್ಣವಾಗಿ ಕಾಣುತ್ತದೆ. ಜಾತಿ, ಉಪಜಾತಿ, ಪಂಗಡ, ಒಳಪಂಗಡ, ಭಾಷೆ, ಧರ್ಮ, ಆಚರಣೆ, ನಂಬಿಕೆ, ಸಂಪ್ರದಾಯಗಳು ಈ ಸ್ಥಳದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಹಾಗೆಯೇ ವೈವಿಧ್ಯತೆಯಿಂದ ಕಾಣುತ್ತದೆ. ಇತ್ತೀಚಿನ ದಿನಗಳಲ್ಲಿ ಸ್ವಲ್ಪ ಸುಧಾರಣೆಯನ್ನು ಹೊಂದಿದ್ದಾರೆ

ಆರ್ಥಿಕ ದೃಷ್ಟಿಯಿಂದ ಹೇಳುವುದಾದರೆ ಸುಮಾರು ಶೇಕಡಾ ೪೫ ರಷ್ಟು ಕಾರ್ಮಿಕರಾಗಿ, ಶೇಕಡಾ ೨೪ ರಷ್ಟು ವ್ಯವಸಾಯಗಾರರಾಗಿ ಮತ್ತು ಮತ್ತಿತರ ವೃತ್ತಿಗಳಲ್ಲಿ ಒಟ್ಟು ಶೇಕಡಾ ೪೫.೩೦ ರಷ್ಟು ಎಲ್ಲ ವೃತ್ತಿಗಳಲ್ಲಿ ತೊಡಗಿರುವುದು ಕಂಡುಬರುತ್ತದೆ.

ಅಷ್ಟೇ ಅಲ್ಲದೇ ೧೯೮೫ ರ ಆಗಸ್ಟ್ ೧೪ ನೆಯ ತಾರೀಖಿನಿಂದ ಜಾರಿಗೆ ಬಂದ ಮೀಸಲು ನೀತಿ ರಾಜಕೀಯ ರಂಗದಲ್ಲಿ ಈ ಸಮುದಾಯಕ್ಕೆ ಕೆಲವೊಂದು ಸರ್ಕಾರಿ ಮೀಸಲಾತಿ ಸ್ಥಾನ ಮಾನಗಳನ್ನು ಕಾದಿರಿಸಿ, ಗ್ರಾಮಸಭೆ, ಮಂಡಲ ಪಂಚಾಯತಿ, ತಾಲ್ಲೂಕು ಪಂಚಾಯತಿ, ಜಿಲ್ಲಾ ಪರಿಷತ್ತು ಮತ್ತು ಶಾಸನ ಸಭೆಗಳಲ್ಲಿ ಅನವು ಮಾಡಿಕೊಟ್ಟಿತು. ಅಂದಿನಿಂದ ಈ ಸಮುದಾಯವು ರಾಜಕೀಯ ರಂಗದಲ್ಲಿ ಸ್ವಲ್ಪ ಸುಧಾರಣೆ ಕಂಡುಕೊಂಡಿತು ಎಂದು ಹೇಳಬಹುದು.

ಒಂದೆ ಸಾಮಾನ್ಯವಾಗಿ ಬಡತನದಲ್ಲಿದ್ದ ಸಮಾಜದಲ್ಲಿ ಕೆಲವರು ಮಾತ್ರ ಸ್ಥಿತಿವಂತರಾಗಿದ್ದರು. ೧೬.೦೬.೧೯೧೭ ರಲ್ಲಿ ಸ್ಥಾಪನೆಯಾದ 'ಬಾಹುಸಾರ ಕ್ಷತ್ರಿಯ ಸಹಕಾರ ಸಂಘ' ದಿಂದ ಸಮಾಜಬಾಂಧವರು ಆರ್ಥಿಕ ಸಾಲಸೌಲಭ್ಯವನ್ನು ಪಡೆಯುತ್ತಿದ್ದು. ಇತ್ತೀಚೆಗೆ ಸುಮಾರು ೫೦ ವರ್ಷಗಳಿಂದೀಚೆಗೆ ಸಹಕಾರ ಸಂಘವು ಪ್ರಗತಿ ಹೊಂದಿರುವಂತೆ ಸಾಲ ಸೌಲಭ್ಯಗಳು, ಉಳಿತಾಯಕ್ಕಾಗಿ ಠೇವಣಾತಿಗಳನ್ನಿಡುವ ಹವ್ಯಾಸದಲ್ಲಿರುವರು. ಅಲ್ಲದೆ ಇತರೆ ವಾಣಿಜ್ಯ ಬ್ಯಾಂಕುಗಳಿಂದಲೂ ಸಹ ತಮ್ಮ ತಮ್ಮ ಶಕ್ತ್ಯಾನುಸಾರ ಆರ್ಥಿಕ ವ್ಯವಹಾರವನ್ನು ನಡೆಸುತ್ತಿರುವರು.

ಒಂದಿನ ಪರಿಸ್ಥಿತಿಗಳನ್ನು ಗಮನಿಸಿದಾಗ ಇತ್ತೀಚಿನ ದಿನಗಳಲ್ಲಿ ಸಮುದಾಯದವರು ಆರ್ಥಿಕ, ಶೈಕ್ಷಣಿಕ, ಔದ್ಯೋಗಿಕ ಕ್ಷೇತ್ರಗಳಲ್ಲಿ ಸಾಕಷ್ಟು ಅಭಿವೃದ್ಧಿಯನ್ನು ಹೊಂದುತ್ತಿರುವರು.

**ಬಾಹುಸಾರ ಕ್ಷತ್ರಿಯ ಸಮುದಾಯದ ಸಂಘಟನೆಗಳು**

ಸಮುದಾಯದ ಸಮಾಜಿಕ ಸಂಘಟನೆಯಿಂದಾಗಿ ಸಮಾಜವು ಇಂದು ಪ್ರಗತಿಯ ಪಥದತ್ತ ಸಾಗುತ್ತಿರುವುದರಿಂದ, ವಿದ್ಯಾವಂತ ಯುವಕರು, ಕೆಲವು ಆಸಕ್ತಿಯುಳ್ಳ ಯುವಕರು, ಸಮಾಜವು ಮುಂದುವರೆದು ಪ್ರಗತಿ ಸಾಧಿಸಲು ಶಿಕ್ಷಣವಂತರಾಗಿ ಮುಂದೆ ಬರುವಲ್ಲಿ ಪ್ರಯತ್ನಿಸುತ್ತಿದ್ದಾರೆ.

೧. ಬಾಹುಸಾರ ಕ್ಷತ್ರಿಯ ಕೋ ಆಪರೇಟಿವ್ ಸೊಸೈಟಿ

೨. ಬಾಹುಸಾರ ಸಮಾಜ ಸೇವಾ ಸಂಘ (ರಿ), ಶಿವಮೊಗ್ಗ

೩. ಬಾಹುಸಾರ ಕ್ಷತ್ರಿಯ ಯುವಕರ ಸಂಘ.

೪. ಬಾಹುಸಾರ ಕ್ಷತ್ರಿಯ ವಿಷನ್

೫. ಬಾಹುಸಾರ ಕ್ಷತ್ರಿಯ ಹಿಂಗುಲಾಂಬಿಕಾ ಭಜನಾ ಮಂಡಳಿ

೬. ಬಾಹುಸಾರ ಕ್ಷತ್ರಿಯ ಮಹಿಳಾ ಮಂಡಳಿ.

೭. ಬಾಹುಸಾರ ಕ್ಷತ್ರಿಯ ವ್ಯಾಯಾಮ ಶಾಲೆ

೮. ಬಾಹುಸಾರ ಕ್ಷತ್ರಿಯ ಕ್ರಿಕೇಟರ್ಸ್ ಅಸೋಸಿಯೇಷನ್.

ಸಾಮಾಜಿಕ ಸಂಘಟನೆಯಲ್ಲಿ ಪ್ರಮುಖವಾದ ಇನ್ನೊಂದು ಅಂಶ ಎಂದರೆ 'ಕುಟುಂಬ' ಇದು ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಒಳಗೊಂಡು ಎಲ್ಲ ಸಮಾಜಗಳಲ್ಲಿ ಕಂಡುಬರುತ್ತದೆ. ಪ್ರಸ್ತುತ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ 'ಪಿತೃ ಪ್ರಧಾನ' ಕುಟುಂಬವು ಹೆಚ್ಚಾಗಿ ಕಂಡುಬರುತ್ತದೆ. ಮಾತೃ ಪ್ರಧಾನ ಕುಟುಂಬವು ಇವರಲ್ಲಿ ಇರುವುದಿಲ್ಲ. ಆದ ಕಾರಣ ತಂದೆಯೇ ಮುಖ್ಯಸ್ಥನಾಗಿರುವುದು ಕಂಡುಬರುತ್ತದೆ. ತಂದೆಯೇ ಎಲ್ಲಾ ಕಾರ್ಯವನ್ನು ಮಾಡುತ್ತಾನೆ. ಪ್ರಸ್ತುತ ಈ ಸಮಾಜದಲ್ಲಿ ವಿಭಕ್ತ ಕುಟುಂಬವು ಹೆಚ್ಚಾಗಿ ಹಾಗೂ ಅವಿಭಕ್ತ ಕುಟುಂಬವು ತುಂಬಾ ಕಡಿಮೆ ಪ್ರಮಾಣದಲ್ಲಿದೆ. ಆದುದರಿಂದ ಸಾಮಾಜಿಕ ಸಂಘಟನೆಯಲ್ಲಿ ಇವರ ಕುಟುಂಬದ ಪಾತ್ರ ಹಿರಿದು (ದೊಡ್ಡದು) ಎಂದು ಹೇಳಬಹುದು. ಅದೇ ರೀತಿ ಸಾಮಾಜಿಕ ಸಂಘಟನೆಯಲ್ಲಿ ಮಹತ್ವವಾದ ಇನ್ನೊಂದು ಅಂಶ 'ಬಂಧುತ್ವ'. ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವು ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ತಮ್ಮ ವಿವಾಹ ಸಮಯದಲ್ಲಿ ಹಾಗೂ ಇನ್ನುಳಿದ ಕಾರ್ಯಗಳಲ್ಲಿ ತಮ್ಮ ಬಂಧುತ್ವ ಸಂಬಂಧವನ್ನು ಬೆಳೆಸುತ್ತಾರೆ. ವಿವಾಹ ಸಂದರ್ಭದಲ್ಲಿ 'ಕುಲ, ಗೊತ್ರ, ಬೆಡಗು' ಮುಂತಾದ ಕ್ರಿಯೆಯನ್ನು ಅನುಸರಿಸುತ್ತಾರೆ.

ಧಾರ್ಮಿಕ ಸಂಘಟನೆ ಎಂಬ ಕಲ್ಪನೆಯೇ ವಿಶಾಲವಾದ ಅರ್ಥದಲ್ಲಿ ಧಾರ್ಮಿಕದ ಸಂಘಟನೆಯನ್ನು ಸೂಚಿಸುವುದು. ಮಾನವ ಸಮಾಜವು ಸಹ ಧಾರ್ಮಿಕವಾಗಿ ಸಂಘಟನಾತ್ಮಕವಾದುದು. ಸಂಘಟನೆ ಎಂಬ ಪದವು ನಿಶ್ಚಿತ ಕ್ರಿಯೆ ಅಥವಾ ಕಾರ್ಯಗಳನ್ನು ಸಾಧಿಸಲು ಒಂದುಗೂಡಿರುವ ವಿವಿಧ ಭಾಗಗಳ ನಡುವಿನ ಸಂಯೋಜನೆಯನ್ನು ಸೂಚಿಸುವುದು. ಇಂತಹ ಧಾರ್ಮಿಕ ಸ್ವರೂಪದ ಸಂಘಟನೆಗಳ ಮೇಲೆಯೇ ಇಂದಿನ ನಾಗರೀಕತೆಯು ನೆಲೆಯೂರಿರುವುದು. 'ಹರ್ಬರ್ಟ್ ಸ್ಪೆನ್ಸರ್' ಎಂಬಾತನು ಧಾರ್ಮಿಕ ಸಂಘಟನೆಯು ಮಾನವನ ಪರಸ್ಪರ ಸಂಬಂಧವನ್ನು ಸೂಚಿಸುತ್ತದೆ ಎಂದು ಹೇಳುತ್ತಾರೆ. (ಶಂಕರರಾವ್: ೧೯೮೭:೨೮-೨೯)

ಎಲ್ಲ ಸಮಾಜದಲ್ಲಿ ಕಾಣಸಿಗುವಂತೆ ಈ ಸಮಾಜದಲ್ಲೂಸಹ ವೈಶಿಷ್ಟಮಯವಾಗಿ ಕಾಣುತ್ತವೆ. ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವು ಜಾತಿಯಿಂದ ಕ್ಷತ್ರಿಯರಾಗಿ ಹುಟ್ಟಿದರೂ ಸಹ ಧರ್ಮದಿಂದ ಹಿಂದೂಗಳಾಗಿ ಬೆಳೆದರು. ಆದ್ದರಿಂದ ತಮ್ಮ ಯಾವುದೇ ಧಾರ್ಮಿಕ ಸಂಘಟನೆ ಕಾರ್ಯವನ್ನು ನೆರವೇರಿಸಬೇಕಾದರೆ ಎಲ್ಲ ಕುಟುಂಬಗಳು ಸೇರಿ ಧಾರ್ಮಿಕ ಸಂಘಟನೆಯ ಕಾರ್ಯವನ್ನು ನೆರವೇರಿಸುತ್ತಾರೆ. ಹಬ್ಬ ಹರಿದಿನಗಳು, ಜಾತ್ರೆ ಉತ್ಸವಗಳು ಮುಂತಾದ ಕಾರ್ಯಗಳನ್ನು ಎಲ್ಲರೂ ಸೇರಿ ಆಚರಿಸುತ್ತಾರೆ. ಅದೂ ಅಲ್ಲದೆ ಆಯಾ ಪ್ರದೇಶದಲ್ಲಿ ವಾಸವಾಗಿರುವ ಜನರು ವಿವಿಧ ಜಾತಿಗಳಿಗೆ, ವೃತ್ತಿಗಳಿಗೆ ಮತ್ತು ನಿವಾಸದಲ್ಲಿನ ವಿವಿದ ಓಣಿ ಅಥವಾ ಕೇರಿಗಳಿಗೆ ಸೇರಿದ್ದರೂ ಕೂಡಾ ಈ ಸಮಾಜದವರು ತಾವೆಲ್ಲಾ ಒಂದೇ ಎನ್ನುವ ಭಾವನೆಯನ್ನು ತೆಳೆದಿದ್ದಾರೆ. ಆದ್ದರಿಂದ ಇವರಲ್ಲಿ ಧಾರ್ಮಿಕ ಸಂಘಟನೆಯು ವೈಶಿಷ್ಟ್ಯಮಯವಾಗಿ ಎದ್ದು ಕಾಣುತ್ತದೆ. ಅಷ್ಟೇ ಧಾರ್ಮಿಕ ಆಚರಣೆಯಲ್ಲಿ ಇವರು ದೇವರುಗಳನ್ನು ಭಯ, ಭಕ್ತಿಯಿಂದ ಪೂಜಿಸುತ್ತಾರೆ. ಪಿತೃ ಪೂಜೆ, ಕುಲದೇವತಾರಾಧನೆ, ನಿಸರ್ಗ ಪೂಜೆ, ಧರ್ಮ, ಧಾರ್ಮಿಕತೆ, ಆಚಾರ-ವಿಚಾರ ಇತ್ಯಾದಿಗಳು ಇವರಲ್ಲಿ ಹೇರಳವಾಗಿ ಕಂಡುಬರುತ್ತವೆ. ಒಟ್ಟಿನಲ್ಲಿ ಹುಟ್ಟಿನಿಂದ ಮರಣದವರೆಗೆ ವಿವಿಧ ಬಗೆಯ ಧರ್ಮಾಚರಣೆಯನ್ನು ತೊಡಗಿರುತ್ತಾರೆ. ಆದ್ದರಿಂದ ಬಾಹುಸಾರ ಕ್ಷತ್ರಿಯ ಸಮುದಾಯದವರು ದೇವರು ಮತ್ತು ದೇವತೆಗಳನ್ನು ಹೆಚ್ಚಾಗಿ ನಂಬುತ್ತಾರೆ. ಇವರಲ್ಲಿ ಬೇರೆ ಬೇರೆ ದೇವರುಗಳನ್ನು ನಂಬುವುದು ಕಂಡುಬರುತ್ತದೆ. ಆದುದರಿಂದ ಬಾಹುಸಾರ ಕ್ಷತ್ರಿಯ ಸಮುದಾಯವು ಶಕ್ತಿ ದೇವತೆ, ಶಿವ, ವಿಷ್ಣು, ಆಂಜನೇಯ, ರಾಮ, ಸೀತೆ, ಕೃಷ್ಣ, ದುರ್ಗಾ, ಮಾರಿಕಾಂಬೆ, ಸರಸ್ವತಿ, ಚಾಮುಂಡಿ, ಬಿಳಿಗಿರಿ ರಂಗನಾಥ, ವೆಂಕಟೇಶ್ವರ, ಮುಂತಾದ ದೇವರುಗಳನ್ನು ನಂಬುತ್ತಾರೆ.

ಧಾರ್ಮಿಕ ಸಂಘಟನೆಯಲ್ಲಿರುವ ಪ್ರಮುಖವಾದ ಅಂಶ 'ಸಂಸ್ಕಾರ' ಪದ್ಧತಿ. ಇದು ಎಲ್ಲ ವ್ಯವಸ್ಥಿತ ಸಮಾಜದಲ್ಲಿ ಕಾಣಸಿಗುವ ಒಂದು ನಿರಂತರ ವಿಧಿ ವಿಧಾನ. ಇದನ್ನು ಅನೇಕ ವಿಧದಲ್ಲಿ ಬಳಸುತ್ತಾರೆ. ಹುಟ್ಟಿನಿಂದ ಹಿಡಿದು ಮಸಣದವರೆಗೆ 'ಸಂಸ್ಕಾರ' ವನ್ನು ಎಲ್ಲ ಸಮಾಜದಲ್ಲಿ ಆಚರಿಸುವುದು ಕಂಡು ಬರುತ್ತದೆ. ಸಂಸ್ಕಾರವು ವ್ಯಕ್ತಿಗಳನ್ನು ಪವಿತ್ರಗೊಳಿಸುವ ಕ್ರಿಯಾ ವಿಧಿಯೆಂದು ನಂಬುತ್ತಾರೆ. ಆದುದರಿಂದ ಈ ಸಂಸ್ಕಾರವು ಎಲ್ಲ ಸಮಾಜಗಳಲ್ಲಿ ಕಂಡುಬಂದಂತೆ ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ಇಂದಿಗೂ ಇವರು ಜನನದಿಂದ ಹಿಡಿದು ಮರಣದವರೆಗೆ ವಿಧಿ-ವಿಧಾನದ 'ಸಂಸ್ಕಾರ' ಕಾರ್ಯವನ್ನು ಅಚರಿಸುತ್ತಾರೆ. ಅದೇ ರೀತಿಯಾಗಿ ಈ ಸಮಾಜದವರು ಧಾರ್ಮಿಕವಾಗಿ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಆಯಾ ಕಾಲಮಾನಕ್ಕೆ ತಕ್ಕ ಹಾಗೆ ತಿಥಿ, ನಕ್ಷತ್ರ, ಮಾಸಗಳಲ್ಲಿ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ.

ಬಾಹುಸಾರ ಕ್ಷತ್ರಿಯ ಸಮುದಾಯವು ತಮ್ಮ ವೈಯಕ್ತಿಕ ದಿನನಿತ್ಯ ಹಬ್ಬ-ಹರಿದಿನಗಳನ್ನು ಆಚರಿಸುವುದು ಕಂಡುಬರುತ್ತದೆ. (ಉದಾ: ಸೋಮವಾರದಿಂದ ಹಿಡಿದು ಸೋಮವಾರದವರೆಗೆ ತಮ್ಮ

ಮನೆಯ ದೇವರುಗಳು ಮತ್ತು ಇಸ್ಲಾಮಿಕ ದೇವರುಗಳನ್ನು ಪೂಜಿಸುವುದು. ಹೆಚ್ಚಾಗಿ ಈ ಸಮುದಾಯ ಆಂಜನೇಯ, ಎಲ್ಲಮ್ಮ, ತಿರುಪತಿ ತಿಮ್ಮಪ್ಪ, ಮೈಲಾರಲಿಂಗ, ಕಾಳಿಮುನೇಶ್ವರ ಮುಂತಾದ ದೇವರುಗಳಿಗೆ ಪ್ರಾಮುಖ್ಯತೆಯನ್ನು ಕೊಡುತ್ತಾರೆ.) ಇಸ್ಲಾಮಿಕ ಹಬ್ಬವನ್ನು ಎಲ್ಲರೂ ಆಚರಿಸುವ ಹಾಗೆ ಇವರು ಕೂಡಾ ಆಚರಿಸುತ್ತಾರೆ. ಆದುದರಿಂದ ಈ ಸಮಾಜದವರು ಎಲ್ಲರೂ ಕೂಡಿ ಹಬ್ಬವನ್ನು ಆಚರಿಸುತ್ತಾರೆ. ಇಲ್ಲದಿದ್ದರೆ ತಮ್ಮ ತಮ್ಮ ವೈಯಕ್ತಿಕವಾದ ಹಬ್ಬವನ್ನು ಆಚರಿಸುತ್ತಾರೆ. ಬೇರೆ ಬೇರೆ ಧರ್ಮದ ಹಬ್ಬಗಳನ್ನು ಆಚರಿಸುವುದು ಇವರಲ್ಲಿ ಕಂಡು ಬರುತ್ತದೆ.

ಅನೇಕ ದೇವ ದೇವತೆಗಳನ್ನು ಪೂಜಿಸುತ್ತಾರೆ. ಕೋಟೆ ಮಾರಿಕಾಂಬ, ಕೋಟೆ ಆಂಜನೇಯ, ಗುಡ್ಡೇಕಲ್ ಸುಬ್ರಹ್ಮಣ್ಯ ಸ್ವಾಮಿ ಮುಂತಾದ ದೇವರಲ್ಲಿ ಅಪಾರ ಭಕ್ತಿ. ಕೆಲವರು ತಮ್ಮ ತಮ್ಮ ಮನೆದೇವರುಗಳಿಗೆ ಯಾತ್ರೆಗೆ ಹೋಗುತ್ತಾರೆ. ಮೈಲಾರಲಿಂಗ, ತಿರುಪತಿ ತಿಮ್ಮಪ್ಪ, ಶಕ್ತಿದೇವತೆಗಳ ಉಪಾಸನೆಯನ್ನು ಇವರು ಮಾಡುತ್ತಾರೆ. ಕೆಲವರು ದೇವ, ದೇವತೆಗಳಿಗೆ ಕುರಿ, ಕೋಳಿಗಳನ್ನು ಬಲಿಕೊಟ್ಟು ಅವುಗಳನ್ನು ಶಾಂತಪಡಿಸುತ್ತಾರೆ. ಕೆಲವು ಗುಡಿಗಳಿಗೆ ವಿಶಿಷ್ಟ ಪೂಜೆಯನ್ನು ಸಲ್ಲಿಸುತ್ತಾರೆ. ಕೆಲವರು ಮಾಟ, ಮಂತ್ರ, ಮುಂತಾದ ಮೂಢನಂಬಿಕೆಗಳನ್ನು ನಂಬುತ್ತಾರೆ. ಈ ರೀತಿಯಾಗಿ ಇತ್ತೀಚಿನ ಸಮಕಾಲೀನ ಸಂದರ್ಭದಲ್ಲೂ ಧರ್ಮಾಚರಣೆಯನ್ನು ಆಚರಿಸುವುದು ಕಂಡು ಬರುತ್ತದೆ. ಧಾರ್ಮಿಕತೆಗೂ ಅಷ್ಟೇ ಮಹತ್ವವನ್ನು ಕೊಡುತ್ತಾರೆ. ಬಾಹುಸಾರ ಕ್ಷತ್ರಿಯ ಸಮುದಾಯದವರು ಯಾವುದೇ ಧಾರ್ಮಿಕವಾದ ಆಚರಣೆಯನ್ನು ಎಲ್ಲರೂ ಕೂಡಿ ಆಚರಿಸುತ್ತಾರೆ. ಎಲ್ಲರೂ ಒಂದೇ ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತಾರೆ.

ಸಮಕಾಲೀನ ಸಂದರ್ಭದಲ್ಲೂ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವು ಯಾವುದೇ ಹಬ್ಬ ಹರಿದಿನ, ಜಾತ್ರೆ, ಉತ್ಸವ ಮತ್ತು ಗ್ರಾಮ ಮಟ್ಟದಲ್ಲಿ ನಡೆಯುವಂತಹ ಎಲ್ಲಾ ಧಾರ್ಮಿಕ ಆಚರಣೆಯನ್ನು ನಡೆಸುವ ಪೂರ್ವದಲ್ಲಿ ಈ ಸಮುದಾಯದ ಹಿರಿಯರೆಲ್ಲಾ ಒಂದೆಡೆ ಸೇರಿ ಇದನ್ನು ಹೇಗೆ ಆಚರಿಸಬೇಕೆಂದು ಚರ್ಚಿಸಿ ಪರಾಮರ್ಶಿಸಿ ತೀರ್ಮಾನ ಕೈಗೊಂಡು ಎಲ್ಲರೂ ಪರಸ್ಪರ ಕೆಲಸ ಕಾರ್ಯಗಳನ್ನು ಹಂಚಿಕೊಂಡು ಮಾಡುವ ರೂಢಿ ಇವರಲ್ಲಿದೆ. ಈ ರೀತಿಯ ಆಚರಣೆಯ ಸಂದರ್ಭದಲ್ಲಿ ತಮ್ಮ ಸಮುದಾಯದಲ್ಲಿ ಕಂಡು ಬರುವ ತಾರತಮ್ಯವಾಗಲೀ ಅಥವಾ ಮೇಲು ಕೀಳು ಎಂಬ ಭಾವನೆಯಾಗಲೀ ಈ ರೀತಿಯ ಆಚರಣೆಗೆ ಅಡ್ಡಿ ಪಡಿಸುವುದಿಲ್ಲವಾದ್ದರಿಂದ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯರು ಇವುಗಳನ್ನು ಗಣನೆಗೆ ತೆಗೆದುಕೊಳ್ಳದೆ ತಮ್ಮ ಸಮಾಜದ ಒಳಿತಿಗಾಗಿ ಎಲ್ಲಾ ಹಿರಿಯರ ಮಾರ್ಗದರ್ಶನವಂತೆ ನಡೆದು ತಮ್ಮ ಶ್ರದ್ಧೆ ಭಕ್ತಿಯಿಂದ ಧಾರ್ಮಿಕ ಆಚರಣೆಗಳನ್ನು ನಡೆಸುತ್ತಾರೆ. ಅಷ್ಟೇ ಅಲ್ಲದೆ ಇಂತಹ ಸಂದರ್ಭಗಳಲ್ಲಿ ನಾವೆಲ್ಲರೂ ಒಂದೇ ಎಂಬ ಭಾವನೆ ಬರುವಂತೆ ನಡೆದುಕೊಂಡು ತಮ್ಮ ಏಕತೆ ಮತ್ತು ಒಗ್ಗಟ್ಟನ್ನು ಪ್ರದರ್ಶಿಸುತ್ತಾರೆ.

ಹಿಂದಿನ ದಿನಗಳಲ್ಲಿ ಬಹುತೇಕ ಸಮುದಾಯದ ಜನರು ಕುಲಕಸುಬಾದ ಬಟ್ಟೆ ಹೊಲೆಯುವುದು, ಬಟ್ಟೆಗೆ ಬಣ್ಣ ಹಾಕುವ ಕೆಲಸವನ್ನು ಮಾಡುತ್ತಿದ್ದರು. ನಂತರ ಬಟ್ಟೆ ವ್ಯಾಪಾರವನ್ನು ಮಾಡಲು ಪ್ರಾರಂಭಿಸಿದರು. ಇತ್ತೀಚಿನ ಸಮಕಾಲೀನ ಸಂದರ್ಭದಲ್ಲಿ ಈ ಸಮುದಾಯದವರು ವಿದ್ಯಾವಂತರಾಗಿ ವಿವಿಧ ಕ್ಷೇತ್ರಗಳಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದು, ಇನ್ನು ಕೆಲವರು ವಿವಿಧ ರೀತಿಯ ವ್ಯವಹಾರದಲ್ಲಿ ತೊಡಗಿರುವರು. ಆಧುನಿಕ ಜಗತ್ತಿಗೆ ಹೊಂದಿಕೊಂಡಂತೆ ಬಹುತೇಕ ಬಾಹುಸಾರ ಕ್ಷತ್ರಿಯ ಸಮುದಾಯದವರು ಆರ್ಥಿಕವಾಗಿ ಮುಂದುವರೆದಿದ್ದು, ಎಲ್ಲಾ ಸಮುದಾಯದ ಜನರೊಂದಿಗೆ ಸಮಭಾವದಿಂದ ಬೆರೆತಿರುವರು

ಇವರ ಶೈಕ್ಷಣಿಕ ಸ್ಥಿತಿ-ಗತಿಗಳನ್ನು ಅರಿತಾಗ ೧೯೯೧ ರಲ್ಲಿ ಒಟ್ಟು ಇವರ ೭.೩೧ ರಷ್ಟು ಜನಸಂಖ್ಯೆ ಇದ್ದು, ಅದರಲ್ಲಿ ೧,೦೦,೬೯೮ ರಷ್ಟು ಅನಕ್ಷರಸ್ಥರು ಈ ಸಮುದಾಯದಲ್ಲಿದ್ದಾರೆ. ಒಟ್ಟಿನಲ್ಲಿ ಈ ಸಮುದಾಯವು ೧೯೯೧ ರ ಪ್ರಕಾರ ಜಿಲ್ಲೆಯಲ್ಲಿ ೯೨.೫೫ ರಷ್ಟು ಶಿಕ್ಷಣವನ್ನು ಪಡೆದಿದ್ದಾರೆ.

ಆದರೆ ಇತ್ತೀಚಿನ ದಿನಮಾನಗಳಲ್ಲಿ ಸ್ವಲ್ಪ ಬದಲಾವಣೆ ಹೊಂದಿ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಮುಂತಾದ ದೃಷ್ಟಿಯಿಂದ ಇತರ ಸಮುದಾಯದಂತೆ ಎಲ್ಲ ರಂಗದಲ್ಲಿ ಮೇಲೆ ಬರುತ್ತಿದ್ದಾರೆ ಎಂದು ಹೇಳಬಹುದು. ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರ ಇಂತಹ ಸಮುದಾಯಗಳನ್ನು ಗುರುತಿಸಿ ಅವರ ಅಭಿವೃದ್ಧಿಗಾಗಿ ಯೋಜನೆಯನ್ನು ಕೈಗೊಂಡಿತು. ಆದುದರಿಂದ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಸ್ಥಿತಿ-ಗತಿಗಳನ್ನು ಅಭ್ಯಾಸಿಸಲು ಸಂತೋಷವಾಯಿತು.

ಒಂದು ಪರಿಸರದ ಸಮುದಾಯವನ್ನು ಕುರಿತು ಅಧ್ಯಯನಕ್ಕೆ ತೊಡಗಿದಾಗ ಆ ಪ್ರದೇಶದ ಒಟ್ಟು ಅಭಿವೃದ್ಧಿ ಹಾಗೂ ಅಲ್ಲಿನ ವೈಶಿಷ್ಟ್ಯತೆಗಳೊಂದಿಗೆ ಇಂದಿನ ಆಧುನಿಕತೆಗೆ ಅನುಗುಣವಾಗಿ ಆ ಪರಿಸರದ, ಆ ಸಮುದಾಯದ ಶೈಕ್ಷಣಿಕ ವ್ಯವಸ್ಥೆ ಹೇಗೆ ಬೆಳವಣಿಗೆ ಹೊಂದುತ್ತಾ ಬಂದಿದೆ ಎಂಬುದನ್ನು ಅವಲೋಕಿಸಬೇಕಾದುದು ಬಹು ಮಹತ್ವದ ಅಂಶ.

೧೮೫೭ ರ ನಂತರ ಕನ್ನಡಶಾಲೆಗಳು ಈ ಪ್ರದೇಶದಲ್ಲಿ ಪ್ರಾರಂಭವಾದವು. ಅದಾದ ಬಳಿಕ ಇಂದು ನಾಯಿಕೊಡೆಗಳಂತೆ ಶಿಕ್ಷಣ ಸಂಸ್ಥೆಗಳು ಹುಟ್ಟಿಕೊಂಡು ಎಲ್ಲಾ ಸಮುದಾಯದ ಜನರು ವಿದ್ಯಾವಂತರಾಗಿ ಹೊರಬಂದಿದ್ದಾರೆ, ಸರ್ಕಾರಿ ನೌಕರಿಯನ್ನು ಹಿಡಿದಿದ್ದಾರೆ.

ಬಾಹುಸಾರ ಕ್ಷತ್ರಿಯರ ಆಚರಣೆಗಳು, ರೂಢಿ ಸಂಪ್ರದಾಯಗಳು, ಬೆಡಗುಗಳು ಮುಖ್ಯವಾಗುತ್ತವೆ. ಮಹಿಳೆಯರು ಆಚರಣೆ, ಸಂಪ್ರದಾಯಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಹಬ್ಬ ಹರಿದಿನಗಳು, ನಿಷೇಧಗಳು, ನಂಬಿಕೆಗಳು ಇಲ್ಲಿ ಮುಖ್ಯವಾಗುತ್ತವೆ.

ಬಾಹುಸಾರ ಕ್ಷತ್ರಿಯ ಸಮುದಾಯದವರು ತಮ್ಮ ಪೂರ್ವಜರ ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ, ರೂಢಿಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಕಾಣಬಹುದು. ಎಲ್ಲವೂ ಬದಲಾವಣೆಯಾಗಿಲ್ಲ. ಸ್ತ್ರೀಯರು ಪುರುಷರಂತೆ ಕೆಲಸ ಕಾರ್ಯಗಳಲ್ಲಿ ಮಹತ್ವದ ಪಾತ್ರ ವಹಿಸುತ್ತಾರೆ.

ಹಾಗೆಯೇ ಸಮಕಾಲೀನ ಸಂದರ್ಭದಲ್ಲಿ ತಾಂತ್ರಿಕ ಶಿಕ್ಷಣವನ್ನು ಪಡೆದು ಬೆಂಗಳೂರಿನ ಟಾಟಾ ಕಂಪನಿಯೊಂದರಲ್ಲಿ ಇಂಜಿನಿಯರ್ ಆಗಿ ಸೇವೆ ಸಲ್ಲಿಸುತ್ತಿರುವ ಉತ್ತರ್‌ಕರ್. ಆರ್. ಶೇಷಗಿರಿರಾವ್, ಮೂಲತಃ ಶಿವಮೊಗ್ಗ ತಾಲ್ಲೂಕಿನವರು.

ಶಾಂತ ಕುಮಾರ್. ಎಸ್. ಎಂಬುವವರು ಉನ್ನತ ಶಿಕ್ಷಣವನ್ನು ಪಡೆದು ಭದ್ರಾವತಿಯ ಎಂ.ಪಿ.ಎಂ. ಕಾರ್ಖಾನೆಯಲ್ಲಿ ಆರ್ಥಿಕ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸಿ ನಿವೃತ್ತರಾಗಿ, ಈಗ ಸ್ವಂತ ವ್ಯವಹಾರವನ್ನು ನಡೆಸುತ್ತಲಿದ್ದಾರೆ. ಇವರ ಮಗ ಪ್ರದೀಪ್ ಸಾಕರೆ, ತಾಂತ್ರಿಕ ಶಿಕ್ಷಣ ಪಡೆದು ಇಂಜನಿಯರ್ ಆಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀಮತಿ ರಜನಿ ಸಂದೀಪ್ ಸಾಕರೆ, ಇವರು ಕೃಷಿ ಇಲಾಖೆಯಲ್ಲಿ ದ್ವಿತೀಯ ದರ್ಜೆ ಸಹಾಯಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಸಾಕ್ರೆ ಕುಟುಂಬದ ಹಿರಿಯರಾಗಿರುವ ಎಸ್.ವಿ.ರವೀಂದ್ರಕುಮಾರ್ ಅವರು ಶಿಕ್ಷಿತರಾಗಿದ್ದು ಶಿವಮೊಗ್ಗದಲ್ಲಿ ಟೈಲರಿಂಗ್ ವ್ಯವಹಾರವನ್ನು ನಡೆಸುತ್ತಿದ್ದಾರೆ. ಇವರ ವ್ಯವಹಾರದಲ್ಲಿ ಅವರ ಶ್ರೀಮತಿಯವರಾದ ಎಸ್. ಆರ್. ವಿಜಯಲಕ್ಷ್ಮೀಯವರು ಕೈಗೂಡಿಸಿರುತ್ತಾರೆ. ಹಾಗೆಯೇ ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಇಂಜಿನಿಯರಾಗಿ ಎಸ್.ವಿ.ಗೋಪಿನಾಥ್ ರವರು ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರ ಶ್ರೀಮತಿಯುವರಾದ ಶೀಲಾ ಗೋಪಿನಾಥ್ ರವರು ಸರ್ಕಾರಿ ಇಲಾಖೆಯಲ್ಲಿ ಪ್ರಥಮದರ್ಜೆ ಸಹಾಯಕಿಯಾಗಿ ಕಾರ್ಯವನ್ನು ನಿರ್ವಹಿಸುತ್ತಲಿದ್ದಾರೆ. ಆರ್.ಟಿ.ಓ. ಉನ್ನತ ಅಧಿಕಾರಿಗಳಾಗಿ ಎಸ್.ವಿ.ರಾಮನಾಥ್ ರವರು ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಸರ್ಕಾರಿ ಆರೋಗ್ಯ ಇಲಾಖೆಯ ಫಾರ್ಮಸಿಸ್ಟ್‌ರಾಗಿ ಆಗಿ ಎಸ್.ವಿ. ಪ್ರೇಮನಾಥ್ ರವರು ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರ ಶ್ರೀಮತಿಯವರಾದ ಸುನಂದ ಪ್ರೇಮನಾಥ್ ರವರೂ ಸಹ ಆರೋಗ್ಯ ಇಲಾಖೆಯಲ್ಲಿ ಹಿರಿಯ ಆರೋಗ್ಯ ಸಹಾಯಕಿಯಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ವಿಜಯಾ ಬ್ಯಾಂಕಿನ ವ್ಯವಸ್ಥಾಪಕರಾಗಿ ಎಸ್.ವಿ.ಮುರಳೀಧರ ರವರು ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಹಾಗೂ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ವ್ಯವಸ್ಥಾಪಕರಾಗಿ ಎಸ್.ವಿ.ರಾಘವೇಂದ್ರ ರವರು ಮೇಲ್ಕಂಡ ಇವರುಗಳೆಲ್ಲರೂ ಒಂದೇ ಕುಟುಂಬದವರಾಗಿ, ಸಹೋದರರಾಗಿದ್ದು ದಿವಂಗತ ಸಾಕ್ರೆ ವಿಠೋಬರಾವ್ ಮತ್ತು ದಿವಂಗತ ಸಾಕ್ರೆ ನಾಗರತ್ನಮ್ಮ ರವರ ಪುತ್ರರು ಹಾಗೂ ಸೊಸೆಯಂದಿರಾಗಿರುತ್ತಾರೆ.

ಶ್ರೀಮತಿ ರೂಪಾಸತ್ಯೇಂದ್ರ ಬೊಂಗಾಳೆ ಇವರ ಮಕ್ಕಳು ರಜತ್. ಹಾಗೂ ರತನ್ ಇವರು ತಾಂತ್ರಿಕ ವಿದ್ಯಾಭ್ಯಾಸವನ್ನು ಪಡೆದು ಕಾರ್ಯಪಾಲಕ ಅಭಿಯಂತರುಗಳಾಗಿ ಕಾರ್ಯ ನಿರ್ವಹಿಸುತ್ತಲಿದ್ದಾರೆ. ಆಯುರ್ವೇದಿಕ್ ತಜ್ಞರಾಗಿ ಶ್ರೀಮತಿ ಆಶಾ ಪಟಾಣೆ ರವರು ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಪುರುಷೋತ್ತಮ ಪಿ. ರಂಗಧೋಳ್ ರವರು ಹಿರಿಯ ವೈದ್ಯಾಧಿಕಾರಿಗಳಾಗಿ ಸೇವೆಯನ್ನು ಸಲ್ಲಿಸಿ, ನಿವೃತ್ತಿಯನ್ನು ಹೊಂದಿದ್ದರೂ, ಚಿಕಿತ್ಸಾಲಯವನ್ನು ಪ್ರಾರಂಭಿಸಿ ವೈದ್ಯಕೀಯರಂಗದಲ್ಲಿ ಇನ್ನೂ ಸೇವೆಯನ್ನು ಸಲ್ಲಿಸುತ್ತಲೇ ಇದ್ದಾರೆ. ಇವರ ಮಗನಾದ ಸಾತ್ವಿಕ್ ರಂಗಧೋಳ್, ಸಹ ದಂತ ವೈದ್ಯರಾಗಿದ್ದು, ಇವರೂ ಸಹ ಚಿಕಿತ್ಸಾಲಯವನ್ನು ಪ್ರಾರಂಬಿಸಿರುತ್ತಾರೆ. ಹಾಗೆಯೇ ಶಿಕ್ಷಣ ಕ್ಷೇತ್ರದಲ್ಲಿ ಆರ್.ಪಿ. ರೇವತಿ$_{\text{ಎಂ.ಎ.ಬಿ.ಎಡ್.}}$ ಪದವಿ ಪಡೆದು ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿದ್ದು, ಪ್ರಸ್ತುತ ಪಿ.ಹೆಚ್.ಡಿ. ಅಧ್ಯಯನ ಮಾಡುತ್ತಿರುವರು. ರಾಘವೇಂದ್ರ ಪಿ. ರಂಗಧೋಳ್‌ರವರು ದ್ವಿತೀಯ ದರ್ಜೆ ಸಹಾಯಕರಾಗಿ, ವಿದ್ಯಾ.ಪಿ.ರಂಗಧೋಳ್‌ರವರು ಉಪನ್ಯಾಸಕಿಯಾಗಿ, ಉತ್ತರ್‌ಕರ್ ಎನ್. ಜಗದೀಶ್‌ರವರು ಎಂ.ಕಾಂ. ಪದವಿ ಪಡೆದು ಶಿವಮೊಗ್ಗ ನ್ಯಾಷನಲ್ ಪಿ.ಯು.ಕಾಲೇಜಿನ ಪ್ರಾಂಶುಪಾಲರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಎಸ್.ಎನ್. ದಯಾನಂದ ಇವರು ಉಪನ್ಯಾಸಕರಾಗಿ. ಹಿರಿಯ ವಕೀಲರಾಗಿ ಆರ್. ಆರ್. ರುದ್ರಪ್ಪನವರು ಸೇವೆಯನ್ನು ಸಲ್ಲಿಸುತ್ತಿದ್ದಾರ. ಇವರ ಮಗ ಆತ್ಮ ರಂಗಧೋಳ್ ರವರು ಇಂಜನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಮೂಳೆ ಹಾಗೂ ಕೀಲುಗಳ ತಜ್ಞರಾಗಿ ಡಾ॥ ಭಾಗ್ಯರಾಂ ಡೋಯಿಜೊಡೆ. ಇವರು ಶಿವಮೊಗ್ಗದಲ್ಲಿ ಚಿಕಿತ್ಸಾಲಯವನ್ನು ಪ್ರಾರಂಬಿಸಿ ವೈದ್ಯಕೀಯರಂಗದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ ಹಾಗೂ ಡಾ॥ ಚಂದ್ರಕಾಂತ್ ರವರು ಜನರಲ್ ಸರ್ಜನ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ ಈ ಸಮಕಾಲೀನ ಸಂದರ್ಭದಲ್ಲಿಯೂ ಈ ಸಮುದಾಯದವರಲ್ಲಿ ಉನ್ನತ ಶಿಕ್ಷಣ ಪಡೆದು, ಅಭಿಯಂತರರಾಗಿ, ವಕೀಲರಾಗಿ, ಉಪನ್ಯಾಸಕರುಗಳಾಗಿ, ವೈದ್ಯಾಧಿಕಾರಿಗಳಾಗಿ, ವೈದ್ಯರಾಗಿ, ಬ್ಯಾಂಕ್ ವ್ಯವಸ್ಥಾಪಕರುಗಳಾಗಿ, ಸಾರಿಗೆ ಅಧಿಕಾರಿಗಳಾಗಿ, ಹಾಗೂ ವಿವಿಧ ಸರಕಾರಿ ಇಲಾಖೆಗಳಲ್ಲಿ ಅಧಿಕಾರಿಗಳಾಗಿ ಹಾಗೂ ಪ್ರಥಮ, ದ್ವಿತೀಯ ದರ್ಜೆ ಸಹಾಯಕರುಗಳಾಗಿ, ಬೆರಳಚ್ಚುಗಾರರಾಗಿ ಸೇವೆಯನ್ನು ಸಲ್ಲಿಸುತ್ತಲಿದ್ದಾರೆ.

ರಾಜಕೀಯ ಕ್ಷೇತ್ರದಲ್ಲಿ ೧೯೭೭ ರಲ್ಲಿ ನಗರ ಸಭೆಯ ಸದಸ್ಯರಾಗಿದ್ದಂತಹ ಟಿ.ಜಿ.ಶ್ರೀಧರ ರಾವ್ ರವರು ಪ್ರಸ್ತುತ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಸಮಕಾಲೀನ ಸಂದರ್ಭದಲ್ಲೂ ಈ ಸಮುದಾಯದವರು ನಗರಸಭೆಯ ಸದಸ್ಯರಾಗಿ ಸೇವೆಯನ್ನು ಸಲ್ಲಿಸಿದ್ದಾರೆ ಅವರುಗಳೆಂದರೆ. ಆರ್.ಟಿ. ತುಳಜಪ್ಪ, ಆರ್. ಕೆ. ಉಮೇಶ್. ಓಂ ಪ್ರಕಾಶ್ ತೇಲ್ಕರ್, ಶ್ಯಾಮ ಸುಂದರ್

ನಾಜರೆ ರವರುಗಳು. ನಗರಾಭಿವೃದ್ಧಿ ಪ್ರಾಧಿಕಾರದ ಸದಸ್ಯರಾಗಿ ಎಂ.ಹೆಚ್ ಶಿರೀಷ್ ರವರು ಸೇವೆ ಸಲ್ಲಿಸುತ್ತಿದ್ದಾರೆ .

ಹೀಗೆ ಸಮಕಾಲೀನ ಸಂದರ್ಭದಲ್ಲೂ ಬಾಹುಸಾರ ಕ್ಷತ್ರಿಯ ಸಮುದಾಯದವರು ತಮ್ಮ ವಾರ್ಷಿಕಾವರ್ತನ ಆಚರಣೆ, ಜೀವನಾವರ್ತನದಾಚರಣೆ, ನಂಬಿಕೆ, ರೂಢಿ ಸಂಪ್ರದಾಯ, ಸಾಮಾಜಿಕ ರಾಜಕೀಯ ಶೈಕ್ಷಣಿಕ, ಧಾರ್ಮಿಕ, ಆರ್ಥಿಕ ಕ್ಷೇತ್ರದಲ್ಲಿ ಬದಲಾವಣೆ ಹೊಂದುತ್ತಾ ಅಭಿವೃದ್ಧಿ ಪಥದಲ್ಲಿ ಸಾಗುವುದನ್ನು ಕ್ಷೇತ್ರ ಕಾರ್ಯ ಕೈಗೊಂಡ ಸಂದರ್ಭದಲ್ಲಿ ಗುರುತಿಸಲಾಗಿದೆ.

ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಎಷ್ಟೇ ಸುಧಾರಿಸಿದರೂ ಸಹ ಪುರುಷರು ಮಾತ್ರ ಅಧಿಕಾರ ಚಲಾಯಿಸುತ್ತಿರುತ್ತಾರೆ. ಕುಟುಂಬದ ಜವಾಬ್ದಾರಿಯು ನಮ್ಮದು ಎಂದು ಹೇಳಲಾಗುತ್ತಿದೆ. ಆದರೆ ಕುಟುಂಬದಲ್ಲಿ ಆಗುಹೋಗುಗಳಿಗೆ ಮಹಿಳೆಯೇ ಜವಾಬ್ದಾರಿಯಾಗಿರುತ್ತಾಳೆ.

ದುಡಿಯುವ ಗಂಡಸು ಕೆಲಸ ಮುಗಿಸಿಕೊಂಡು ಮನೆಗೆ ಬಂದ ಮೇಲೆ ಹೆಂಡತಿಯು ಏನನ್ನಾದರೂ ಕೇಳಿದರೆ 'ಮನೆಯಲ್ಲಿರುವ ನಿನಗೇನು ಗೊತ್ತು, ನೀನು ದುಡಿದರೆ ಗೊತ್ತಾಗುತ್ತದೆ' ಎಂದು ಹೇಳುತ್ತಾರೆ. ಆದರೆ ಹೊರಗೆ ದುಡಿಯುವುದಕ್ಕೆ ಅವಕಾಶ ಕೊಡುವುದಿಲ್ಲ. ಆದರೆ ಮುಂಜಾನೆಯಿಂದ ರಾತ್ರಿಯವರೆಗೆ ಇತ್ತ ಕೆಲಸಗಳ ಜೊತೆಗೆ ಮನೆಯ ಜವಾಬ್ದಾರಿಯು ಮುಖ್ಯವಾಗಿರುತ್ತದೆ.

ಕುಟುಂಬದ ಜವಾಬ್ದಾರಿಯನ್ನು ಹೆಂಡತಿಯು ಹೊಂದಾಣಿಕೆ ಮಾಡಿಕೊಂಡು ಹೋಗುವುದು ಒಂದು ವರವಾಗಿದೆ. ಕುಟುಂಬವು ಶಾಂತಿಯುತವಾಗಿ ಇರಬೇಕಾದರೆ ಗಂಡ ಹೆಂಡರಲ್ಲಿ ಹೊಂದಾಣಿಕೆಯು ಮುಖ್ಯವಾಗಿರುತ್ತದೆ. ಇಲ್ಲವಾದರೆ ಕುಟುಂಬದಲ್ಲಿ ಕಲಹಗಳು ಉದ್ಭವಿಸುವುದು ಸಹಜವಾಗಿರುತ್ತದೆ. ಒಂದು ಸಮಾಜದ ಸರ್ವಾಂಗೀಣ ಪ್ರಗತಿ ಪ್ರಕ್ರಿಯೆಯಲ್ಲಿ ಪುರುಷ ಮತ್ತು ಮಹಿಳೆಯರು ತಮ್ಮ ತಮ್ಮ ಜವಾಬ್ದಾರಿಗಳನ್ನು ಅರಿತು ಕಾರ್ಯ ನಿರ್ವಹಿಸುವುದು. ಇಂದಿನ ಆಧುನಿಕ ಜಗತ್ತಿನಲ್ಲಿ ಅನಿವಾರ್ಯವಾಗಿ ಕಂಡುಬರುವುದುಂಟು. ಒಬ್ಬರಿಗೊಬ್ಬರು ಪರಸ್ಪರ ಪೂರಕವಾಗಿ ಕಾರ್ಯ ನಿರ್ವಹಿಸಬೇಕಾಗಿದೆ. ಆಧುನಿಕ ಯುಗದಲ್ಲಿ ಪ್ರಗತಿಪರ, ಚೈತನ್ಯಶೀಲ ಬದಲಾವಣೆ ಹೊಂದುತ್ತಿರುವ ಜಗತ್ತಿನಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ಮಹಿಳೆಗೆ ಜವಾಬ್ದಾರಿಯ ಸಹಭಾಗಿತ್ವ ನೀಡಿ ಅವರಲ್ಲಿಯ ಶಕ್ತಿ ಸಾಮರ್ಥ್ಯ ಗುರುತಿಸುವ ಕಾರ್ಯ ಇವರಲ್ಲಿ ನಡೆದಿಲ್ಲ. ಮಹಿಳೆಯರು ಸಾಧಿಸಿದ ಅಲ್ಪಸ್ವಲ್ಪ ಪ್ರಗತಿಯ ಸಾಧನೆ ಗುರುತಿಸಿ ಉತ್ತೇಜನ ನೀಡುವುದು ಮತ್ತು ಪ್ರೋತ್ಸಾಹ ನೀಡುವುದು ಈ ಸಮುದಾಯದಲ್ಲಿ ಕಂಡುಬರುತ್ತದೆ.

ಜೀವನದ ನಿರ್ವಹಣೆಗೆ ಅನೇಕ ವೃತ್ತಿಗಳನ್ನು ಇವರು ಅವಲಂಬಿಸಬೇಕಾಗುತ್ತದೆ. ಸಾಂಪ್ರದಾಯಿಕ, ಸಾಮಾಜಿಕ ಕಟ್ಟುಪಾಡು ಮತ್ತು ಕುಟುಂಬದಲ್ಲಿನ ನಿರ್ಬಂಧನೆಗಳನ್ನು

ಪಾಲಿಸಬೇಕಾಗುತ್ತದೆ. ಕಷ್ಟ ಸಹಿಷ್ಣುತೆ, ನಂಬಿಕೆ ಉಳ್ಳವರು, ಅಲ್ಪ ತೃಪ್ತಿ ಬದಲಾವಣೆಗೆ ಹೊಂದಿಕೊಳ್ಳುವ ಮನೋವೃತ್ತಿಯು ಇವರಲ್ಲಿ ಬೆಳೆಯುತ್ತಿದೆ.

ನಿಸರ್ಗಪ್ರಿಯತೆ, ಇವರಲ್ಲಿದ್ದ ವೈದ್ಯ ಪದ್ಧತಿ, ಇಂದಿಗೂ ಅಸ್ಪೃಶ್ಯರಾಗಿ ಬಾಳುತ್ತಿರುವುದನ್ನು ಗಮನಿಸಬಹುದು, ಸಮುದಾಯವು ಆಧುನೀಕರಣದ ಮಧ್ಯದಲ್ಲಿಯೂ ತಮ್ಮ ಮೂಲದ ಈ ಆಂಶಗಳನ್ನು ಇನ್ನೂ ಉಳಿಸಿಕೊಂಡಿರುವುದು ಗಮನಾರ್ಹ.

# ಅಧ್ಯಾಯ ೯

## ಸಮಾರೋಪ

ಶಿಷ್ಟ ಸಂಸ್ಕೃತಿಯೊಂದು ದಟ್ಟವಾಗಿ ಬೆಳೆದ ಮೇಲೂ ಜನಪದ ಸಂಸ್ಕೃತಿಯು ಯಾವುದೇ ರೀತಿಯಲ್ಲಿ ಸೊರಗಿಲ್ಲ. ಸಂಸ್ಕೃತಿಯನ್ನು ಪೋಷಿಸುತ್ತಾ ತನ್ನ ಪ್ರಭಾವವನ್ನು ಉಳಿಸಿಕೊಂಡು ಬರುವಲ್ಲಿ ಯಾವ ಜನಪದವು ಹಿಂದೆ ಬಿದ್ದಿಲ್ಲ. ಜೊತೆಗೆ ತಮ್ಮ ರೀತಿ ನೀತಿಗಳಲ್ಲಿ, ಆಚರಣೆಗಳಲ್ಲಿ, ಸಂಪ್ರದಾಯಗಳಲ್ಲಿ ಇಂದಿಗೂ ಆಳವಾಗಿ ಬೇರುಬಿಟ್ಟು ಬದುಕಿನೊಡನೆ ಅರ್ಥಪೂರ್ಣವಾದ ಸಂಬಂಧವನ್ನು ಇಟ್ಟುಕೊಂಡೇ ಯಾವುದೇ ಸಮುದಾಯವು ಮುಂದೆ ಸಾಗುತ್ತಿದೆ. ಅಂತೆಯೇ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಕುರಿತು ಅಧ್ಯಯನಕ್ಕೆ ತೊಡಗಿದಾಗ ತಮ್ಮ ಮೂಲ ಸಂಸ್ಕೃತಿಯನ್ನು ಇಂದಿಗೂ ಒಂದಲ್ಲಾ ಒಂದು ರೀತಿಯಲ್ಲಿ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಕೃಷಿ, ಪಶುಪಾಲನೆ, ಬಟ್ಟೆಗೆ ಬಣ್ಣ ಹಾಕುವುದು, ಬಟ್ಟೆಯನ್ನು ಹೊಲಿಯುವುದು, ಮುಂತಾದ ವೃತ್ತಿಗಳನ್ನು ಈಗಲೂ ಮಾಡುತ್ತಿದ್ದಾರೆ. ಬಾಹುಸಾರ ಕ್ಷತ್ರಿಯ ಸಮುದಾಯ ಇಂದಿಗೂ ಅಂತಹ ನೆನಪುಗಳನ್ನು ತಂದುಕೊಡುವ ರೀತಿಯಲ್ಲಿ ಈ ಪರಿಸರದೊಳಗೆ ವಾಸಿಸಿಕೊಂಡು ಬಂದಿರುವುದನ್ನು ನೋಡಬಹುದು ಈ ಸಮುದಾಯದಲ್ಲಿ ಮೌಖಿಕ ಪರಂಪರೆ ಬಳಕೆಯಲ್ಲಿ ಇರುವುದರಿಂದಲೇ ಆಚರಣೆಯ ಒಂದು ಭಾಗವಾಗಿ ಹಬ್ಬ ಹರಿದಿನಗಳಲ್ಲಿ ದಿಂಡಿ ಉತ್ಸವ, ಜಯಂತೋತ್ಸವ, ಇತ್ಯಾದಿ ಸಂದರ್ಭದಲ್ಲಿ ಬಳಸಬಹುದಾದಂತಹ ಪರಿಕರಗಳು, ಉಡುಗೆ ತೊಡುಗೆಗಳು, ಆಹಾರ ಪದ್ಧತಿ, ಆಚರಣೆ ನಂಬಿಕೆ ಮೂಲಕ ಸಮಗ್ರ ಸಂಸ್ಕೃತಿಯನ್ನು ರಚಿಸಲು ಸಾಧ್ಯ.

ಅಧ್ಯಯನದಿಂದ ದೂರುಳಿದ ಶಿವಮೊಗ್ಗ ಜಿಲ್ಲೆಯ ಸಾಂಸ್ಕೃತಿಕ, ಐತಿಹಾಸಿಕ, ಶೈಕ್ಷಣಿಕ, ಸಾಹಿತ್ಯಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಮೊದಲಾದ ಕ್ಷೇತ್ರಗಳ ಚರಿತ್ರೆಯನ್ನು ಕಟ್ಟಿಕೊಡುತ್ತದೆ. ಆದರೆ ನನ್ನ ಅಧ್ಯಯನದಲ್ಲಿ ಶಿವಮೊಗ್ಗ ಜಿಲ್ಲೆಯ ಒಂದು ಸಮುದಾಯವನ್ನಷ್ಟೇ ಪ್ರಮುಖವಾಗಿ ಗಮನದಲ್ಲಿಟ್ಟುಕೊಂಡು ಅದಕ್ಕೆ ಪೂರಕವಾಗಿ ಶಿವಮೊಗ್ಗ ಜಿಲ್ಲೆಯ ಒಟ್ಟು ಪರಿಚಯವನ್ನು ಇಲ್ಲಿ ಮಾಡಲಾಗಿದೆ.

ಯಾವುದೇ ಒಂದು ಸಂಸ್ಕೃತಿಯು ಒಂದು ಗೊತ್ತಾದ ಸಮುದಾಯದ ಜೀವನ ಕ್ರಮವೇ ಆಗಿರುತ್ತದೆ. ಒಂದು ವ್ಯವಸ್ಥಿತ ರೀತಿಯಲ್ಲಿ ಆ ಜನತೆಯ ಬದುಕು ಹೊಂದಾಣಿಕೆ, ಹೊಣೆಗಾರಿಕೆ ಮತ್ತು ಆಯ್ಕೆಯನ್ನು ಅನುಸರಿಸಿ ನಡೆಯುತ್ತದೆ. ಒಂದು ಸಮುದಾಯದಲ್ಲಿ ಕಂಡು ಬರುವ ಸಾಧನ, ಸಲಕರಣೆಗಳು, ಮನೆ–ಮಠಗಳು, ಉಡುಗೆ– ತೊಡುಗೆಗಳು, ಆಯಾ ಸಮುದಾಯದ ಅಮೂರ್ತವಾದ ಮಾನಸಿಕ ವ್ಯಾಪಾರಗಳು ಅವರನ್ನು ಒಂದುಗೂಡಿಸುವ ಸಾಧನಗಳಾಗಿರುತ್ತವೆ.

ಅವುಗಳು ಪರಸ್ಪರ ಕ್ರಿಯಾನ್ವಿತಗಳಾಗಿದ್ದು ಆಯಾ ಸಮುದಾಯದಲ್ಲಿ ಮುಂದುವರೆಯುತ್ತವೆ. ಆದ್ದರಿಂದ ಸಮುದಾಯದ ಸಂಸ್ಕೃತಿ ಎನ್ನುವಾಗ ಅದರಲ್ಲಿ ಸಮಸ್ತವು ಅಡಗಿರುತ್ತದೆ. ಈ ಕುರಿತು ಸಾಂಸ್ಕೃತಿಕ ಮಾಹಿತಿಯನ್ನು ಕಲೆಹಾಕುವಾಗ ಸಹಜವಾಗಿಯೇ ಇತರೆ ಸಮುದಾಯದ ಸಂಸ್ಕೃತಿ, ಆಚಾರ ವಿಚಾರ, ಅವರೊಡನೆ ಹೊಂದಾಣಿಕೆ ಎಲ್ಲವೂ ಮುಖ್ಯವಾಗಿರುತ್ತದೆ. ಯಾವುದೇ ಒಂದು ಸಮುದಾಯವೆಂದರೆ ಸಹಜವಾಗಿಯೇ ಅ ಸಮುದಾಯ ವಾಸಿಸುವ ಸ್ಥಳಗಳ ಹಿನ್ನೆಲೆಯನ್ನು ನೋಡಬೇಕಾಗುತ್ತದೆ. ಕಾರಣ ಮಾನವ ಸಂಘಜೀವಿ. ಆತ ಒಂಟಿಯಾಗಿ ಬಾಳಲಾರ. ಕೊಡುಕೊಳಿಗೆ ಉತ್ತಮ ಉದಾಹರಣೆ. ಆತ ಈ ಹಿನ್ನೆಲೆಯಲ್ಲಿ ಸಾಧ್ಯವಾದಲ್ಲಿ ಶಿವಮೊಗ್ಗ ಜಿಲ್ಲೆಯ ಸಂಕ್ಷಿಪ್ತ ಪರಿಚಯ ಅವಶ್ಯವೆನಿಸಿ ಇಡೀ ಶಿವಮೊಗ್ಗ ಜಿಲ್ಲೆಯ ಮೇಲೆ ಕಿರುನೋಟ ಬೀರಲಾಗಿದೆ.

ಯಾವುದೇ ಸಮುದಾಯವು ಆಯಾ ಗ್ರಾಮಗಳನ್ನು ಹೊರತುಪಡಿಸಿ ಇರಲಿಕ್ಕಿಲ್ಲ. ಕಾರಣ ಇಡೀ ಗ್ರಾಮವು ತನ್ನ ಒಡಲೊಳಗೆ ಎಲ್ಲಾ ಸಂಸ್ಕೃತಿಯನ್ನು ಹುದುಗಿಸಿಕೊಂಡಿರುತ್ತದೆ. ಒಂದು ಸಮುದಾಯದ ಅಧ್ಯಯನ ಕೈಗೊಂಡಾಗ ತಾವಾಗಿಯೇ ಇನ್ನೊಂದು ಸಮುದಾಯದ ಸಂಸ್ಕೃತಿಯು ಅಲ್ಲಿ ಮುಖ್ಯವೆನಿಸಬಹುದು.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವು ವಾಸಿಸುವ ಗ್ರಾಮಗಳು ನಗರೀಕರಣದ ಪ್ರಭಾವಕ್ಕೆ ಇಂದು ಒಳಗಾಗುತ್ತಿದ್ದು, ಆಧುನಿಕ ಸಂಸ್ಕೃತಿಯನ್ನು ರೂಢಿಸಿಕೊಳ್ಳುತ್ತಿದ್ದರೂ ಅಷ್ಟಾಗಿ ಈ ಸಮುದಾಯ ಆರ್ಥಿಕವಾಗಿ ಮುಂದೆ ಬರಲು ಪ್ರಯತ್ನಿಸದಿರುವುದು ಕಂಡುಬರುತ್ತದೆ. ಈಗ ತಾನೆ ಆಧುನಿಕತೆಗೆ ತಮ್ಮನ್ನು ತಾವು ಒಗ್ಗಿಸಿಕೊಳ್ಳುವ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಅನುಕೂಲವಾಗುವಂತೆ ಒಟ್ಟಾರೆ ಪ್ರಬಂಧವನ್ನು ಒಂಬತ್ತು ಅಧ್ಯಾಯಗಳಾಗಿ ಮಾಡಿಕೊಂಡು ವಿಸ್ತರಿಸಲಾಗಿದೆ.

ಬಾಹುಸಾರ ಕ್ಷತ್ರಿಯ ಸಮುದಾಯದ ಧಾರ್ಮಿಕ ಆಚಾರ ವಿಚಾರಗಳ ಜೊತೆಗೆ ಸಾಮಾಜಿಕ ಸಂಘಟನೆಯನ್ನು ತಿಳಿದುಕೊಳ್ಳಲು. ಸಹಭಾಗಿಯ ಅವಲೋಕನದ ವಿಧಾನಗಳನ್ನು ಅಳವಡಿಸಿದ್ದೇನೆ. ನನ್ನ ಅಧ್ಯಯನಕ್ಕೆ ಅನುಗುಣವಾಗುವಂತೆ ಮುಖ್ಯಸ್ಥರನ್ನು ಕಂಡು ಅವರ ಸುತ್ತಮುತ್ತಲಿನ ಪ್ರದೇಶಗಳನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾಹಿತಿಯ ಜೊತೆಗೆ ಬಾಹುಸಾರ ಕ್ಷತ್ರಿಯ ಸಮುದಾಯದ ಸಂಸ್ಕಾರ, ಹಬ್ಬ ಹರಿದಿನ, ಆಚಾರ. ವಿಚಾರ, ಸಾಮಾಜಿಕ, ಆರ್ಥಿಕ ರಾಜಕೀಯ, ಶೈಕ್ಷಣಿಕ ಸ್ಥಿತಿ ಗತಿಗಳ ಜೊತೆಗೆ ಇವರ ವಿವಾಹ ಪದ್ಧತಿ, ಕುಟುಂಬದ ಪ್ರಕಾರಗಳು, ಬಂಧುತ್ವ, ಭಾಷೆ, ಕಲೆ ಇತ್ಯಾದಿಗಳನ್ನು ಅಧ್ಯಯನ ಮಾಡಲಾಗಿದೆ. ಅದು ಅಲ್ಲದೆ ನಾನು ನನ್ನ ಕ್ಷೇತ್ರಾಧ್ಯಯನದಲ್ಲಿ ಸಾಮಾಜಿಕ, ಆರ್ಥಿಕ ಹಿನ್ನೆಲೆಯಲ್ಲಿ ಕುಟುಂಬಗಳ ಮಾಹಿತಿಯನ್ನು ಪಡೆಯಲಾಯಿತು. ಮನೆಮನೆಗೆ ತೆರಳಿ ಅನುಸೂಚಿಯ ಮೂಲಕ ಸಂದರ್ಶಿಸಿ ಹೆಚ್ಚಿನ ಮಾಹಿತಿಯನ್ನು ಅದರಲ್ಲಿ ಅವರ ಧರ್ಮ, ಕುಟುಂಬದ ಮನೆಯ ದೇವರು, ವಿವಿಧ ಮನೆಗಳು, ವಿವಿಧ ಕುಟುಂಬಗಳು, ಕುಟುಂಬದ ಮೂಲ

ಆದಾಯ, ವಯಸ್ಸು, ವೈವಾಹಿಕ ಸ್ಥಾನ, ಶಿಕ್ಷಣದ ಸ್ಥಾನಮಾನ ಮತ್ತು ಅಧ್ಯಯನಕ್ಕೆ ಬೇಕಾಗಿರುವ ಪ್ರಶ್ನೆಗಳ ಮೂಲಕ ವೈಯಕ್ತಿಕವಾಗಿ ಅವರ ಸಾಮಾಜಿಕ ಸಂಸ್ಕೃತಿಯನ್ನು ಅಧ್ಯಯನ ಮಾಡಲಾಯಿತು. ಅದರಲ್ಲಿ ಅತಿ ಸಂಬಂಧ ಹೊಂದಿದ ಹಳ್ಳಿಗಳಲ್ಲಿ  ತಿಳಿಯಬಲ್ಲ ಪುರಷ ಸ್ತ್ರೀಯರಿಗೆ ಮತ್ತು ಶಾಲೆಯ ಮುಖ್ಯಸ್ಥರಿಗೆ, ವೈಯಕ್ತಿಕ ಸಂಬಂಧದವರಿಗೆ, ಸಹಭಾಗಿ ಕುಟುಂಬದ ಸಂಸ್ಕಾರಗಳು ಮತ್ತು ಮನೆಯ ಕಾರ್ಯಕ್ರಮಗಳು, ವ್ಯವಸಾಯದ ಚಟುವಟಿಕೆಗಳು, ಕಚೇರಿಯ ದಾಖಲೆಗಳು ಮುಂತಾದ ಮಾಹಿತಿಯ ಸಂದರ್ಶನ ಮೂಲಕ ಭಾಗಿಯಾಗಿರುತ್ತೇನೆ.

ಬಾಹುಸಾರ ಕ್ಷತ್ರಿಯ ಸಮುದಾಯದ ಸಂಸ್ಕಾರ, ಹಬ್ಬ, ಹರಿದಿನ, ಆಚಾರ, ವಿಚಾರ, ಸಾಮಾಜಿಕ ಆರ್ಥಿಕ, ರಾಜಕೀಯ, ಶೈಕ್ಷಣಿಯ ಸ್ಥಿತಿಗತಿಗಳ ಜೊತೆಗೆ ಇವರ ವಿವಾಹ ಪದ್ಧತಿ, ಕುಟುಂಬದ ಪ್ರಕಾರಗಳು, ಬಂಧುತ್ವ, ಭಾಷೆ, ಕಲೆ, ಇತ್ಯಾದಿಗಳನ್ನು ಅಧ್ಯಯನ ಮಾಡಲಾಗಿದೆ. ಅದು ಅಲ್ಲದೆ ನಾನು ನನ್ನ ಕ್ಷೇತ್ರಾಧ್ಯಯನದಲ್ಲಿ ಸಾಮಾಜಿಕ, ಆರ್ಥಿಕ ಹಿನ್ನೆಲೆಯಲ್ಲಿ ಕುಟುಂಬಗಳ ಮಾಹಿತಿಯನ್ನು ಅದರಲ್ಲಿ ಧರ್ಮ, ಕುಟುಂಬದ ಮನೆಯ ದೇವರು, ವಿವಿಧ ಮನೆಗಳು, ವಿವಿಧ ಕುಟುಂಬಗಳು, ಕುಟುಂಬದ ಮೂಲ ಆದಾಯ, ವಯಸ್ಸು, ವೈವಾಹಿಕ ಸ್ಥಾನ, ಶಿಕ್ಷಣದ ಸ್ಥಾನಮಾನ ಮತ್ತು ಅಧ್ಯಯನಕ್ಕೆ ಬೇಕಾಗಿರುವ ಪ್ರಶ್ನೆಗಳ ಮೂಲಕ ವೈಯಕ್ತಿಕವಾಗಿ ಅವರ ಸಾಮಾಜಿಕ ಸಂಸ್ಕೃತಿಯನ್ನು ಅಧ್ಯಯನ ಮಾಡಲಾಯಿತು.

ಮೊದಲನೆಯ ಅಧ್ಯಾಯವು "ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ" ಎಂದಿದೆ. ಅಧ್ಯಯನಕ್ಕಾಗಿ ತೆಗೆದುಕೊಂಡ ವಿಷಯವಸ್ತು, ಅಧ್ಯಯನಕ್ಕೆ ಒಳಪಡುವ ಮಾಹಿತಿಯನ್ನು ಕುರಿತು ಖಚಿತವಾಗಿ ವಿವರಿಸಲಾಗಿದೆ. ಎರಡನೆಯ ಅಧ್ಯಾಯವು ಶಿವಮೊಗ್ಗ ಜಿಲ್ಲೆಯ ಪರಿಚಯದಿಂದ ಕೂಡಿದ್ದು, ಈ ಪರಿಸರದ ಒಟ್ಟು ಪರಿಚಯ ಹಾಗೂ ಶಿವಮೊಗ್ಗ ಜಿಲ್ಲೆಯ ಭೌಗೋಳಿಕ ಹಿನ್ನೆಲೆ ಸ್ಥಳನಾಮ, ಪದನಿಷ್ಪತ್ತಿಯನ್ನು ಐತಿಹಾಸಿಕ ಹಿನ್ನೆಲೆ ಕುರಿತು ವಿವೇಚಿಸಲಾಗಿದೆ. ಹಾಗೆಯೇ ಈ ಪರಿಸರದಲ್ಲಿ ಕಂಡುಬರುವ ಒಟ್ಟಾರೆ ಸಮುದಾಯಗಳು. ಆ ಸಮುದಾಯಗಳು ನಿರ್ವಹಿಸಿಕೊಂಡು ಬಂದಿರುವ ವೃತ್ತಿಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಶಿವಮೊಗ್ಗ ಚಾರಿತ್ರಿಕ ಹಿನ್ನೆಲೆ ಮತ್ತು ಮತಮಾನ್ಯಗಳ ಪರಂಪರೆಯನ್ನು ಗುರುತಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಹಾಗೂ ಧಾರ್ಮಿಕ ಜೀವನ, ಸಮುದಾಯದ ಮೂಲ, ಭೌಗೋಳಿಕ ಪರಿಸರ, ವಸತಿ ವ್ಯವಸ್ಥೆ, ಕುಟುಂಬ ವ್ಯವಸ್ಥೆ, ವಿವಾಹ ಪದ್ಧತಿ, ನ್ಯಾಯ ಪದ್ಧತಿ, ಆಹಾರ ಪದ್ಧತಿ, ಉಡುಗೆ-ತೊಡುಗೆ, ವೃತ್ತಿ, ಕ್ರೀಡೆಗಳು, ವೈದ್ಯ ವಿದ್ಯೆ, ಕಲೆ ಮತ್ತು ಕಲಾವಿದರು ಹಾಗೂ ಧರ್ಮ ಮತ್ತು ಧಾರ್ಮಿಕತೆ ಯ ಬಗ್ಗೆ ಕುರಿತು ಚರ್ಚಿಸಲಾಗಿದೆ,

ಅಧ್ಯಾಯ ನಾಲ್ಕರಲ್ಲಿ ಸಮುದಾಯದ ಆಚರಣೆಗಳ ಜೊತೆಗೆ ನಂಬಿಕೆ, ವಿಧಿ ನಿಷೇಧ ಹಾಗೂ ಹರಕೆಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಬಾಹುಸಾರ ಕ್ಷತ್ರಿಯ ಸಮುದಾಯದ ಜನಪದ ಸಾಹಿತ್ಯ ಕುರಿತಾದ ಜನಪದ ಹಾಡು, ಕಥೆ, ಕುಣಿತ, ಕಲೆ, ಒಗಟು, ಒಡಪು, ಗಾದೆ, ಮುಂತಾದವುಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ಈ ಜನಪದ ಸಾಹಿತ್ಯದಲ್ಲಿ ಅವರ ಜೀವನಕ್ಕೆ ಸಂಬಂಧಪಟ್ಟಂತೆ ಇರುವ ಅಂಶಗಳನ್ನು ಆರಿಸಿಕೊಳ್ಳಲಾಗಿದೆ.

ಅಧ್ಯಾಯ ಆರರಲ್ಲಿ ಸಮುದಾಯದವರ ಭಾಷೆ ಮತ್ತು ಸಮುದಾಯವು ನಡೆದು ಬಂದ ರೀತಿನೀತಿಗಳನ್ನು ಶಿಷ್ಟ ಸಾಹಿತ್ಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಂಟರಲ್ಲಿ ಸಮುದಾಯದ ಸಮಕಾಲೀನ ಅಚರಣೆಗಳು, ಸಂಪ್ರದಾಯಗಳು, ರೂಢಿಗಳು ಹಾಗೂ ಸಮುದಾಯದ ಇತ್ತೀಚಿನ ಬೆಳವಣಿಗೆಗಳನ್ನು ವಿವರಿಸಲಾಗಿದೆ.

ಅಧ್ಯಾಯ ಎಂಟು ಸಮಾರೋಪವಾಗಿದ್ದು , ಪ್ರತಿಬಂಧದ ಕೊನೆಯ ಭಾಗವಾಗಿದೆ. ಇಲ್ಲಿ ಅಧ್ಯಯನದುದ್ದಕ್ಕೂ ಕಂಡುಕೊಂಡ ಫಲಿತಗಳನ್ನು, ಪದಕೋಶ, ವಕ್ತೃವಿವರ, ಪರಾಮರ್ಶನ ಗ್ರಂಥಗಳನ್ನು ಸೂಚಿಸಲಾಗಿದೆ.

**ಅಧ್ಯಯನದ ಫಲಿತಗಳು**

ಸಮುದಾಯದ ಸಾಮಾಜಿಕ ಸಂಘಟನೆಯಿಂದಾಗಿ ಸಮಾಜವು ಇಂದು ಪ್ರಗತಿಯ ಪಥದತ್ತ ಸಾಗುತ್ತಿರುವುದರಿಂದ, ವಿದ್ಯಾವಂತ ಯುವಕರು, ಕೆಲವು ಆಸಕ್ತಿಯುಳ್ಳ ಯುವಕರು, ಸಮಾಜವು ಮುಂದುವರೆದು ಪ್ರಗತಿ ಸಾಧಿಸಲು ಶಿಕ್ಷಣವಂತರಾಗಿ ಮುಂದೆ ಬರುವಲ್ಲಿ ಪ್ರಯತ್ನಿಸುತ್ತಿದ್ದಾರೆ.

ಸಾಮಾಜಿಕ ಸಂಘಟನೆಯಲ್ಲಿ ಪ್ರಮುಖವಾದ ಇನ್ನೊಂದು ಅಂಶ ಎಂದರೆ 'ಕುಟುಂಬ' ಇದು ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಒಳಗೊಂಡು ಎಲ್ಲ ಸಮಾಜಗಳಲ್ಲಿ ಕಂಡುಬರುತ್ತದೆ. ಪ್ರಸ್ತುತ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ 'ಪಿತೃ ಪ್ರಧಾನ' ಕುಟುಂಬವು ಹೆಚ್ಚಾಗಿ ಕಂಡುಬರುತ್ತದೆ. ಮಾತೃ ಪ್ರಧಾನ ಕುಟುಂಬವು ಇವರಲ್ಲಿ ಇರುವುದಿಲ್ಲ. ಆದ ಕಾರಣ ತಂದೆಯೇ ಮುಖ್ಯಸ್ಥನಾಗಿರುವುದು ಕಂಡುಬರುತ್ತದೆ.

ಧಾರ್ಮಿಕ ಸಂಘಟನೆಯಲ್ಲಿರುವ ಪ್ರಮುಖವಾದ ಅಂಶ 'ಸಂಸ್ಕಾರ' ಪದ್ಧತಿ. ಇದು ಎಲ್ಲ ವ್ಯವಸ್ಥಿತ ಸಮಾಜದಲ್ಲಿ ಕಾಣಸಿಗುವ ಒಂದು ನಿರಂತರ ವಿಧಿ ವಿಧಾನ. ಇದನ್ನು ಅನೇಕ ವಿಧದಲ್ಲಿ ಬಳಸುತ್ತಾರೆ. ಹುಟ್ಟಿನಿಂದ ಹಿಡಿದು ಮಸಣದವರೆಗೆ 'ಸಂಸ್ಕಾರ'ವನ್ನು ಎಲ್ಲ ಸಮಾಜದಲ್ಲಿ ಆಚರಿಸುವುದು ಕಂಡು ಬರುತ್ತದೆ. ಸಂಸ್ಕಾರವು ವ್ಯಕ್ತಿಗಳನ್ನು ಪವಿತ್ರಗೊಳಿಸುವ ಕ್ರಿಯಾ ವಿಧಿಯೆಂದು ನಂಬುತ್ತಾರೆ.

ಆದುದರಿಂದ ಈ ಸಂಸ್ಕಾರವು ಎಲ್ಲ ಸಮಾಜಗಳಲ್ಲಿ ಕಂಡುಬಂದಂತೆ ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ಇಂದಿಗೂ ಇವರು ಜನನದಿಂದ ಹಿಡಿದು ಮರಣದವರೆಗೆ ವಿಧಿ-ವಿಧಾನದ 'ಸಂಸ್ಕಾರ' ಕಾರ್ಯವನ್ನು ಅಚರಿಸುತ್ತಾರೆ. ಅದೇ ರೀತಿಯಾಗಿ ಈ ಸಮಾಜದವರು ಧಾರ್ಮಿಕವಾಗಿ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಆಯಾ ಕಾಲಮಾನಕ್ಕೆ ತಕ್ಕ ಹಾಗೆ ತಿಥಿ, ನಕ್ಷತ್ರ, ಮಾಸಗಳಲ್ಲಿ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯವು ಯಾವುದೇ ಹಬ್ಬ ಹರಿದಿನ, ಜಾತ್ರೆ, ಉತ್ಸವ ಮತ್ತು ಗ್ರಾಮ ಮಟ್ಟದಲ್ಲಿ ನಡೆಯುವಂತಹ ಎಲ್ಲಾ ಧಾರ್ಮಿಕ ಆಚರಣೆಯನ್ನು ನಡೆಸುವ ಪೂರ್ವದಲ್ಲಿ ಈ ಸಮುದಾಯದ ಹಿರಿಯರೆಲ್ಲಾ ಒಂದೆಡೆ ಸೇರಿ ಇದನ್ನು ಹೇಗೆ ಆಚರಿಸಬೇಕೆಂದು ಚರ್ಚಿಸಿ ಪರಾಮರ್ಶಿಸಿ ತೀರ್ಮಾನ ಕೈಗೊಂಡು ಎಲ್ಲರೂ ಪರಸ್ಪರ ಕೆಲಸ ಕಾರ್ಯಗಳನ್ನು ಹಂಚಿಕೊಂಡು ಮಾಡುವ ರೂಢಿ ಇವರಲ್ಲಿದೆ. ಈ ರೀತಿಯ ಆಚರಣೆಯ ಸಂದರ್ಭದಲ್ಲಿ ತಮ್ಮ ಸಮುದಾಯದಲ್ಲಿ ಕಂಡು ಬರುವ ತಾರತಮ್ಯವಾಗಲೀ ಅಥವಾ ಮೇಲು ಕೀಳು ಎಂಬ ಭಾವನೆಯಾಗಲೀ ಈ ರೀತಿಯ ಆಚರಣೆಗೆ ಅಡ್ಡಿ ಪಡಿಸುವುದಿಲ್ಲವಾದ್ದರಿಂದ ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯರು ಇವುಗಳನ್ನು ಗಣನೆಗೆ ತೆಗೆದುಕೊಳ್ಳದೆ ತಮ್ಮ ಸಮಾಜದ ಒಳಿತಿಗಾಗಿ ಎಲ್ಲಾ ಹಿರಿಯರ ಮಾರ್ಗದರ್ಶನದಂತೆ ನಡೆದು ತಮ್ಮ ಶ್ರದ್ಧೆ ಭಕ್ತಿಯಿಂದ ಧಾರ್ಮಿಕ ಆಚರಣೆಗಳನ್ನು ನಡೆಸುತ್ತಾರೆ. ಅಷ್ಟೇ ಅಲ್ಲದೆ ಇಂತಹ ಸಂದರ್ಭಗಳಲ್ಲಿ ನಾವೆಲ್ಲರೂ ಒಂದೇ ಎಂಬ ಭಾವನೆ ಬರುವಂತೆ ನಡೆದುಕೊಂಡು ತಮ್ಮ ಏಕತೆ ಮತ್ತು ಒಗ್ಗಟ್ಟನ್ನು ಪ್ರದರ್ಶಿಸುತ್ತಾರೆ.

ಜೀವನದ ನಿರ್ವಹಣೆಗೆ ಅನೇಕ ವೃತ್ತಿಗಳನ್ನು ಇವರು ಅವಲಂಬಿಸಬೇಕಾಗುತ್ತದೆ. ಸಾಂಪ್ರದಾಯಿಕ, ಸಾಮಾಜಿಕ ಕಟ್ಟುಪಾಡು ಮತ್ತು ಕುಟುಂಬದಲ್ಲಿನ ನಿರ್ಬಂಧನೆಗಳನ್ನು ಪಾಲಿಸಬೇಕಾಗುತ್ತದೆ. ಕಷ್ಟ ಸಹಿಷ್ಣುತೆ, ನಂಜಿಕೆ ಉಳ್ಳವರು, ಅಲ್ಪ ತೃಪ್ತಿ ಬದಲಾವಣೆಗೆ ಹೊಂದಿಕೊಳ್ಳುವ ಮನೋವೃತ್ತಿಯು ಇವರಲ್ಲಿ ಬೆಳೆಯುತ್ತಿದೆ.

ಕಾಟಿಕ್ ಸಮುದಾಯದೊಂದಿಗೆ ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಸಮೀಕರಿಸಿ ನೋಡಿದರೆ ಕ್ಷತ್ರಿಯ ಸಮುದಾಯದವರಲ್ಲಿ ರಾಜಕೀಯ, ಸಾಮಾಜಿಕ, ಹಾಗೂ ಧಾರ್ಮಿಕ ರಂಗದಲ್ಲಿ ಪ್ರಗತಿಯತ್ತ ಸಾಗುವುದನ್ನು ಕಾಣುತ್ತೇವೆ, ಆದರೆ ಆರ್ಥಿಕವಾಗಿ ನೋಡಿದರೆ ಈ ಎರಡೂ ಸಮುದಾಯದಗಳೂ ಹಿಂದುಳಿದ ಸಮುದಾಯವಾಗಿವೆಯೆಂದು ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಲಾಗಿದೆ.

ಕಲಿತ ಯುವಶಕ್ತಿ ಕೇವಲ ನೌಕರಿಗಾಗಿ ಹಂಬಲಿಸದೆ ಸಮಾಜದಲ್ಲಿ ಬೇರೂರಿರುವ ತಾರತಮ್ಯವನ್ನು ನಿವಾರಿಸುವ ನಿಟ್ಟಿನಲ್ಲಿ ಹಿಂದುಳಿದ ಜಾತಿ-ವರ್ಗಗಳ ಪ್ರಗತಿಗೆ ಹೋರಾಡಲು ವಿಧಾಯಕ ಮತ್ತು ರಚನಾತ್ಮಕ ಕಾರ್ಯದಲ್ಲಿ ತೊಡಗಬೇಕು. ಇತ್ತೀಚಿನ ದಿನಗಳಲ್ಲಿ ರಚನೆಯಾಗುತ್ತಿರುವ

ಸಾಹಿತ್ಯ ಜನತೆಯ ಹೋರಾಟಕ್ಕೆ ಪೂರಕವಾಗಿರಬೇಕು. ಹೆಚ್ಚಾಗಿ ಕಾವ್ಯಗಳು ಜನರಿಗ ಹೆಚ್ಚುಹೆಚ್ಚು ಹತ್ತಿರವಾಗುವುದರಿಂದ ಅವು ಹೋರಾಟಕ್ಕೆ ಪ್ರೇರಕಶಕ್ತಿಯಾಗಿ ಕೆಲಸ ಮಾಡಬೇಕು. ಸಮಾಜದ ಬುದ್ಧಿಜೀವಿಗಳು ಧಾರ್ಮಿಕ ಮುಖಂಡರು ತಮ್ಮತಮ್ಮ ಜಾತಿಯಲ್ಲಿನ ಕೊಳೆಯನ್ನು ತೊಳೆಯಲು ಪ್ರಯತ್ನಿಸಬೇಕು. ತನ್ಮೂಲಕ ಜಾತಿ, ಧರ್ಮದಿಂದ ದೂರ ಉಳಿದು ಲೋಕದ ಒಳಿತಿಗಾಗಿ ಶ್ರಮಿಸಬೇಕು.

ಸರ್ವರಿಗೂ ಶಿಕ್ಷಣ ಸಾಧ್ಯವಾಗುವ ಹಿಂದುಳಿದವರ ಶಿಕ್ಷಣ ಸೌಲಭ್ಯಕ್ಕೆ ವಿಶಿಷ್ಟವಾದ ವ್ಯವಸ್ಥೆಯನ್ನು ಹೊಂದುವ ರಾಜಕೀಯ ನೀತಿ ಸಾಧ್ಯವಾಗಬೇಕು. ಕೆಲವು ರಾಜಕೀಯ ಪಕ್ಷಗಳು ಹೆಚ್ಚು ಸಕ್ರಿಯವಾಗಿ ವರ್ಗಹೋರಾಟದಲ್ಲೇ ನೇತೃತ್ವ ವಹಿಸುತ್ತವೆ. ಆದರೆ ಅದರಲ್ಲಿಯೂ ಕೆಲವರು ಪಕ್ಷದ ಹೆಸರನ್ನು ಹೇಳಿಕೊಂಡು ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವವರಿದ್ದಾರೆ. ಅಂತಹವರನ್ನು ಪಕ್ಷದಿಂದ ಹೊರಗಟ್ಟಿ ಪಕ್ಷದ ತತ್ವ ಸಿದ್ಧಾಂತವನ್ನು ಅನುಸರಿಸುವಂತಹವರನ್ನು ಇಟ್ಟುಕೊಳ್ಳಬೇಕು. ಬಂಡವಾಳಶಾಹಿಯ ಖಾಸಗಿ ಸೊತ್ತಿನ ಒಡೆತನವನ್ನು ರದ್ದುಗೊಳಿಸಿದಾಗ ಕೂಲಿಕಾರ ವರ್ಗದ ಶೋಷಣೆ ಅಂತ್ಯವಾಗುತ್ತದೆ. ಅದರೊಂದಿಗೆ ಸಮಾಜದೊಳಗಿನ ಮಾನವ ಸಂಬಂಧಗಳಲ್ಲಿರುವ ವಿಷಮತೆ ಅಥವಾ ಸಂಘರ್ಷಾವಸ್ಥೆ ಕೊನೆಗಾಣುತ್ತದೆ. ದುಡಿಮೆಗಾರ ಅನುಭವಿಸುವ ಪರಕೀಯತೆಯ ಭಾವನೆ ತೊಲಗುತ್ತದೆ. ತಾನು ಸಮಾಜದಲ್ಲಿ ಜಾಗವಿಲ್ಲವೆಂಬ ಮನೋವೈಕಲ್ಯದಿಂದ ಯಾವ ಮನುಷ್ಯನಾದರೂ ನೊಂದುಕೊಳ್ಳುವ ಸ್ಥಿತಿ ದೂರವಾಗುತ್ತದೆ. ಹಾಗಾದಾಗ ಮಾತ್ರ ಮಾನವನ ವ್ಯಕ್ತಿತ್ವ ಮತ್ತು ಸಾಮರ್ಥ್ಯ ಅಭಾದಿತವಾಗಿಯೂ, ಪರಿಪೂರ್ಣವಾಗಿಯೂ ವಿಕಾಸಹೊಂದುತ್ತವೆ. ಸಮಾಜದಲ್ಲಿ ಶೋಷಣೆಗೆ ಒಳಗಾಗಿರುವ ಹೆಣ್ಣು ಅಭಾದಿತವಾಗಿಯೂ, ಪರಿಪೂರ್ಣವಾಗಿಯೂ ವಿಕಾಸಹೊಂದುತ್ತವೆ. ಸಮಾಜದಲ್ಲಿ ಶೋಷಣೆಗೆ ಒಳಗಾಗಿರುವ ಹೆಣ್ಣು ಆರ್ಥಿಕವಾಗಿ ಸಧೃಡವಾಗಲು ಎಲ್ಲಾ ಕ್ಷೇತ್ರಗಳಲ್ಲೂ ಗಂಡಿಗೆ ಸಮನಾಗಿ ಕೆಲಸಗಳನ್ನು ಹಳಿಸುವ ಹಾಗಾಗಬೇಕು ಹಾಗೂ ಶೇಕಡಾ ೫೦:೫೦ ಅನುಪಾತದಲ್ಲಿ ಸರ್ಕಾರಿ ಕೆಲಸಗಳಲ್ಲಿ ಮಹಿಳೆಗೆ ಅವಕಾಶಮಾಡಿಕೊಡಬೇಕು.

ಸಮಾಜದಲ್ಲಿ ಸಂಪತ್ತು ಸಮಸ್ತರಿಗೆ ಹಂಚಿಹೋಗುವಂತೆ ನಿಖರವಾದ ಕಾರ್ಯಕ್ರಮ ಆಳುವ ಸರ್ಕಾರ ಹಾಕಿಕೊಳ್ಳಬೇಕು. ಅಮರ್ತ್ಯಸೇನ್‌ರವರ ಪ್ರಕಾರ ಸಂಪತ್ತಿನ ಸಂಗ್ರಹ ಒಂದೇ ಕಡೆ ಅಪಾರವಾದಾಗ, ಆ ಹೆಚ್ಚುವರಿ ಸಂಪತ್ತಿನಿಂದ ಆ ವ್ಯಕ್ತಿಗೆ ಒದಗುವ ತುಷ್ಟಿಗುಣ ಕಡಿಮೆಯಾಗುತ್ತದೆ. ಅಂದಮೇಲೆ ತುಷ್ಟಿಗುಣ ಕಡಿಮೆಯಿರುವ ಸಂಪತ್ತಿನ ಭಾಗವನ್ನು ಸದರಿ ವ್ಯಕ್ತಿಯಿಂದ ಪಡೆದುಕೊಂಡು ಸಂಪತ್ತು ಕಡಿಮೆ ಇರುವ ವ್ಯಕ್ತಿಗಳಿಗೆ ಹಂಚುವುದರಿಂದ ತುಷ್ಟಿಗುಣವನ್ನು ಗರಿಷ್ಟೀಕರಿಸಿಕೊಳ್ಳಬಹುದು. ಈ ಬಗೆಯ ಸಂಪತ್ತಿನ ವರ್ಗಾವಣೆಯಿಂದ ಸಂಪತ್ತನ್ನು ಕಳೆದುಕೊಂಡ ವ್ಯಕ್ತಿಯ ತುಷ್ಟಿಗುಣ ಕಡಿಮೆಯಾಗುವುದಿಲ್ಲ. ಈ ದೇಶದ ಶೋಷಿತರು ಸಾಮಾನ್ಯವಾಗಿ ಅಜ್ಞಾನವೇ ಹಡೆದಂತೆ ಇರುವವರು, ಆದ್ದರಿಂದ ಅವರು ತಮ್ಮ ದುಸ್ಥಿತಿಗೆ ನಿಜಕ್ಕೂ ಶೋಷಣೆ ಮಾಡಿರುವವರನ್ನು ಬಿಟ್ಟು ದೇವರನ್ನೇ ಆರೋಪಿಸುತ್ತಾರೆ. ವಿಧಿಯ ಕೈವಾಡ ಎನ್ನುತ್ತಾರೆ. ಶೋಷಣೆ ಮಾಡಿದವನು ಪಾರಾಗುತ್ತಾನೆ,

ಸುಖವಾಗಿರುತ್ತಾನೆ, ಮತ್ತಷ್ಟು ಭದ್ರವಾಗುತ್ತಾನೆ. ಶೋಷಿತರು ಮತ್ತಷ್ಟು ಶೋಷಣೆಗೆ ಈಡಾಗುತ್ತಾ ಅದೇ ಬದುಕಾಗುತ್ತಾ, ಕಾಲ ತಳ್ಳಬೇಕಾಗುತ್ತದೆ. ಇದರಿಂದ ಶೋಷಿತರು ತಮ್ಮ ನಿಜವಾದ ಶೋಷಕನನ್ನು ಗುರುತಿಸಿಕೊಳ್ಳದೇ ಹೋಗುವ ಸಂಭವ ಹೆಚ್ಚು. ಆಗ ಈ ಪರಿಸ್ಥಿತಿ ಶೋಷಕರಿಗೆ ಅನುಕೂಲವಾಗಿ ಪರಿಣಮಿಸುತ್ತದೆ.

ಶೋಷಣೆ ತಪ್ಪಿಸುವ ಹೊಸ ರಾಜಕೀಯ ಸ್ವರೂಪದ ಹುಟ್ಟುವಿಕೆಯಲ್ಲಿ ಶೋಷಿತರೇ ಪ್ರಮುಖ ಪಾತ್ರವಾಗಬೇಕು. ಬಡಸಮುದಾಯವನ್ನು ಪ್ರತಿನಿಧಿಸುವ ಸಂಘಟನೆ, ಆ ಮುಖಾಂತರ ರೂಪುಗೊಳ್ಳುವ ನಾಯಕತ್ವಗಳು ಇಂಥ ಪಾತ್ರ ನಿರ್ವಹಣೆಯ ಪ್ರಮುಖ ಅಂಗ. ಒಟ್ಟಿನಲ್ಲಿ ಶೋಷಣೆಯನ್ನು ಮೆಟ್ಟುವ ಸಮಾಜದ ಸ್ವರೂಪಕ್ಕಾಗಿ ಪ್ರಾಮಾಣಿಕ ಪ್ರಯತ್ನ ಮಾಡಬೇಕು.

ಸಮಾಜದಲ್ಲಿ ಪ್ರಭಾವಶಾಲಿಯಾಗಿರುವ ಸಮೂಹ ಮಾಧ್ಯಮಗಳು ಸಮಾನತೆಯನ್ನು ಸಾರುವ ನಿಟ್ಟಿನಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ತನ್ಮೂಲಕ ಆರ್ಥಿಕ ಸಂಪಾದನೆಯನ್ನು ಸಮನಾಗಿ ಹಂಚಿಕೊಳ್ಳಲು ಸಿದ್ಧನಾಗಬೇಕು. ದಡ್ಡನೊಬ್ಬನನ್ನು, ದುರ್ಬಲನೊಬ್ಬನನ್ನು, ಅಸಂಘಟಿತನೊಬ್ಬನನ್ನು ಭೂಮಿಗೆ ಒಡೆಯನಾದ ದೇವರು ರಕ್ಷಿಸಲಾರ, ರಕ್ಷಣೆ ಮಾಡಿಕೊಳ್ಳುವವನಿಗೆ ತನ್ನತನ, ಅಂದರೆ ತನ್ನ ಶಕ್ತಿ ಮತ್ತು ವ್ಯಕ್ತಿತ್ವದ ಬಗ್ಗೆ ದೃಢವಾದ ನಂಬಿಕೆ ಇರಬೇಕು ತಮ್ಮನ್ನು ಸುಲಿಯುವವರನ್ನು ದೂರ ಇಡಬೇಕು. ಸಮಾಜದ ಕೆಳಸ್ತರದಲ್ಲಿರುವ ದಲಿತರು ತಮ್ಮ ಮೇಲೆ ನಡೆಯುವ ದೌರ್ಜನ್ಯವನ್ನು ತೆಗೆದೊಗೆಯಲು ಶಕ್ತವಾದರೆ ಸಮಾಜದ ವಿಮೋಚನೆಗೆ ಕಾರಣವಾಗುವರು.

ಎಲ್ಲ ಜಾತಿಯಲ್ಲಿಯ ಬಡವರನ್ನು ಒಂದೆಡೆ ತರುವ ವ್ಯಾಪಕವಾದ ಕಾರ್ಯಕ್ರಮ ಜಾರಿಗೆ ತರಬೇಕು. ಎಲ್ಲ ಜಾತಿಯ ಬಡವರು ತಾವು ಒಂದೆಂಬ ಭಾವನೆಯಿಂದ ಒಂದು ನೆಲೆಗೆ ಬರಬೇಕು. ಈ ಹೋರಾಟ ಐತಿಹಾಸಿಕ ಬೆಳವಣಿಗೆಯ ಮೂರ್ತರೂಪವಾಗುತ್ತದೆ. ಚರಿತ್ರೆಯಲ್ಲಿ ನಡೆದ ಜಾತಿಹೋರಾಟ ಸಹ ಅಂತರಂಗಿಕವಾಗಿ ವರ್ಗ ಹೋರಾಟವೇ ಆಗಿದೆ.

ಒಂದು ಜನ ಸಮುದಾಯದ ನಂಬಿಕೆ, ಆಚರಣೆ, ಆದರ್ಶ, ಮೌಲ್ಯಗಳು ನ್ಯಾಯ ನಿರ್ಣಯಗಳ ಪದ್ದತಿಗಳನ್ನು ರೂಪಿಸುತ್ತವೆ. ಈ ನ್ಯಾಯ ಪದ್ಧತಿ ಕ್ರಮವು ಬುಡಕಟ್ಟುಗಳಲ್ಲಿ ತುಂಬಾ ಗೌರವ ಮತ್ತು ನಿಷ್ಠೆಯಿಂದ ನಡೆಯಲ್ಪಡುತ್ತದೆ.

ಸರಕಾರವು ರಚಿಸಿದ ನ್ಯಾಯವ್ಯವಸ್ಥೆಗಿಂತ ಹೆಚ್ಚಿನ ಮಹತ್ವವನ್ನು ಈ ಸಮುದಾಯಗಳ ನ್ಯಾಯವ್ಯವಸ್ಥೆ ಹೊಂದಿರುತ್ತದೆ. ಇತರ ಸಮುದಾಯಗಳಲ್ಲಿಯಂತೆ ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ, ನ್ಯಾಯ ಪದ್ಧತಿಯು ತನ್ನದೇ ಆದ ಮಹತ್ವವನ್ನು ಹೊಂದಿದೆ. ಬಾಹುಸಾರ ಕ್ಷತ್ರಿಯ ಸಮುದಾಯದಲ್ಲಿ ನ್ಯಾಯತೀರ್ಮಾನ ಮಾಡುವ ಒಂದು ಗುಂಪಿಗೆ ಅಥವಾ ಆ ಸದಸ್ಯರಿಗೆ ದೈವದವರು

ಎಂದು, ಹಿರಿಯರು ಎಂದು, ಪಂಚಾಯ್ತಿ ಕಟ್ಟೆಯವರು ಎಂದು ಕರೆಯುತ್ತಾರೆ. ಆಪಾದಿತ ವ್ಯಕ್ತಿಯು ಮಾಡಿದ ಪ್ರಮಾದಕ್ಕನುಗುಣವಾಗಿ ತೀರ್ಪು ನಿರ್ಧರಿತವಾಗುತ್ತದೆ.

ನಮ್ಮ ಬಹುಪಾಲು ಹಳ್ಳಿಗಳನ್ನು ಆಳುವ ವರ್ಗ ವರ್ಣ ವ್ಯವಸ್ಥೆ ಜನಪದ ನ್ಯಾಯ ಸಂದರ್ಭವನ್ನು ವ್ಯಾಪಿಸಿದಂತೆ, ಸಾಮಾನ್ಯವಾಗಿ ಉಚ್ಚ ಕುಲದವರು, ಶ್ರೀಮಂತರು, ಇಲ್ಲಿ ಹಿರಿಯರೆಂಬುದು ಸತ್ಯ. ಮದುವೆ, ಮುಂಜಿಗಳಲ್ಲಿ ಅಣ್ಣ ತಮ್ಮಂದಿರು ಬೇರೆಯಾಗುವಲ್ಲಿ ಇವರು ಬೇಕು. ಮನೆಯ ಜಾಗದ ಜಗಳ, ಆಸ್ತಿಯ ಜಗಳ, ದುಡ್ಡು ಬಂಗಾರದ ಜಗಳ ಎಲ್ಲವನ್ನೂ ಈ ಹಿರಿಯರೇ ಬಗೆಹರಿಸುತ್ತಾರೆ. ಒಂದರ್ಥದಲ್ಲಿ ಇವರುಗಳು ಅಧಿಕೃತ ನ್ಯಾಯಾಧೀಶರಾಗಿ ಕೆಲಸಮಾಡುತ್ತಾರೆ.

ಈ ಸಮುದಾಯದವರ ಮೂಲವೃತ್ತಿ ಇಂದಿಗೂ ಆಧುನಿಕ ರೀತಿಯಲ್ಲಿ ಮುಂದುವರಿಸಿಕೊಂಡು ಬಂದಿರುವುದನ್ನು ಈ ಸಮುದಾಯದವರಲ್ಲಿ ಕಾಣುತ್ತೇವೆ. ಈ ವೃತ್ತಿಯಲ್ಲಿ ತೊಡಗಿಸುವುದರಿಂದ ಇತರೆ ಸಮುದಾಯಗಳೊಂದಿಗೆ ಸ್ನೇಹ ಸೌಹಾರ್ದತೆಯನ್ನು ಬೆಳೆಸಿಕೊಳ್ಳಲು ಉತ್ತಮ ಅವಕಾಶವೆಂದು ಈ ಸಮುದಾಯದ ಹಿರಿಯ ವ್ಯಕ್ತಿಗಳು ನುಡಿದಿದ್ದಾರೆ.

ಜ್ಞಾನ ಮಾನವನಷ್ಟೇ ಪ್ರಾಚೀನವಾದದ್ದು ಮತ್ತು ಮಾನವನೊಂದಿಗೆ ಹುಟ್ಟಿ ಬಂದಿರುವಂತಹದ್ದು ಈ ವೈದ್ಯಕೀಯ ಜ್ಞಾನ ಮಾನವನ ಪ್ರಯತ್ನಗಳು ಬೆಳೆದಂತಲ್ಲಾ ಬೆಳೆಯಿತು. ಈ ಪಾರಂಪಾರಿಕ ವೈದ್ಯಕೀಯ ಜ್ಞಾನ ಒಬ್ಬ ವ್ಯಕ್ತಿಯಿಂದಾಗಲೀ ಒಂದು ಸಮೂಹದಿಂದಾಗಲೀ ಬೆಳೆದು ಬಂದಿರುವಂತಹದ್ದಲ್ಲ. ಈ ಜ್ಞಾನಶಾಖೆಯ ಹಿಂದೆ ಹಲವಾರು ಆದಿವಾಸಿ ಸಮುದಾಯಗಳ ವಿಶಿಷ್ಟವಾದ ಅನುಭವಗಳು ಇವೆ. ಜಗತ್ತಿನ ವೈದ್ಯಕೀಯ ಪರಂಪರೆ ಇರುವ ವೈದ್ಯಪದ್ಧತಿ ಜಾಹುಸಾರ ಕ್ಷತ್ರಿಯ ಸಮುದಾಯದಲ್ಲೂ ಕಂಡುಬರುತ್ತದೆ. ಹಿಂದೆ ಇವರು ಹೆಚ್ಚು ಆರೋಗ್ಯವಂತರಾಗಿರಲು ಅವರು ಸೇವಿಸುತ್ತಿದ್ದ ಆಹಾರವೇ ಮೂಲ ಕಾರಣ. ಅನೇಕ ಜಾತಿಯ ಸೊಪ್ಪುಗಳು, ಹಣ್ಣು ಹಂಪಲಗಳನ್ನು, ಆಹಾರಕ್ಕಾಗಿ ಮತ್ತು ಔಷಧಿಗಳಿಗಾಗಿ ಬಳಸಲಾಗುತ್ತಿತ್ತು. ಅವರು ಬಳಸುತ್ತಿದ್ದ ಆಹಾರಗಳಲ್ಲಿ ಪೌಷ್ಟಿಕತೆಯ ಅಂಶವು ಇರುತ್ತಿತ್ತು. ಆಹಾರಕ್ಕೆ ಬಳಸುವ ಸಸ್ಯಗಳ ಬಗೆಗೆ ಸಂಪೂರ್ಣ ಜ್ಞಾನ ಇವರಿಗಿದೆ.

ರೋಗವು ಮಾನವನಷ್ಟೆ ಪ್ರಾಚೀನವಾದುದು. ತನ್ನ ದೇಹವನ್ನು ರಕ್ಷಿಸುವ ಹಾದಿಯಲ್ಲಿ ಹಲವಾರು ರೋಗ ರುಜಿನಗಳನ್ನು ಎದುರಿಸುತ್ತ ರೋಗಗಳನ್ನು ಹತ್ತಿಕ್ಕಬೇಕೆಂಬ ಫಲಿತದಲ್ಲಿ ಮಾನವನ ಹೋರಾಟ ಪ್ರಾರಂಭವಾಗುತ್ತದೆ. ಆಸ್ಪತ್ರೆಗಳ ಸೌಕರ್ಯಗಳು ದೊರೆಯದಿದ್ದರೂ ಅವರ ಅಪಾರ ಅನುಭವದಿಂದ ತಮ್ಮ ಸುತ್ತಮುತ್ತಲ ಪರಿಸರದಲ್ಲಿ ಸುಲಭವಾಗಿ ಸಿಗುವಂತಹ ಔಷಧಿಗಳನ್ನು ತಯಾರಿಸಿಕೊಂಡು ಕಾಯಿಲೆಗಳನ್ನು ಗುಣಪಡಿಸಿಕೊಳ್ಳುತ್ತಿದ್ದಾರೆ.

ಶಿವಮೊಗ್ಗ ನಗರದಲ್ಲಿ ಮತ್ತು ಶಿವಮೊಗ್ಗ ತಾಲ್ಲೂಕಿನಲ್ಲಿ ಈ ಸಮುದಾಯವರ ಅನೇಕ ಭಜನಾ ಮಂಡಳಿಗಳನ್ನು ನಾವು ನೋಡುತ್ತೇವೆ. ಭಜನಾ ಮಂಡಳಿಗಳು ಭಜನೆಯ ಮುಖಾಂತರ ಶಿವಮೊಗ್ಗ ನಗರದ ಜನರಿಗೆ ಆಧ್ಯಾತ್ಮಿಕ ರುಚಿಯನ್ನು ತೋರಿಸುತ್ತಾ ಮನರಂಜನೆಯನ್ನು ಒದಗಿಸುತ್ತಾ ಸಾಗುತ್ತಿದ್ದಾರೆ.

ಯಾವುದೇ ಒಬ್ಬ ವ್ಯಕ್ತಿಯು ಅಥವಾ ಒಂದು ಸಮುದಾಯದ ಜೀವನ ಮೌಲ್ಯವನ್ನು ನಿರ್ಧರಿಸುವಲ್ಲಿ ಅವನು ನಿರ್ವಹಿಸುವ ವೃತ್ತಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಸಮುದಾಯವು ಅನುಸರಿಸುತ್ತಿರುವ ಆರ್ಥಿಕ ಚಟುವಟಿಕೆಗಳು ಮಾನವನ ಶ್ರಮ ಸಂಪತ್ತಿನ ಬಳಕೆ ಸಂಪನ್ಮೂಲಗಳ ಪಾತ್ರ, ಜನಸಂಖ್ಯೆ, ಶಿಕ್ಷಣದ ಪಾತ್ರ, ಪ್ರಭಾವ, ಕೌಟುಂಬಿಕ ಜೀವನದ ಆಚರಣೆಗಳು, ಉದ್ಯೋಗಗಳ ಹಂಚಿಕೆಯಿಂದ ಬದಲಾಗುತ್ತಿರುವ ಸಮಾಜದಲ್ಲಿ ನಿರ್ಮಿಸಿಕೊಂಡಿರುವ ರೀತಿ–ನೀತಿ ತಿಳಿಯುವುದು ಅವಶ್ಯಕವಾಗಿದೆ. ಹೀಗೆ ಸಮುದಾಯದ ಜೀವನ ವಿಧಾನದಲ್ಲಿ ಆರ್ಥಿಕತೆ ಎಂಬುದು ತುಂಬಾ ಮಹತ್ವದ ಪಾತ್ರ ವಹಿಸುತ್ತದೆ. ಈ ಎಲ್ಲಾ ಬದಲಾವಣೆಗಳಿಂದ ಸಾಂಸ್ಕೃತಿಕ ಅಂಶಗಳಾದ ಸಾಮಾಜಿಕ, ರಾಜಕೀಯ, ಧಾರ್ಮಿಕ ರೀತಿ–ನೀತಿಗಳಲ್ಲಿನ ಬದಲಾವಣೆಗಳು ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ನಿರ್ಧಾರವಾಗುತ್ತದೆ.

ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಹಣವಂತ ಸಮುದಾಯಗಳಿಗೆ ಮಾತ್ರ ಅಧಿಕಾರ ಎಂಬ ಒಂದು ಅನುಶಾಸನ ಮೌಖಿಕ ಅರ್ಥವಂತಿಕೆಯಾಗಿ ಇಲ್ಲಿ ಉಳಿದುಕೊಂಡು ಬಂದಿದೆ. ಹೀಗಾಗಿ ಈ ಸಮುದಾಯದ ಜನಸಂಖ್ಯೆಯು ಕಡಿಮೆ ಇದ್ದು, ಆರ್ಥಿಕ ಪರಿಸ್ಥಿತಿಯು ಹೀನಾಯ ಪರಿಸ್ಥಿತಿಯಲ್ಲಿದೆ. ಇಂದಿನ ಪರಿಸ್ಥಿತಿಯಲ್ಲಿ ಯಾವುದೇ ಒಂದು ಸಮುದಾಯಕ್ಕೆ ಸೌಲಭ್ಯ ಸವಲತ್ತುಗಳು ಸಿಗಬೇಕಾದರೆ ಇವರು ತಮ್ಮ ಮತಗಳನ್ನು ಬಲಿಷ್ಠ ಜಾತಿಗಳಿಗೆ ಮಾರಬೇಕು. ಇಲ್ಲವೇ ಸರಕಾರವೇ ಇವರಿಗೆ ಕರುಣೆ ತೋರಬೇಕು. ಹಾಗಾದಾಗ ಮಾತ್ರ ಅಲ್ಪಸ್ವಲ್ಪ ಸೌಲಭ್ಯ ಸಿಗಲು ಸಾಧ್ಯವಾದೀತು.

ಖಡ್ಗ ಹಿಡಿದ ಕೈಗಳು ಪೆನ್ನು ಹಿಡಿಯಬೇಕು ಎನ್ನುವ ಸಮಷ್ಟಿ ಪ್ರಜ್ಞೆಯನ್ನು ಇವರಲ್ಲಿ ಮೂಡಿಸಬೇಕಾಗಿದೆ. ಸಹಸ್ರಾರು ವರ್ಷಗಳಿಂದಲೂ ಅತ್ಯಂತ ಉತ್ಸಾಹಿ ಸಮುದಾಯವೆಂದು ಪ್ರಖ್ಯಾತಿಯನ್ನು ಹೊಂದಿದ್ದು, ವೀರಜೀವನ ನಡೆಸಿ ಹುಲಿಯಾಗಿ ಚರಿತ್ರೆಯಲ್ಲಿ ಹೆಸರು ಮಾಡಿರುವ ನಮ್ಮ ಪೂರ್ವಜರು, ಶಿವಾಜಿ ಮಹಾರಾಜರ ಈ ನೆಲದಲ್ಲಿ ಬ್ರಿಟೀಷರಿಗೆ ಸಿಂಹ ಸ್ವಪ್ನವಾಗಿರುವುದನ್ನು ನೆನಪಿಸಿಕೊಳ್ಳುವ ಈ ಸಮುದಾಯ ಅಂತಹ ಧವಳ ಕೀರ್ತಿಗೆ ಕಳಂಕ ತರುವ ಕೆಲಸಕ್ಕೆ ಇಂದು ಕಾರಣರಾಗಿ ಸಿಂಹದ ಮರಿಗಳಾಗಿ ಹೊರಬರಲು ಪ್ರಯತ್ನಿಸುವುದಿಲ್ಲ ಎನ್ನುವ ಯೋಚನೆಯಲ್ಲಿ ಇವರಿಗೆ ಅಪಾರವಾದ ಬಡತನ ಕಾರಣವಾಗಿ ಕಾಡುತ್ತಿದೆ.

ನಾಗರೀಕತೆಯ ಪ್ರಭಾವದಿಂದಾಗಿ ಸ್ವಲ್ಪ ಸುಧಾರಿಸಿಕೊಳ್ಳುತ್ತಿರುವ ಸಮುದಾಯ ತನ್ನ ಮೂಲ ವೃತ್ತಿಯನ್ನು ಬದುಕಿನ ಅವಿಭಾಜ್ಯ ಅಂಗವೆಂದು ತಿಳಿದು ಕಾಲಕಳೆಯುತ್ತವೆ. ಇಂದು ತಮ್ಮ ಮಕ್ಕಳ

ಮುಂದಿನ ಭವಿಷ್ಯಕ್ಕಾಗಿ ಸರ್ಕಾರದಿಂದ ಸೌಲಭ್ಯಗಳನ್ನು ಪಡೆಯಲು ಮುಂದೆ ಬರಬೇಕಾಗಿದೆ. ವಿದ್ಯಾಭ್ಯಾಸಕ್ಕಾಗಿ ಮೀಸಲಾತಿಹಾಗೂ ವೃತ್ತಿಯಲ್ಲಿ ಪಾಲು ಪಡೆಯುವಲ್ಲಿ ಈ ಸಮುದಾಯಗಳು ಜಾಗೃತರಾಗಬೇಕು.

ಸ್ವಾತಂತ್ರ್ಯ ಹೋರಾಟಗಾರರಾಗಿಯೂ ದೇಶಕ್ಕೆ ಬಾಹುಸಾರ ಕ್ಷತ್ರಿಯ ಸಮುದಾಯದವರ ಸೇವೆ ಅಜರಾಮರವಾಗಿದೆ.

ಕೇವಲ ಬಾಹುಸಾರ ಕ್ಷತ್ರಿಯ ಜಯಂತಿ, ಸಭೆ, ಸಮಾರಂಭಗಳಷ್ಟೇ ಸಂಘಟನೆಯಲ್ಲಿ ಪ್ರಯೋಜನಕಾರಿಯಲ್ಲ ಎನ್ನುವ ತಿಳುವಳಿಕೆ ಇಂದು ಬರಬೇಕಾಗಿದೆ. ಆವೇಶಭರಿತವಾದ ಮಾತುಗಳಿಂದ ನ್ಯಾಯ ಸಿಗುವುದಿಲ್ಲ. ಸಮಾಜದ ಹಿರಿಯರು, ಮುಖಂಡರು ಈ ಕುರಿತು ಚಿಂತಿಸುವುದು ಅನಿವಾರ್ಯವಾಗಿದೆ.

ಇಡೀ ಪರಿಸರದ ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಕುರಿತು ಅಧ್ಯಯನಕ್ಕೆ ತೊಡಗಿದ ನಮಗೆ ಕ್ಷೇತ್ರಕಾರ್ಯದಿಂದ ತಿಳಿದು ಬರುವುದೇನೆಂದರೆ ರಾಜಕೀಯದಲ್ಲಿ ಇವರ ಪಾತ್ರ ಕೇವಲ ಹಣವಂತ ಮೇಲ್ಜಾತಿಯವರು ಹೇಳುವ ಪಕ್ಷ ಅಥವಾ ವ್ಯಕ್ತಿಗೆ ಮತಚಲಾಯಿಸುವ ಮಟ್ಟಕ್ಕೆ ಸೀಮಿತಗೊಂಡಿರುವುದಿಲ್ಲ. ಆಲೋಚಿಸಿ ಮತ ಚಲಾಯಿಸುವ ಶಕ್ತಿ ಇವರಲ್ಲಿದೆ. ಇನ್ನು ಈ ಸಮುದಾಯದಲ್ಲಿ ಹೆಚ್ಚಾಗಿ ಬಡತನ ತಲೆದೋರಿದ್ದು ಇವರ ಆರ್ಥಿಕ ಸ್ಥಿತಿಯು ಕೆಳಮಟ್ಟದಲ್ಲಿದೆ. ಇವರು ಸಮಾಜದಲ್ಲಿ ಮುಂದುವರೆಯಬೇಕಾದರೆ ಪ್ರಜ್ಞಾವಂತ ಮಾರ್ಗದರ್ಶಕರು, ರಾಜ್ಯ ಸರಕಾರದ ಅಧಿಕಾರದಲ್ಲಿರುವ ಇದೇ ಸಮುದಾಯದ ನಾಯಕರು ತಮ್ಮ ಕ್ಷೇತ್ರದ ಕಾರ್ಯವನ್ನಷ್ಟೇ ಅಲ್ಲದೆ ಅದರಾಚೆಯ ಸಮುದಾಯದವರ ಕುರಿತ ಚಿಂತನ-ಮಂಥನ ಮಾಡಿದಾಗ ಕೇಂದ್ರ ಸರಕಾರ ಮತ್ತು ಸ್ವಯಂ ಸೇವಾ ಸಂಘಗಳು ನಿಸ್ವಾರ್ಥವಾಗಿ ಕೆಲಸ ನಿರ್ವಹಿಸಿದಾಗ ಹಿಂದುಳಿದ ಸಮುದಾಯದೊಳಗೆ ಶಿಕ್ಷಣ ಪಡೆದವರು, ಹಿರಿಯರು, ಮುಖಂಡರು ತಿಳುವಳಿಕೆಯನ್ನು ನೀಡಬೇಕು. ಹಾಗಾದಾಗ ಅಭಿವೃದ್ಧಿ ಸಾಧ್ಯ.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದವರಲ್ಲಿ ಬೆಡಗು ಗೋತ್ರಗಳು ಕಂಡುಬರುತ್ತವೆ. ಅವು ಒಂದುಬಣದಿಂದ ಇನ್ನೊಂದು ಬಣದಲ್ಲಿ ಕೊಡುವುದಾಗಲಿ, ಕರೆಯುವುದಾಗಲಿ, ಅಥವಾ ಮದುವೆಯ ಸಮಯದಲ್ಲಿ ವಿಧುರರಿಗೆ ಉಡಿಕೆ ವಿವಾಹ ಪದ್ಧತಿಯ ಮೂಲಕ ಅವಕಾಶವಿದೆ. ಹಾಗೆ ವಿಧುರರನ್ನು ವಿವಾಹವಾಗಲು ಮಹಿಳೆಯರು ಮುಂದೆ ಬರುವುದಿಲ್ಲ. ಗಂಡನನ್ನು ಕಳೆದುಕೊಂಡು ಜೀವನಪರ್ಯಂತ ವಿಧವೆಯಾಗಿ ಇರುವುದು ಇಂದಿಗೂ ಈ ಸಮಾಜದಲ್ಲಿ ಕಂಡುಬರುತ್ತದೆ. ವಿಧವಾ ವಿವಾಹ ಈ ಸಮುದಾಯದಲ್ಲಿ ಜಾರಿಗೆ ಬರಬೇಕು.

ಶಿವಮೊಗ್ಗ ಜಿಲ್ಲೆಯ ಬಾಹುಸಾರ ಕ್ಷತ್ರಿಯ ಸಮುದಾಯದ ಸಾಮಾಜಿಕ ಸ್ಥಿತಿ–ಗತಿಗಳನ್ನು ಅರಿತಾಗ ಜಿಲ್ಲೆಯ ವ್ಯವಸ್ಥೆಯು ಸಂಕೀರ್ಣವಾಗಿ ಕಾಣುತ್ತದೆ. ಜಾತಿ, ಉಪಜಾತಿ, ಪಂಗಡ, ಒಳಪಂಗಡ, ಭಾಷೆ, ಧರ್ಮ, ಆಚರಣೆ, ನಂಬಿಕೆ, ಸಂಪ್ರದಾಯಗಳು ಈ ಸ್ಥಳದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಜಾತಿ, ಉಪಜಾತಿ, ಪಂಗಡ, ಒಳಪಂಗಡ ಈ ಎಲ್ಲವನ್ನೂ ಮೀರಿ ಬಾಹುಸಾರ ಕ್ಷತ್ರಿಯ ಸಮುದಾಯದ ಜನರೆಲ್ಲರೂ ಒಂದೇ ಎಂಬ ಭಾವನೆಯಿಂದ ಬದುಕಬೇಕು.

ಬಾಹುಸಾರ ಕ್ಷತ್ರಿಯ ಸಮುದಾಯದವರು ತಮ್ಮ ಪೂರ್ವಜರ ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ, ರೂಢಿಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಕಾಣಬಹುದು, ಜಾಗತೀಕರಣದ ಈ ಸಂದರ್ಭದಲ್ಲಿ ಬಾಹುಸಾರ ಕ್ಷತ್ರಿಯ ಸ್ತ್ರೀಯೂ ಕೂಡ ಪುರುಷನಂತೆ ಸರಿಸಮಾನವಾದ ಸ್ಥಾನಮಾನಗಳನ್ನು ಪಡೆಯಬೇಕು.

**ಅಧ್ಯಯನದಿಂದ ಕಂಡುಕೊಂಡ ಅಂಶಗಳು**

೧. ಪುರಾಣ ಮೂಲದ ಐತಿಹ್ಯಗಳು, ರಾಮಾಯಣದ ರಾಮ, ಸೀತೆಯರ ಕುರಿತಿರುವ ಐತಿಹ್ಯದ ಊರುಗಳು, ಹಾಗೆಯೇ ಮಹಾಭಾರತದ ಐತಿಹ್ಯಗಳು ಮುಖ್ಯವಾದುವಗಳು.
೨. ಈ ಪರಿಸರವು ಆಧುನಿಕತೆಯ ಕಡೆಗೆ ಮುಖಮಾಡಿದ್ದರೂ, ಇಲ್ಲಿ ಮೂಲ ಸಂಸ್ಕೃತಿಗೆ ಧಕ್ಕೆ ತರುವ ಕೆಲಸ ನಡೆಯುವುದಿಲ್ಲ. ಧಾರ್ಮಿಕ ಪರಂಪರೆ ಮುಂದುವರಿದುಕೊಂಡು ಬಂದಿದೆ.
೩. ಶಿವಮೊಗ್ಗ ಜಿಲ್ಲೆಯ ಸುತ್ತಮುತ್ತಲೂ ಹಳ್ಳಿಗಳಲ್ಲಿ ನಡೆಯುವ ಜಾತ್ರೆಗಳು, ಉತ್ಸವಗಳು, ಹಬ್ಬ ಹರಿದಿನಗಳು ಬಹಳಷ್ಟು ಅನ್ಯೋನತೆಯಿಂದ ಕೂಡಿದೆ.
೪. ಬಹಳಷ್ಟು ಸಂಖ್ಯೆಯಲ್ಲಿ ವಿಭಕ್ತ ಕುಟುಂಬಗಳು ಕಂಡು ಬಂದರೂ ತಮ್ಮ ಅನುಕೂಲಕ್ಕಾಗಿ ವಿರಳವಾಗಿ ಅವಿಭಕ್ತ ಕುಟುಂಬಗಳು ಹುಟ್ಟಿಕೊಂಡಿವೆ.
೫. ಸರಳ ವಿವಾಹ ಪದ್ಧತಿಯು ಎಲ್ಲೆಲ್ಲೂ ಕಂಡುಬರುತ್ತದೆ.
೬. ಪ್ರತಿ ಊರುಗಳಲ್ಲಿಯೂ ಆಂಜನೇಯನ ದೇವಸ್ಥಾನಗಳಿವೆ.
೭. ಇವರಲ್ಲಿ ಸಂಘಟನೆಗಳು ಹೆಚ್ಚು
೮. ದೇಶ ಸೇವೆಯ ಮನೋಭಾವ ಎದ್ದು ಕಾಣುತ್ತದೆ. ಬಹಳಷ್ಟು ಯುವಕರು ದೇಶಸೇವೆಯಲ್ಲಿ ತೊಡಗಿದ್ದಾರೆ.
೯. ಉಡುಗೆ ತೊಡುಗೆಗಳಲ್ಲಿ ಸಾಂಪ್ರದಾಯಿಕತೆ ಇದ್ದು, ಆಧುನಿಕತೆಗೆ ಒಗ್ಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.
೧೦. ವ್ಯವಸಾಯಗಾರರು, ದಂತ ವೈದ್ಯಕೀಯ ಕಾಲೇಜು, ಇಂಜಿನಿಯರಿಂಗ್ ಕಾಲೇಜು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಐ.ಟಿ.ಐ ಕಾಲೇಜುಗಳನ್ನು ಕಾಣಬಹುದಾಗಿದೆ.

೧೧. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯರಂಗದಲ್ಲಿ, ಧಾರ್ಮಿಕ ಕ್ಷೇತ್ರದಲ್ಲಿ ಪ್ರಗತಿಕಂಡುಬಂದರೂ ಆರ್ಥಿಕವಾಗಿ ಹಿಂದುಳಿದ ಸಮುದಾಯವಾಗಿದೆ.

೧೨. ಕಾಟಿಕ್ ಸಮುದಾಯದೊಂದಿಗೆ ಬಾಹುಸಾರ ಕ್ಷತ್ರಿಯ ಸಮುದಾಯವನ್ನು ಸಮೀಕರಿಸಿ ನೋಡಿದರೆ ಕ್ಷತ್ರಿಯ ಸಮುದಾಯದವರಲ್ಲಿ ರಾಜಕೀಯ, ಸಾಮಾಜಿಕ, ಹಾಗೂ ಧಾರ್ಮಿಕ ರಂಗದಲ್ಲಿ ಪ್ರಗತಿಯತ್ತ ಸಾಗುವುದನ್ನು ಕಾಣುತ್ತೇವೆ, ಆದರೆ ಆರ್ಥಿಕವಾಗಿ ನೋಡಿದರೆ ಈ ಎರಡೂ ಸಮುದಾಯಗಳೂ ಹಿಂದುಳಿದ ಸಮುದಾಯವಾಗಿವೆಯೆಂದು ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಲಾಗಿದೆ.

## ಅನುಬಂಧ ೧

## ಸಾಂಸ್ಕೃತಿಕ ಪದಕೋಶ

| ಕನ್ನಡ | ಮರಾಠಿ |
|---|---|
| ಅನ್ನ | ಭಾತ್ |
| ಅಮ್ಮ | ಮಾಯಿ |
| ಅಜ್ಜಿ | ಆಯೀ |
| ಅಕ್ಕ | ಅಕ್ಕ |
| ಅವಳು | ತಿನೇ |
| ಅತ್ತಿಗೆ | ಮಾಮಿ |
| ಅಕ್ಕಿ | ತಾಂದುಳ್ |
| ಊಟ | ಜವಣ್ |
| ಒಡವೆ | ವಸ್ತ್ರಾ |
| ಕಣ್ಣು | ದೊಳೆ |
| ಕತ್ತು | ಗರ್ದನ್ |
| ಕೂದಲು | ಕೇಸ್ |
| ಕಾಲುಂಗುರ | ಸೂತ್ |
| ಕೋಳಿ | ಕೋಮಡ್ |
| ಕೆಳಗೆ | ಖಾಲೇ |
| ಕಾಯಿ | ಕಾಯ್ |
| ಕುಪ್ಪಸ | ಜಾಕೀಟ |
| ಕುಂಕುಮ | ಕುಂಕು |
| ಕಸಬರಿಗೆ | ಜಣ್ಣಿ |
| ಕೂಡಿಸಿ | ಜಮುಂಗಾಲ್ |
| ಚಿಕ್ಕಮ್ಮ | ಮಾವಶಿ |
| ಚಂದ್ರ | ಚಾಂದ್ |
| ಜನರು | ಲೋಕ್ |
| ಅತ್ತೆ | ಸಾಸು |
| ತಂಗಿ | ಬೈಹಿನ್ |
| ತೊಟ್ಟಿಲು | ಪಣ್ಣಾ |
| ತಾಳಿ | ತಾಳಿ |
| ದೀಪ | ದಿವ್ವಾ |

| ದೊಡ್ಡಮ್ಮ | ಮಟ್ಟೆಮ್ಮ |
|---|---|
| ನಾದಿನಿ | ನಣಂದ್ |
| ನೀರು | ಪಾನಿ |
| ಬಾಳೆಹಣ್ಣು | ಕೇಳ್ |
| ಬೆನ್ನು | ಪಾಟ್ |
| ಬೆಲ್ಲ | ಗೂಳ್ |
| ಬೆಂಕಿ | ಇಸ್ತೋ |
| ಬೆಲೆ | ಮೌಲ್ |
| ಬ್ರಾಹ್ಮಣ | ಬಾಮಣ್ |
| ಮುಸ್ಲೀಂ | ತುರುಕ್ |
| ಬಂಗಾರ | ಸೋನಾ |
| ಬೆಳ್ಳಿ | ರುಪ್ಪ್ |
| ಬಳೆ | ಕಾಕನ್ |
| ಬಟ್ಟಲು | ವಾಟಿ |
| ಮುತ್ತಜ್ಜಿ | ಮುತ್ತಜ್ಜಿ |
| ಮಮ್ಮೊಗಳು | ನಾಥು |
| ಮದುವೆ | ಲಗನ್ |
| ಮನೆ | ಘರ್ |
| ಮಕ್ಕಳು | ಲೆಕರ್ |
| ಮೇಲೆ | ವರೆ |
| ಮುದ್ದೆ | ಗೋಳ |
| ಮೆಣಸಿನಕಾಯಿ | ಮಿರ್‌ಗುಂಡ್ |
| ಮೂಗು | ನಾಕ್ |
| ಮೆದುಳು | ಬೇಜಾ |
| ರಕ್ತ | ರಗತ್ |
| ಸೂಜಿ | ಸುಯಿ |
| ಸೀರೆ | ಲುಗಡ್ |
| ಸೊಸೆ | ಸೂನ್ |
| ಸಾಮಾನು | ಸಾಮಾನು |
| ಸಾರು | ಸಾರ್ |
| ಸಾಕು | ಪುರೆ |
| ಹುಡುಗ | ಪೋರಗ್ |

| ಹೊಟ್ಟೆ | ಪೋಟ್ |
|---|---|
| ಹಂದಿ | ಡುಕ್ಕರ್ |
| ಹಸು | ಗಾಯಿ |
| ಹಾಲು | ದೂದ್ |
| ಹಾವು | ಸಾಂಪ್ |
| ಹೆಣ್ಣುಮಕ್ಕಳು | ಬಾಯ್ ಕೋಪೋರ್‌ಗೀ |
| ಹಣೆ | ಕಪಾಳ್ |
| ಹಣ | ಪೈಸೆ |
| ಹೆಂಡತಿ | ಬಾಯಲ್ |
| ಹೂವು | ಫೂಲ್ |

## ಅನುಬಂಧ ೨

### ವಕ್ತೃಗಳ ವಿವರ

| ಕ್ರ.ಸಂ | ಹೆಸರು | ವಯಸ್ಸು | ಶಿಕ್ಷಣ | ವೃತ್ತಿ | ತಾಲ್ಲೂಕು |
|---|---|---|---|---|---|
| ೧ | ಡಾ. ಪುರುಷೋತ್ತಮ್ ರಂಗಧೋಳ್ | ೬೭ | M.B.B.S., D L O,M.S | ವೈದ್ಯರು | ಶಿವಮೊಗ್ಗ |
| ೨ | ರೋಹಿಣಿ ಪುರುಷೋತ್ತಮ್ | ೫೭ | B.A., | ಗೃಹಿಣಿ | ಶಿವಮೊಗ್ಗ |
| ೩ | ಡಾ.ಸಾತ್ವಕ್ ರಂಗಧೋಳ್ | ೩೬ | B.D.S.,M.S | ವೈದ್ಯರು | ಶಿವಮೊಗ್ಗ |
| ೪ | ಟಿ.ಜಿ.ಶ್ರೀಧರಮೂರ್ತಿ | ೭೦ | Graduate | ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು | ಶಿವಮೊಗ್ಗ |
| ೫ | ಆರ್. ಹನುಮಂತರಾವ್ | ೬೯ | PUC,GDC | ಸಹಕಾರ ಸಂಘದ ನಿವೃತ್ತ ಕಾರ್ಯದರ್ಶಿ | ಶಿವಮೊಗ್ಗ |
| ೬ | ಆರ್. ತುಕಾರಾಮರಾವ್ | ೫೮ | P.U.C | ತಬಲಾ ಕಲಾವಿದರು, ಟೈಲರ್ | ಶಿವಮೊಗ್ಗ |
| ೧೦ | ವಿದ್ಯಾ.ಪಿ. ರಂಗಧೋಳ್ | ೨೫ | M.A.,B.Ed., | ಉಪನ್ಯಾಸಕಿ | ಶಿವಮೊಗ್ಗ |
| ೧೧ | ರಾಘವೇಂದ್ರ ರಂಗಧೋಳ್ | ೨೭ | P.U.C | ದ್ವಿತೀಯ ದರ್ಜೆ ಸಹಾಯಕರು | ಶಿವಮೊಗ್ಗ |
| ೧೨ | ಶ್ರೀಮತಿ ನಾಗರತ್ನ ತಾಂದಳೆ | ೫೦ | S.S.L.C. | ಗೃಹಿಣಿ | ಶಿವಮೊಗ್ಗ |
| ೧೩ | ಶ್ರೀಮತಿ ಭಾಗ್ಯ ತಾಂದಳೆ | ೪೫ | S.S.L.C. | ಗೃಹಿಣಿ | ಭದ್ರಾವತಿ |
| ೧೪ | ಶ್ರೀಮತಿ ರಮಾ ರಮೇಶ್ ಟಿಕಾರೆ | ೪೦ | S.S.L.C. | ಗೃಹಿಣಿ | ಭದ್ರಾವತಿ |
| ೧೫ | ಗೋಪಾಲಕೃಷ್ಣ ರಂಗಧೋಳ್ | ೫೦ | Graduate | ವ್ಯವಹಾರಸ್ಥರು | ಸಾಗರ |
| ೧೬ | ಗುರುನಾಥ್ ಇಜಂತ್‌ಕರ್ | ೫೫ | P.U.C | ಜವಳಿ ವ್ಯಾಪಾರಿಗಳು | ಶಿಕಾರಿಪುರ |
| ೧೭ | ಭಾರತಿ ಇಜಂತ್‌ಕರ್ | ೫೦ | S.S.L.C. | ಗೃಹಿಣಿ | ಶಿಕಾರಿಪುರ |
| ೧೮ | ಶ್ರೀಮತಿ ವಿಮಲಾ ಜಗದೀಶ್ ರಂಗಧೋಳ್ | ೪೫ | S.S.L.C. | ಗೃಹಿಣಿ | ಭದ್ರಾವತಿ |
| ೧೯ | ಶ್ರೀಮತಿ ರಾಜೇಶ್ವರಿ ಕಿರಣ್ ಸಾಕರೆ | ೪೦ | S.S.L.C. | ಗೃಹಿಣಿ | ಸೊರಬ |
| ೨೦ | ಕಿರಣ್ ಸಾಕರೆ | ೪೫ | Graduate | ಜವಳಿ ವ್ಯಾಪಾರಿಗಳು | ಸೊರಬ |
| ೨೧ | ನಿರ್ಮಲಾ ತಾಂದಳೆ | ೫೫ | P.U.C | ಗೃಹಿಣಿ | ಭದ್ರಾವತಿ |
| ೨೨ | ಪ್ರಭಾಕರ ತಾಂದಳೆ | ೫೫ | B.A.,L.L.B | ವ್ಯವಹಾರಸ್ಥರು | ಭದ್ರಾವತಿ |

| ೨೩ | ಭೋಜರಾಜ ತಾಂದಳೆ | ೫೦ | Graduate | ವ್ಯವಹಾರಸ್ಥರು | ಭದ್ರಾವತಿ |
|---|---|---|---|---|---|
| ೨೪ | ಶ್ರೀಮತಿ ನಾಗರತ್ನ ಕುಂಟೆ | ೬೦ | P.U.C. | ಗೃಹಿಣಿ | ಹೊಸನಗರ |
| ೨೫ | ಶ್ರೀಮತಿ ಗಾಯತ್ರಿ ಗುಜ್ಜರ್ | ೫೮ | P.U.C. | ಗೃಹಿಣಿ | ಹೊಸನಗರ |
| ೨೬ | ಶ್ರೀಮತಿ ಗೀತಾ ರವಿ ಡೋಯಿಜೋಡೆ | ೪೫ | P.U.C. | ಗೃಹಿಣಿ | ಶಿವಮೊಗ್ಗ |
| ೨೭ | ನಿರ್ಮಲ ನಾರಾಯಣರಾವ್ ಗುಜ್ಜರ್ | ೫೦ | P.U.C | ಗೃಹಿಣಿ | ಹೊಸನಗರ |
| ೨೮ | ಆರತಿ ಸುರೇಶ್ ರಂಗಧೋಳ್ | ೪೫ | S.S.L.C. | ಗೃಹಿಣಿ | ಸಾಗರ |
| ೨೯ | ಸುಮಾ ಗಣೇಶ್ ರಂಗಧೋಳ್ | ೩೮ | Graduate | ಗೃಹಿಣಿ | ಸಾಗರ |
| ೩೦ | ರೇಖಾ ರಮೇಶ್ ರಂಗಧೋಳ್ | ೪೦ | Graduate | ಗೃಹಿಣಿ | ಸಾಗರ |
| ೩೧ | ಉಮಾ ಗೋಪಾಲಕೃಷ್ಣ ರಂಗಧೋಳ್ | ೩೫ | Graduate | ಗೃಹಿಣಿ | ತೀರ್ಥಹಳ್ಳಿ |
| ೩೨ | ಶಿವಾಜಿರಾವ್ ಕರಾಟೆಕರ್ | ೬೨ | S.S.L.C. | ವ್ಯವಹಾರಸ್ಥರು | ಶಿವಮೊಗ್ಗ |
| ೩೩ | ರತ್ನಾಜಿರಾವ್ ಕರಾಟೆಕರ್ | ೫೦ | S.S.L.C. | ವ್ಯವಹಾರಸ್ಥರು | ಶಿವಮೊಗ್ಗ |
| ೩೪ | ಕೌಸಲ್ಯಾಬಾಯಿ | ೬೧ | 3rd Std. | ಗೃಹಿಣಿ | ಶಿಕಾರಿಪುರ |
| ೩೫ | ರಾಧಾಬಾಯಿ | ೪೦ | 3rd Std | ಗೃಹಿಣಿ | ಶಿಕಾರಿಪುರ |
| ೩೬ | ಪುಷ್ಪಾಬಾಯಿ | ೪೨ | 5th Std. | ಗೃಹಿಣಿ | ಶಿಕಾರಿಪುರ |
| ೩೭ | ಮೋಹನ ರಾವ್ ಕರಾಟೆಕರ್ | ೬೦ | S.S.L.C.. | ವ್ಯವಹಾರಸ್ಥರು | ಶಿವಮೊಗ್ಗ |
| ೩೮ | ಚಂದೋಜಿರಾವ್ | ೫೦ | S.S.L.C.. | ವ್ಯವಹಾರಸ್ಥರು | ಶಿವಮೊಗ್ಗ |
| ೩೯ | ಭಾಗ್ಯ | ೩೬ | 8th Std. | ಗೃಹಿಣಿ | ತೀರ್ಥಹಳ್ಳಿ |
| ೪೦ | ರಾಮರಾವ್ ರಂಗಧೋಳ್ | ೨೯ | S.S.L.C.. | ರಿದಂ ಪ್ಯಾಡ್ ತಬಲಾ | ಶಿವಮೊಗ್ಗ |
| ೪೧ | ವಿಠಲರಾವ್ ರಂಗಧೋಳ್ (ತುಕಾರಾಮರಾವ್ ಮಗ) | ೨೪ | M.B.A. | ಎಂ.ಬಿ.ಎ. ವಿದ್ಯಾಭ್ಯಾಸವನ್ನು ಇತ್ತೀಚೆಗೆ ಮುಗಿಸಿದ್ದಾರೆ | ಶಿವಮೊಗ್ಗ |
| ೪೨ | ಹೆಚ್.ಕೆ. ರಂಗನಾಥ್ | ೬೨ | P.U.C. | ನಿವೃತ್ತ ನೌಕರರು. | ಶಿವಮೊಗ್ಗ |
| ೪೩ | ಆರ್.ಟಿ. ರಂಗನಾಥ್ ಬಿನ್ ಆರ್.ಟಿ. ತುಳಜಪ್ಪ | ೬೨ | 5th Std. | ಜಮೀನ್ದಾರರು | ಶಿವಮೊಗ್ಗ |
| ೪೪ | ಪಾಂಡುರಂಗರಾವ್ ಟಿ.ಎನ್ | ೬೩ | S.S.L.C.. | ಜವಳಿ ವ್ಯಾಪಾರಿಗಳು | ಶಿವಮೊಗ್ಗ |
| ೪೫ | ಎಂ. ಎಸ್. ನಿಂಗೋಜಿರಾವ್ | ೬೮ | 5th Std. | ಟೈಲರ್ | ಶಿವಮೊಗ್ಗ |

| ೪೬ | ಜಿ.ಎನ್. ಶಿವಾನಂದ | ೭೪ | S.S.L.C.. | ಟೈಲರ್ | ಶಿವಮೊಗ್ಗ |
|---|---|---|---|---|---|
| ೪೭ | ಜಿ.ಎಸ್. ಮಂಜುನಾಥರಾವ್ | ೩೬ | S.S.L.C.. | ಟೈಲರ್ | ಶಿವಮೊಗ್ಗ |
| ೪೮ | ನವಲೆ ನಾಗರಾಜ | ೬೯ | S.S.L.C. | ನಿವೃತ್ತ ಸರ್ಕಾರಿ ನೌಕರರು | ಶಿವಮೊಗ್ಗ |
| ೪೯ | ಎಲ್. ನಾಗರಾಜರಾವ್ | ೪೮ | P.U.C. | ಪೈಂಟರ್ | ಶಿವಮೊಗ್ಗ |
| ೫೦ | ಕೆ.ಗಣಪತಿರಾವ್ | ೬೨ | S.S.L.C. | ಟೈಲರ್ | ಶಿವಮೊಗ್ಗ |
| ೫೧ | ಶ್ರೀನಿವಾಸರಾವ್ ಭೊಂಗಾಳೆ | ೬೨ | Graduate | ನಿವೃತ್ತ ಸರ್ಕಾರಿ ನೌಕರರು | ಶಿವಮೊಗ್ಗ |
| ೫೨ | ಎ.ಎಸ್. ಜಗದೀಶ್ | ೪೫ | P.U.C | ಜವಳಿ ವ್ಯಾಪಾರಿಗಳು | ಶಿವಮೊಗ್ಗ |
| ೫೩ | ಎಂ.ಎಸ್. ಗಣೇಶರಾವ್ | ೬೫ | S.S.L.C. | ಜವಳಿ ವ್ಯಾಪಾರಿಗಳು | ಶಿವಮೊಗ್ಗ |
| ೫೪ | ಮಾಂಡ್ರೆ ಗಣೇಶರಾವ್ | ೫೬ | S.S.L.C. | ಖಾಸಗಿ ನೌಕರಿ | ಶಿವಮೊಗ್ಗ |
| ೫೫ | ಕೇಶವಮೂರ್ತಿ ಗೋಂದ್ಕರ್ | ೬೬ | S.S.L.C. | ನಿವೃತ್ತ ಸೈನಿಕರು | ಶಿವಮೊಗ್ಗ |
| ೫೬ | ಎಂ. ಆರ್. ಗೋಪಾಲರಾವ್ | ೬೭ | S.S.L.C. | ಜವಳಿ ವ್ಯಾಪಾರಿಗಳು | ಶಿವಮೊಗ್ಗ |
| ೫೭ | ಗಿರೀಶ್ ಕುಂಟೆ | ೩೩ | S.S.L.C. | ಟೈಲರ್ | ಶಿವಮೊಗ್ಗ |
| ೫೮ | ಟಿ.ವಿ.ಜೈ ಶಂಕರ್ | ೫೯ | S.S.L.C. | ವ್ಯಾಪಾರಿಗಳು | ಶಿವಮೊಗ್ಗ |
| ೫೯ | ಎನ್. ಆರ್. ರಾಘವೇಂದ್ರ | ೩೫ | B.Com., | ಟೈಲರ್ | ಶಿವಮೊಗ್ಗ |
| ೬೦ | ತೇಲ್ಕರ್ ಮಲ್ಲಿಕಾರ್ಜುನರಾವ್ | ೬೦ | $5^{th}$ Std. | ಮೆಕಾನಿಕ್ | ಶಿವಮೊಗ್ಗ |
| ೬೧ | ತೇಲ್ಕರ್ ಲೋಕೇಶರಾವ್ | ೫೯ | S.S.L.C.. | ಮೆಕಾನಿಕ್ | ಶಿವಮೊಗ್ಗ |
| ೬೨ | ಟಿಕಾರೆ ರಾಘವೇಂದ್ರ | ೩೦ | S.S.L.C.. | ಟೈಲರ್ | ಶಿವಮೊಗ್ಗ |
| ೬೩ | ಎಂ.ಎನ್. ಸುಬ್ರಮಣ್ಯರಾವ್ | ೩೬ | S.S.L.C.. | ವಾಚ್.ಮೊಬೈಲ್ ವ್ಯಾಪಾರಿಗಳು | ಶಿವಮೊಗ್ಗ |
| ೬೪ | ಕೆ.ಆರ್. ಜಯಪ್ರಕಾಶ್ | ೫೩ | S.S.L.C.. | ವ್ಯಾಪಾರಿಗಳು | ಶಿವಮೊಗ್ಗ |
| ೬೫ | ವಿಜಯಕುಮಾರ ರಂಗಧೋಳ್ | ೩೧ | S.S.L.C.. | ಸಂಗೀತ ಕಲಾವಿದರು | ಶಿವಮೊಗ್ಗ |
| ೬೬ | ಎ. ಮಂಜುನಾಥರಾವ್ ಮಾಳದಕರ | ೩೬ | S.S.L.C.. | ಮೆಕಾನಿಕ್ | ಶಿವಮೊಗ್ಗ |
| ೬೭ | ಪಿ.ಗಣೇಶರಾವ್ | ೩೬ | S.S.L.C.. | ಹೊಲಿಗೆ ಮಿಷನರಿ | ಶಿವಮೊಗ್ಗ |
| ೬೮ | ನವಲೆ ಪುಂಡಲೀಕರಾವ್ | ೬೪ | $5^{th}$ Std. | ಟೈಲರ್ | ಶಿವಮೊಗ್ಗ |
| ೬೯ | ದಾಮೋದರ ಜಿ.ವಿ. | ೬೭ | $7^{th}$ Std. | ಟೈಲರ್ | ಶಿವಮೊಗ್ಗ |

| ೭೦ | ಈಶ್ವರಪ್ಪ ಆರ್. | ೬೮ | S.S.L.C.. | ನಿವೃತ್ತ ಖಾಸಗಿ ನೌಕರರು | ಶಿವಮೊಗ್ಗ |
|---|---|---|---|---|---|
| ೭೧ | ಪಿ.ಎಲ್. ಸತ್ಯನಾರಾಯಣರಾವ್ | ೬೧ | S.S.L.C.. | ನಿವೃತ್ತ ಸರ್ಕಾರಿ ನೌಕರರು | ಶಿವಮೊಗ್ಗ |
| ೭೨ | ರಾಜೇಶ ಕಟಾರೆ | ೪೬ | Graduate | ಸೈಕಲ್ ವ್ಯಾಪಾರಿಗಳು | ಶಿವಮೊಗ್ಗ |
| ೭೩ | ಪ್ರೇಮಾಬಾಯಿ | ೫೦ | 5th Std. | ರೆಡಿಮೇಡ್ ವ್ಯಾಪಾರಿಗಳು | ಶಿವಮೊಗ್ಗ |
| ೭೪ | ಜಯಲಕ್ಷ್ಮ್ಮ | ೬೫ | 5th Std. | ಗೃಹಿಣಿ | ತೀರ್ಥಹಳ್ಳಿ |

## ಅನುಬಂಧ ೩

## ಕನ್ನಡ ಪರಾಮರ್ಶನ ಗ್ರಂಥಗಳು

೧. ಕನ್ನಡ ಜಾನಪದ ಕೋಶ, ಹೆಚ್.ಎಲ್.ನಾಗೇಗೌಡ, ಟಿ.ಆರ್.ಮಹಾದೇವಯ್ಯ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ೧೯೯೮.

೨. ಜಾನಪದ ಜಗತ್ತು – ಪ್ರಧಾನ ಸಂಪಾದಕರು, ಹೆಚ್.ಎಲ್. ನಾಗೇಗೌಡ, ಜಾನಪದ ಲೋಕ, ರಾಮನಗರ, ಬೆಂಗಳೂರು, ಜನವರಿ – ಫೆಬ್ರವರಿ ೧೯೮೫ – ೧೯೯೨.

೩. ಸ್ತ್ರೀ ಸಂಸ್ಕೃತಿ ಶಿಕ್ಷಣ – ಬಿ.ಎಂ. ರೋಹಿಣಿ, ಹೇಮಾಂಶು ಪ್ರಕಾಶನ, ಮಂಗಳೂರು.

೪. ಕನ್ನಡ ಜಾನಪದ ವಿಶ್ವಕೋಶ – ಸಂಪುಟ – ೧, ಡಾ॥ ಚಂದ್ರಶೇಖರ ಕಂಬಾರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಜಾನಪದ ಅಂತರ್ಯ, ಡಾ॥ ವೈ.ಸಿ. ಭಾನುಮತಿ, ತಳಗವಾಡಿ ಪ್ರಕಾಶನ, ಮೈಸೂರು.

೬. ಜಾನಪದ ವೀಕ್ಷಣೆ – ಡಾ॥ ಅಂಬಳಿಕೆ ಹಿರಿಯಣ್ಣ, ಪ್ರಜ್ವಲ ಪ್ರಕಾಶನ , ಮೈಸೂರು, ೧೯೮೭.

೭. ಜಾನಪದ ಸಾಹಿತ್ಯ ದರ್ಶನ – ಡಾ॥ ಎಸ್.ಎಸ್. ಸುಂಕಾಪುರ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೦.

೮. ಜಾನಪದ ಸಮಾಜ ಸಂಸ್ಕೃತಿ – ಎಸ್.ಎಸ್. ಹಿರೇಮಠ, ಸೂರ್ಯಪ್ರಕಾಶನ, ಚಿತ್ರದುರ್ಗ ಜಿಲ್ಲೆ.

೯. ಜಾನಪದ ವಿವಿಧ ಮುಖಗಳು – ಸಂಪಾದಕ. ಪ್ರೋ.ಶ್ರೀಕಂಠಕೂಡಿಗೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ, ಬೆಂಗಳೂರು.

೧೦. ಅಮೃತ ಸಾಧನೆ – ಸಂಪಾದಕರು ಬಾಹುಸಾರ ಸಮಾಜ, ಶಿವಮೊಗ್ಗ, ೧೯೯೫.

೧೧. ಬಾಹುಸಾರ ಬೆಳಕು – ಸಂಪಾದಕರು ಬಾಹುಸಾರ ಸಮಾಜ, ಶಿವಮೊಗ್ಗ, ೨೦೦೩.

೧೨. ಕರ್ನಾಟಕ ಸಾಂಸ್ಕೃತಿಕ ಸಂಘರ್ಷ – ಡಾ॥ ಜಿ.ಎಸ್. ಗೀತಾ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತಿನ ೨ ನೇ ಸಂಪುಟ, ಬೆಂಗಳೂರು, ೧೯೭೬.

೧೪. ಸಂಸ್ಕೃತಿ, ಶ್ರಮ, ಮತ್ತು ಸೃಜನಶೀಲತೆ – ಬರಗೂರು ರಾಮಚಂದ್ರಪ್ಪ, ಅಂಕಿತ ಪ್ರಕಾಶನ, ಬೆಂಗಳೂರು.

೧೫. ಕ್ರಾಂತಿಕಾರಿ ತುಕಾರಾಂ – ಚಂದ್ರಕಾಂತ ಪೋಕಳೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೧೯೯೯.

೧೬. ನಮ್ಮ ಆಟಗಳು ನುಡಿಕಟ್ಟು –ಡಾ॥ಡಿ. ಪಾಂಡುರಂಗ ಬಾಬು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಮರಾಠಿ ನಾಯ್ಕರು – ಒಂದು ಸಾಂಸ್ಕೃತಿಕ ಅಧ್ಯಯನ, ಡಾ॥ ಎಸ್.ಮೋಹನ್, ಅಂಶು ಪ್ರಕಾಶನ, ಹೊಸಪೇಟೆ – ೨೦೦೮.

೧೮. ವಿಠ್ಠಲ ಸಂಪ್ರದಾಯ – ಡಾ॥ ವಿಠಲರಾವ್ ಗಾಯಕ್ವಾಡ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. ಸಮಗ್ರ ಜನಪದ ಸಂಪುಟ – ಡಾ॥ ಸಿಂಪಿ ಲಿಂಗಣ್ಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೦. ಭಾವಸಾರ ಕ್ಷತ್ರಿಯ ಸಮಾಜದ ಇತಿಹಾಸ ಮತ್ತು ಗೋತ್ರಾವಳಿ. ಸಂಗ್ರಹ ಮತ್ತು ಲೇಖಕರು ಡಾ॥ ನಾಮದೇವ ಸ್ವಾಮಿ ಆನಂದರಾವ್ ಉತ್ತರಕರ್, ಭದ್ರಾವತಿ, ೧೯೯೮.

೨೧. ಸಾರ್ಥ ತುಕಾರಾಮ ಗಾಥಾ, ಅನುವಾದಕರು: ಹ.ಭ.ಪ. ಕೃಷ್ಣಾಜೀ ಡೋಂಗ್ರಪ್ಪ ಜ್ಞಾನಮೋತೆ, ಕೊಪ್ಪಳ, ಪ್ರಕಾಶಕರು : ಶ್ರೀ ವಾಸಕರ ವಾರಕರೀ ಸಂಸ್ಥಾ ಟ್ರಸ್ಟ್, ಕೊಪ್ಪಳ,

೨೨. ಗೋಂದಲಿಗರ ದೇವೇಂದ್ರಪ್ಪನವರ ಆಟಗಳು. ಮುದೇನೂರು ಸಂಗಣ್ಣ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೧೯೯೩.

೨೩. ಶ್ರೀ ವಿಠಲ ಒಂದು ಮಹಸಮನ್ವಯ, ಕನ್ನಡ ಪುಸ್ತಕ ಪ್ರಾಧಿಕಾರ, ಮರಾಠಿ ಮೂಲ : ರಾಮಚಂದ್ರ ಚಿಂತಾಮಣಿ ಡೇರೆ. ಅನುವಾದ : ಚಂದ್ರಕಾಂತ ಪೋಕಳೆ

೨೪. ಜನಪದ ಕರ್ನಾಟಕ – ಸಂಪುಟ – ೮ ನೇ ಸಂಚಿಕೆ – ೧ ಜುಲೈ – ೨೦೧೦. ಸಂಪಾದಕರು, ಸ.ಚಿ. ರಮೇಶ್, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ಎಲ್ಲಮ್ಮ – ಒಂದು ಜಾನಪದೀಯ ಅಧ್ಯಯನ. ಪ್ರೊ. ಎನ್. ಚಂದ್ರಪ್ಪ, ಮುಂಡ ಪ್ರಕಾಶನ, ಬೆಂಗಳೂರು, ೨೦೦೨.

೨೬. ವಾಲ್ಮೀಕಿ ಸಮುದಾಯ – ಸಂಪಾದಕ ಡಾ॥ ಮಂಜುನಾಥ ಬೇವಿನಕಟ್ಟಿ. ಪ್ರಸಾರಾಂಗ, ಕನ್ನದ ವಿಶ್ವ ವಿದ್ಯಾಲಯ, ಹಂಪಿ, ೨೦೦೯.

೨೭. ದೇಸೀ ಚಹರೆ – ಡಾ॥ ಮಂಜುನಾಥ ಬೇವಿನಕಟ್ಟಿ,ರೂಪ ಪ್ರಕಾಶನ, ಬೆಂಗಳೂರು, ೨೦೦೪.

೨೮. ಮೈಲಾರ ಲಿಂಗನ ಕಾವ್ಯ – ಸಂಕಥನ, ಒಗ್ಗರು ಹನುಮಂತಪ್ಪ , ಪ್ರಸ್ತಾವಿಕ : ಡಾ॥ ಮಂಜುನಾಥ ಬೇವಿನಕಟ್ಟಿ. ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ. ವಿದ್ಯಾರಣ್ಯ, ೧೯೯೯.

೨೯. ಜಾನಪದ ಕ್ಷೇತ್ರ ಕಾರ್ಯ – ಡಾ॥ ಪುರುಷೊತ್ತಮ ಬಿಳಿಮಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೩

೩೦. ಸಂಸ್ಕೃತಿ ಸಂಕಥನ–ಡಾ॥ ವೀರೇಶ ಬಡಿಗೇರ, ಮಯ ಪ್ರಕಾಶನ, ಕಮಲಾಪುರ, ೨೦೦೯.

೩೧. ಡಾ.ಸಿಂಪಿಲಿಂಗಣ್ಣ ಸಮಗ್ರ ಜನಪದ ಸಂಪುಟ : ಪ್ರೊ. ವೀರೇಂದ್ರ ಸಿಂಪಿ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೭.

೩೨. ವೇದಯುಗ – ಭಾಗ ೧ – ಭಾರತೀಯ ವಿದ್ಯಾ ಭವನ ಬೆಂಗಳೂರು, ೧೯೬೪.

೩೩. ಹಳೆಗನ್ನಡ ಮತ್ತು ಮರಾಠಿ – ರಂ.ಶಾ. ಲೋಕಾಪುರ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೧೯೯೪.

೩೪. ಜಾನಪದ ಆಯಾಮಗಳು–ಪ್ರಧಾನ ಸಂಪಾದಕರು, ಡಾ॥ ಬಸವರಾಜ ಸಬರದ , ಸಂಪಾದಕರು, ಡಾ॥ ಎಚ್.ಟಿ. ಪೋತೆ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ೨೦೦೯.

೩೫. ಕನ್ನಡ ಸಂಶೋಧನೆ, ತಾತ್ವಿಕ ವಿಚಾರ – ರಹಮತ್, ತರೀಕೆರೆ. ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೭.

೩೬. ಸಂಶೋಧನೆ ಏನು? ಏಕೆ?ಹೇಗೆ? – ಎಂ. ಚಂದ್ರ ಪೂಜಾರಿ. ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೯

೩೭. ಕನ್ನಡ ಜಾನಪದ ನಂಬಿಕೆಗಳು–ಡಾ॥ ಮಂಜುನಾಥ ಬೇವಿನಕಟ್ಟಿ, ರೂಪಾ ಪ್ರಕಾಶನ, ಮೈಸೂರು, ೨೦೦೭.

೩೮. ಉತ್ತರ ಕರ್ನಾಟಕದ ಜಾನಪದ ಆಟಗಳು, ಪಿ.ಹೆಚ್.ಡಿ. ಪ್ರಬಂಧ ಅರವಿಂದ ಮಾಲಗತ್ತಿ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ.

೩೯. ಕರ್ನಾಟಕ ಜಾನಪದ ಕಲೆಗಳ ಕೋಶ– ಡಾ॥ ಹಿ.ಚಿ. ಬೋರಲಿಂಗಯ್ಯ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೧೯೯೬.

೪೦. ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು – ಡಾ. ಜಿ.ಶಂ. ಪರಮಶಿವಯ್ಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯.

೪೧. ಏಳುಕೊಳ್ಳದ ಎಲ್ಲಮ್ಮ , ಮತಿಘಟ್ಟ ಕೃಷ್ಣಮೂರ್ತಿ

೫೨ ರೇಣುಕಾ ಮಹಾತ್ಮೆ ಯ.ಗು.ಕೃಷ್ಣಮೂರ್ತಿ

೫೩ ರೇಣುಕಾ ಯಲ್ಲಮ್ಮ, ಸವದತ್ತಿ ಮಠದ ಪ್ರಕಟನೆ

೫೪ ಸವದತ್ತಿ ಎಲ್ಲಮ್ಮ : ವಿಚಾರ ಸಂಕಿರಣ, ಕರ್ನಾಟಕ ವಿಶ್ವವಿದ್ಯಾಲಯ

೫೫ ಸ್ತ್ರೀ ಸಂವೇದನೆ, ಬಿ.ಎಂ. ರೋಹಿಣಿ, ಹೇಮಾಂಶು ಪ್ರಕಾಶನ, ದೊರೆಬೈಲು, ಮಂಗಳೂರು, ೧೯೯೫.

೫೬ ಶಿವಮೊಗ್ಗ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು – ಡಾ. ಕೆಳದಿ ವೆಂಕಟೇಶ್ ಜೋಯಿಸ್, ಅಂಕಣ ಪ್ರಕಾಶನ, ಬೆಂಗಳೂರು, ೨೦೧೦.

೫೭ ಜಾನಪದ ವ್ಯಕ್ತಿ ಮತ್ತು ವಿಚಾರ, ಡಾ. ಹಿ.ಶಿ. ರಾಮಚಂದ್ರೇಗೌಡ, ಮಾನವಿ ಪ್ರಕಾಶನ, ಮಾನಸ ಗಂಗೋತ್ರಿ, ಮೈಸೂರು, ೧೯೮೨.

೫೮ ಮೈಲಾರ ಲಿಂಗ ಕಾವ್ಯ, (ಸಂ) ಚಕ್ಕರೆ ಶಿವಶಂಕರ

೫೯ ಜಾತ್ರೆಗಳು, ಎಸ್.ಎಸ್. ಹಿರೇಮಠ, ಸಮತಾ ಪ್ರಕಾಶನ, ಹೊಸಪೇಟೆ, ೧೯೯೩.

೬೦ ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಶಂಬಾ ಜೋಷಿ

೬೧ ಗ್ರಾಮದೇವತೆಗಳು, ಮೂಲಭಾರತಿ ಪ್ರಕಾಶನ, ಬೆಂಗಳೂರು, ೧೯೯೭.

೬೨ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾಲಯ

೬೩ ಕನ್ನಡ ಜಾನಪದ ವಿಶ್ವಕೋಶ, ಚಂದ್ರಶೇಖರ ಕಂಬಾರ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು. ಸಂಪುಟ – ೦೧.

೬೪ ಗೊಂದಲಿಗರು : ಒಂದು ಅಧ್ಯಯನ, ಕ್ಯಾತನಹಳ್ಳಿ ರಾಮಣ್ಣ, ಸೆಪ್ಟಂಬರ್, ೧೯೮೨, ಮೈಸೂರು ವಿಶ್ವವಿದ್ಯಾಲಯ.

೬೫ ಶಿವಮೊಗ್ಗ ಜಿಲ್ಲೆಯ ಗೊಂದಲಿಗರ ಕತೆಗಳು ಕ್ಯಾತನಹಳ್ಳಿ ರಾಮಣ್ಣ, ೧೯೭೨, ಮೈಸೂರು ವಿಶ್ವವಿದ್ಯಾಲಯ.

೬೬ ಕ್ಷೇತ್ರ ಕಾರ್ಯದ ಹಾದಿಯಲ್ಲಿ, ಕ್ಯಾತನಹಳ್ಳಿ ರಾಮಣ್ಣ, ಏಪ್ರಿಲ್, ೦೧, ೨೦೦೮.

೬೭ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತಿನ ೨ ನೇ ಸಂಪುಟ, ಬೆಂಗಳೂರು ೧೯೭೬.

೬೮ ಜಾನಪದ ಅಧ್ಯಯನ, ಡಾ. ದೇ. ಜವರೇಗೌಡ, ಕೃಷ್ಣಮೂರ್ತಿಪುರಂ, ಮೈಸೂರು, ೧೯೭೬.

೬೯ ಕನ್ನಡ ಜಾನಪದ ಕೋಶ, ಪ್ರ.ಸಂ. ಹೆಚ್.ಎಲ್.ನಾಗೇಗೌಡ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು ೧೯೯೮

೭೦ ಜಾನಪದ ಸಂಕೀರ್ಣ, ಡಾ. ರಾಮೇ ಗೌಡ, ೨೫ ಜನವರಿ ೧೯೯೭.

೭೧ ಜಾನಪದ ಸ್ವರೂಪ, ಡಾ. ಹಾ.ಮಾ. ನಾಯಕ, ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ ೩, ಧರ್ಮ. ಸಂ. ರಹಮತ್, ತರೀಕೆರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦

೭೨ ಭಾರತೀಯ ದೇವಾಲಯಗಳ ಜಾನಪದ ಮೂಲ, ರಾಮಚಂದ್ರರಾವ್. ಎಸ್.ಕೆ

೭೩ ಕರ್ನಾಟಕ ರಾಜ್ಯಕೋಶ–೪, ಜನಸಮುದಾಯ ಸಂಪುಟ ೪, ಸಂ. ಹೆಚ್.ಡಿ.ಪ್ರಶಾಂತ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ೨೦೦೦.

೭೪ ಕರ್ನಾಟಕ ಜಾನಪದ, (ಸಂ) ಸ.ಚಿ. ರಮೇಶ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೭೫ ಜಾನಪದ ವ್ಯಕ್ತಿ ಮತ್ತು ವಿಚಾರ, ಡಾ.ಹಿ.ಶಿ.ರಾಮಚಂದ್ರೇಗೌಡ, ಮಾನವಿ ಪ್ರಕಾಶನ, ಮಾನಸಗಂಗೋತ್ರಿ, ಮೈಸೂರು ೧೯೮೨.

೭೬ ಜಾನಪದ ಜಗತ್ತು, ಮಾರಮ್ಮ ವಿಶೇಷ ಸಂಚಿಕೆ. ಡಾ. ಅರವಿಂದ ಮಾಲಗತ್ತಿ

೭೭ ಮಲ್ಲಿಕಾ ಸಂ. ಮೇತ್ರಿ, ಜಾನಪದ ಆಟಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೭೮ ಗ್ರಾಮದೇವತೆಗಳು, ಪ್ರೊ. ಡಿ. ಲಿಂಗಯ್ಯ, ಮೂಲಭಾರತಿ ಪ್ರಕಾಶನ, ಬೆಂಗಳೂರು, ೧೯೯೭.

೭೯ ಒಗಟುಗಳು, ಹೆಚ್. ಜೆ. ಲಕ್ಕಪ್ಪಗೌಡ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

೮೦ ಕನ್ನಡ ಜನಪದ ಗೀತೆಗಳು, ಡಾ. ಬಿ.ಎಸ್.ಗದ್ದಗಿಮಠ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೭.

೮೧ ಜಾನಪದ ದರ್ಶನ, ಚಕ್ಕರೆ ಶಿವಶಂಕರ, ಬೈರಮಂಗಲ ರಾಮೇಗೌಡ,

೮೨ ಜಾನಪದ ಲೋಕ, ಗ್ರಾಮಚೇತನ, ಅಭಿನಂದನಾ ಗ್ರಂಥ, ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು, ೨೦೦೫.

೮೩ ಜಾನಪದ ಕೆಲವು ವಿಚಾರಗಳು, ಚೇತನಾ ಬುಕ್ ಹೌಸ್, ಮೈಸೂರು, ೧೯೯೬.

೮೪ ಮರ್‍ಹಾಠೀ ಸಂಸ್ಕೃತಿ–ಕೆಲವು ಸಮಸ್ಯಗಳು, ಡಾ. ಶಂ.ಬಾ, ಜೋಶಿ

೮೫ ಮಹಾರಾಷ್ಟ್ರದ ಮೂಲ, ಡಾ. ಶಂ.ಬಾ, ಜೋಶಿ

೮೬ ಭಾರತದ ಹಬ್ಬಗಳು, ಸಮಾಜ ಪುಸ್ತಕಾಲಯ, ಧಾರವಾಡ, ಡಿ.ಟಿ.ರಂಗಸ್ವಾಮಿ. ೧೯೯೩

೮೭ ಕರ್ನಾಟಕ ಚರಿತ್ರೆ, (ಸಂ.ಟ.೩) ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ಕಮಲಾಪುರ, ಕೆ.ಎಸ್. ಶಿವಣ್ಣ ೧೯೯೭

೮೮ ಜಾಗತೀಕ ಧರ್ಮಗಳು, ಸಮಾಜ ಪುಸ್ತಕಾಲಯ, ಧಾರವಾಡ, ಶೇಷ ನವರತ್ನ ೧೯೯೮

೮೯ ಜಾನಪದ ಸಾಹಿತ್ಯ ದರ್ಶನ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಎಂ.ಎಸ್. ಸುಂಕಾಪುರ, ೧೯೭೮.

೯೦ ಕರ್ನಾಟಕ ಚರಿತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ಕಮಲಾಪುರ, ಸತ್ಯನಾರಾಯಣ ೧೯೯೭

೯೧ ಕುಟುಂಬ ಜೀವನ (ಕನ್ನಡ ಗ್ರಂಥಮಾಲೆ) ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಜಿ.ಹನುಮಂತರಾವ್ ೧೯೬೦

೯೨ ಕನ್ನಡ ಅಧ್ಯಯನ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ಕಮಲಾಪುರ, ಕರೀಗೌಡ, ಬೀಚನಹಳ್ಳಿ ೧೯೯೫

೯೩ ಗ್ರಾಮೀಣ ಜನತೆ ಹಾಗೂ ರಾಜಕೀಯ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ಕಮಲಾಪುರ, ಕಲ್ಮಠ, ಎಲ್. ಎಚ್. ೧೯೯೧

೯೪ ಜನಪದ ಸಮಾಜ ಮತ್ತು ಸಂಸ್ಕೃತಿ, ಕನ್ನಡ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಗುರುಮೂರ್ತಿ ಕೆ.ಜಿ. ೧೯೭೯

೯೫ ಕೆಲವು ಜನಪದ ಸಂಪ್ರದಾಯಗಳು, ವಿಜಯಶ್ರೀ ಸರಸ್ವತೀಪುರಂ, ತೋಂಟಚಿಕೊಪ್ಪಲು ಬಡಾವಣೆ, ಮೈಸೂರು ಚೆಲುವೇಗೌಡ ತ.ಚಿ. ೧೯೭೮

೯೬ ಸಾಮಾಜಿಕ ಮಾನವ ಶಾಸ್ತ್ರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ನಂಜಮ್ಮಣ್ಣಿ. ಎಂ. ೧೯೭೪

೯೭ Village Gods of South India, Henry White Head – 1921

೯೮ Castes and Tribes of South India, E.Thurston Vol-IV. 1907

೯೯ Original habitants of India Gustoper Oppert

೧೦೦ Indian Mother Goddess, Bhattacharya N.H.

೧೦೧ Indian Philosophy, Debi Prasad Chattopadhaya

೧೦೨ Gods and Men, G.S Ghure

೧೦೩ Folk Culture and Oral Tradition, Srivasthsva Shoblal, Delhi, 1974

೧೦೪ Caste in Modern India and Other Essays, Shrinivas M.N. 1970

೧೦೫ Universal Religion, Author Mysore, R.N Suryanarayan. 1952

೧೦೬ "Castes : Old and New" Asia Publishing House, Bombay, Beteille, Andre

೧೦೭ "Dravidion Gods in Modern Hiduism" Elmore. C.L. Society, Madras, Elmore C.L. 1925

೧೦೮ "Social Institutions" New York Prentice-Hall, Inc, Harry Elmer Barnes 1947

೧೦೯ "Encyclopedia of Religion And Ethic" T. and T. Clark, Edinborough, Hastings, James, 1921

೧೧೦ "Caste in India" Oxford University Press, Oxford, Hutton J.H. 1961

೧೧೧ "Introduction to the Study of Comparative Religion", Macmillan, New York, Jevons F.B. 1918

೧೧೨ "Races and Cultures of India" Asia publishing House, Bombay, Majumdar D.N.1961

### ಕನ್ನಡ ಪಿ.ಹೆಚ್.ಡಿ. ಮಹಾಪ್ರಬಂಧಗಳು

೧. ಉತ್ತರ ಕರ್ನಾಟಕದ ಮದುವೆ ಸಂಪ್ರದಾಯಗಳು, ಸತ್ಯನಾಯಕ.ಎ.ಎಂ. ೧೯೯೪

**ಕನ್ನಡ ಎಂ.ಫಿಲ್. ಮಹಾಪ್ರಬಂಧಗಳು**

೧. ಭಾರತೀಯ ನಗರಗಳಲ್ಲಿ ಧರ್ಮ ಹಾಗೂ ಶಿಕ್ಷಣ ಸಂಸ್ಥೆಗಳು, ಸುಳ್ಳದ. ಸಿ.ಎಸ್. ೧೯೯೭

**ಹಸ್ತ ಪ್ರತಿ – ಟಂಕಿತ ಗ್ರಂಥಗಳು**

೧. ಶ್ರೀ ವಿಠ್ಠಲ ಪ್ರತಿಷ್ಠಾ ; ಭಾರತ ಇತಿಹಾಸ ಸಂಶೋಧಕ ಮಂಡಳ, ಪುಣೆ, ಕ್ರ ೮೬/೩೮

೨. ಶ್ರೀ ವಿಠ್ಠಲ ಪಂಚರತ್ನಮ್ : ಡಾ. ರಾಜೇಶ್ವರ ಪಾಂಡುರಂಗ ಶಾಸ್ತ್ರಿ ಗೋಸ್ವಾಮಿ (ಪುಣೆ) ಇವರ ಖಾಸಗಿ ಗ್ರಂಥ.

೩. ಪಾಂಡುರಂಗ ಮಂತ್ರಜಪ : (ಅಪೂರ್ಣ) : ಶ್ರೀ ವಾ.ಲ. ಮಂಜುಳ (ಖಾಸಗಿ ಸಂಗ್ರಹದಲ್ಲಿದೆ)

೪. ವಾರಕರಿ ಸಂಪ್ರದಾಯ–ತತ್ವಜ್ಞಾನ ವ ಸದ್ಯಕಾಲೀನ ಔಚಿತ್ಯ : ದಾದಾ ಮಹಾರಾಜ ಸಾತಾಕರ (ಅಪ್ರಕಾಶಿತ) ಪಿಎಚ್‌ಡಿ ಪ್ರಬಂಧ, ೧೯೭೭ ಜಯಕರ ಗ್ರಂಥಾಲಯ, ಪುಣೆ ವಿದ್ಯಾಪೀಠ, ಪುಣೆ – ೭

೫. ಶ್ರೀ ವಿಷ್ಣು ಪುರಾಣಾಂತರ್ಗತ ಪಾಂಡುರಂಗ ಮಹಾತ್ಮ್ಯಂ : ನನ್ನ ಖಾಸಗಿ ಸಂಗ್ರಹ.

**ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳು**

೧. ಶ್ರೀ ವಿಠ್ಠಲಗೀತಾ (ಸಂಸ್ಕೃತ, ಮರಾಠಿ ಓವಿ ಬುದ್ಧ) ; ಪ್ರ. ನಾರಾಯಣ ಖಂಡೋ ಮಾಂಡವಗಣೆ, ಪುಣೆ, ಶಕೆ ೧೮೧೫.

೨. ಶ್ರೀ ಮದ್ ವಿಠ್ಠಲಭೂಷಣಂ–ಗೋಪಾಳಚಾರ್ಯ ಕರ್ಹಾಡಕರ, ಮುಂಬೈ, ಶಕೆ, ೧೮೦೮

೩. ಶ್ರೀ ಪಾಂಡುರಂಗಾಷ್ಟಕಮ್ (ಶಂಕರಾಚಾರ್ಯ ವಿರಚಿತಂ) : ಪ್ರವಚನಕಾರ ಪಾಂಡುರಂಗ ಶಾಸ್ತ್ರೀ ಆಠವಲೆ, ಮುಂಬೈ, ೧೯೭೪.

**ನಾನು ಭೇಟಿ ನೀಡಿದ ಪುಸ್ತಕ ಮಳಿಗೆಳು:**

೧. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨. ಜಾನಪದ ಅಕಾಡಮಿ, ಬೆಂಗಳೂರು.

೩. ಕನ್ನದ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೫. ಸಪ್ನ ಬುಕ್ ಹೌಸ್, ಬೆಂಗಳೂರು.

೬. ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ

೯. ಮಾನವಿ ಪ್ರಕಾಶನ, ಮಾನಸಗಂಗೋತ್ರಿ, ಮೈಸೂರು.

೧೦. ಚೇತನ ಪ್ರಕಾಶನ, ಧಾರವಾಡ

೧೧. ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

## ಸಮುದಾಯದವರ ವಿವಿಧ ಆಚರಣೆಗಳು



ಜವಳದ ಮುನ್ನ ದೇವಿಯ ಪೂಜೆ



ಜವಳದ ಮೊದಲು ಜೋಗಮ್ಮರಿಗೆ ಪಲ್ಡಗೆ ತುಂಬುವ ಶಾಸ್ತ್ರ



ಜೋಗಮ್ಮರು ಹಾಡುತ್ತಿರುವುದು



ಜವಳ ತೆಗೆಯುತ್ತಿರುವುದು




ಜವಳ ಶಾಸ್ತ್ರದ ನಂತರ ಹಿರಿಯರಿಂದ ಆಶೀರ್ವಚನ




ಜವಳ ಶಾಸ್ತ್ರದ ನಂತರ ಮಗುವಿಗೆ ಸುಮಂಗಲಿಯರಿಂದ ಆರತಿ



ಹುಟ್ಟು ಹಬ್ಬದ ಆಚರಣೆ



ಸಮುದಾಯದವರ ಪುರಾತನ ವಿವಾಹ ಪದ್ಧತಿ



ಸಮುದಾಯದ ಹಿರಿಯರು



## ಸಮುದಾಯದವರ ಸಂಪ್ರದಾಯಗಳು



ಬಳೆ ತೊಡಿಸುವ ಶಾಸ್ತ್ರ



ಮದುವೆ ನಿಶ್ಚಿತಾರ್ಥ ಶಾಸ್ತ್ರ



ಮದುಮಕ್ಕಳಿಗೆ ಅರಿಶಿಣ ಹಚ್ಚುತ್ತಿರುವುದು



ತಾಯಂದಿರು ಅರಿಶಿಣ ಹಚ್ಚುವ ಶಾಸ್ತ್ರ








ಸುರಿಗೆ ಸುತ್ತುತ್ತಿರುವುದು



ವಧುವಿಗೆ ಸುರಿಗೆ ನೀರು ಹಾಕುತ್ತಿರುವುದು



ಕುಟುಂಬದವರು ಆಯರು ಮಾಡುತ್ತಿರುವುದು



ವಧುವಿಗೆ ತವರು ಮನೆಯವರು ತುತ್ತು ಹಾಕುತ್ತಿರುವುದು



# ಸಮುದಾಯದಲ್ಲಿ ಆಚರಿಸುವ ಹಬ್ಬಗಳು









ನಾಗರ ಪಂಚಮಿ ಹಬ್ಬ



ಶ್ರೀಕೃಷ್ಣ ಜನ್ಮಾಷ್ಟಮಿ ಪ್ರಯುಕ್ತ ಮಗುವಿಗೆ ಕೃಷ್ಣನ ವೇಷವನ್ನು ತೊಡಿಸಿರುವುದು



ವಿನಾಯಕ ಚತುರ್ಥಿಯ ಆಚರಣೆ

# ಸಮುದಾಯದವರ ಆಚರಣೆಯಾದ 'ದಿಂಡಿ ಉತ್ಸವ'ದ ದೃಶ್ಯಾವಳಿಗಳು











ಅಭಂಗಗಳನ್ನು ವಾಚಿಸುತ್ತಿರುವ ಸಮುದಾಯದ ಕಲಾವಿದರು





ದಿಂಡಿ ಉತ್ಸವದಲ್ಲಿ ಭಜನೆ ಮಾಡುತ್ತಿರುವ ಸಮುದಾಯದ ಮಹಿಳೆಯರು



ಭಾವಸಿಂಗ್, ಸಾರ್‌ಸಿಂಗ್ ಕ್ಷತ್ರಿಯರು ಪರಶುರಾಮನಿಂದ ರಕ್ಷಣೆ ಪಡೆಯಲು
ಹಿಂಗುಲಾಂಬಿಕೆ ದೇವಿಯ ಮೊರೆ ಹೋಗುವ ದೃಶ್ಯ








ಶ್ರೀ ತುಕಾರಾಮ ಮಹಾರಾಜರು ವೈಕುಂಠಕ್ಕೆ ಹೋದ ಸ್ಥಾನ

# ಶಿವಮೊಗ್ಗ ಜಿಲ್ಲೆಯ ನಕ್ಷೆ



## ಸಮುದಾಯದವರು ಆಚರಿಸುವ 'ಗೋಂದಳ'











## ಸಮುದಾಯದವರಿಂದ ಪೂಜಿಸಲ್ಪಡುತ್ತಿರುವ ಶಕ್ತಿದೇವತೆಗಳು




ಶ್ರೀ ತು ಳಜಾಭವಾನಿ ದೇವಿ




ಕೋಟೆ ಶ್ರೀ ಮಾರಿಕಾಂಬಾ ದೇವಿ



ಕೋಟೆ ಶ್ರೀ ಮಾರಿಕಾಂಬಾ ದೇವಿಯ ಗದ್ದಿಗೆ



ಶ್ರೀ ರೇಣುಕಾ ಎಲ್ಲಮ್ಮ ದೇವಿ



ಶ್ರೀ ಎಲ್ಲಮ್ಮ ದೇವಿಯ ಕಳಸ



ಶ್ರೀ ಕಾನೆಹಳ್ಳ ಚೌಡಮ್ಮ



ಹರಕೆರೆಯ ಶ್ರೀ ಈಶ್ವರ ದೇವರು



ಕೋಟೆ ಶ್ರೀ ಆಂಜನೇಯ ದೇವರು



ಕೋಟೆ ಶ್ರೀ ಆಂಜನೇಯ ದೇವರ
ರಥೋತ್ಸವ





ಸಂಶೋಧನಾ ವಿದ್ಯಾರ್ಥಿನಿಯಿಂದ ಕಾರ್ಯಕ್ಷೇತ್ರದ ವಿವರದ ಛಾಯಾಚಿತ್ರಗಳು



ಸಮುದಾಯದ ವ್ಯಕ್ತಿ ತಮ್ಮ
ಸಮುದಾಯದ ವೃತ್ತಿಯಲ್ಲಿ ತೊಡಗಿರುವುದು



ಸಂಶೋಧನಾ ವಿದ್ಯಾರ್ಥಿನಿಯು ಸಾಮಾಜಿಕ
ಕಾರ್ಯಗಳಿಗಾಗಿ ಪ್ರಶಸ್ತಿಯನ್ನು
ಸ್ವೀಕರಿಸುತ್ತಿರುವುದು



ಸಂಶೋಧನಾ ವಿದ್ಯಾರ್ಥಿನಿಯು
ವಿದ್ಯಾರ್ಥಿಗಳನ್ನುದ್ದೇಶಿಸಿ ಉಪನ್ಯಾಸ
ನೀಡುತ್ತಿರುವುದು.

